# ಸಂಧ್ಯಾವಂದನದ ಮಹತ್ವ

ನರಸಿಂಹೋಽಖಿಲಾಜ್ಞಾನ—ಮತಧ್ವಾಂತ ದಿವಾಕರಃ ।
ಜಯತ್ಯಮಿತಸದ್‌ಜ್ಞಾನ ಸುಖಶಕ್ತಿ ಪಯೋನಿಧಿಃ ॥

ಶ್ರೀ ಗುರುಭ್ಯೋ ನಮಃ । ಹರಿಃ ಓಮ್ ॥

ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ ।
ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥

ಎಂಬ ಶ್ರುತಿಯಲ್ಲಿ ಚೇತನಭಿನ್ನವಾದ ಸಮಸ್ತ ಜಡಪದಾರ್ಥಗಳೂ ದುಃಖ ರಹಿತವಾದವುಗಳು. ಜೀವರು ಮಾತ್ರವೇ ಅನಾದಿಕಾಲದಿಂದಲೂ ಅವಿದ್ಯಾ, ಕಾಮ, ಕರ್ಮ, ಜೀವಾಚ್ಛಾದಿಕಾ, ಪರಮಾಚ್ಛಾದಿಕಾ, ಲಿಂಗದೇಹ ಮತ್ತು ಭಗವಂತನ ಇಚ್ಛಾವರಣಗಳಿಂದ ಬಂಧಿಸಲ್ಪಟ್ಟಿರುವುದರಿಂದ ದುಃಖವುಳ್ಳವರು ಪ್ರಕೃತಿಬಂಧಕ್ಕೆ ಸಿಲುಕಿ ನಾನಾವಿಧ ಯೋನಿಗಳಲ್ಲಿ ಪುಟ್ಟಿ ಬಹುಕಾಲಾನಂತರ ಯಾವುದೋ ಒಂದು ಪುಣ್ಯವಿಶೇಷದಿಂದ ಮಾನುಷಜನ್ಮ ಹೊಂದಿದಾಗ ವಿವಿಧ ಸಾಂಸಾರಿಕ ಕ್ಲೇಶಗಳಿಗೆ ಸಿಕ್ಕಿ ಬಳಲಿ ಹೇಗೆ ಈ ಕ್ಲೇಶಗಳಿಂದ ನಾವು ಮುಕ್ತ-ರಾದೇವು, ಹೇಗೆ ಕೈವಲ್ಯದಾಯಕನಾದ ಶ್ರೀಹರಿಯ ಚರಣಾರವಿಂದದ್ವಂದ್ವ-ಗಳನ್ನು ಹೊಂದಿ ಸುಖಪಟ್ಟೇವು, ಅದಕ್ಕೆ ಸಾಧಕವಾದ ಋಜುವಾದ ಮಾರ್ಗ ಯಾವುದು, ಎವಮಾದಿ ಆಲೋಚನಾಪರರಾದ ಜೀವರುಗಳಿಗೆ ದುಃಖವನ್ನು ನಾಶಗೊಳಿಸಿ ಶಾಶ್ವತವಾದ ಸ್ವರೂಪಸುಖಾನುಭವರೂಪವಾದ ಮೋಕ್ಷವನ್ನು ಕೊಡತಕ್ಕ ಮಾರ್ಗವನ್ನು ತಿಳಿಸಲೋಸುಗ ಈ ಸಮಸ್ತ ಶ್ರುತಿಗಳೂ ಪ್ರವೃತ್ತ-ವಾಗುತ್ತವೆಯೆಂದು ಸೂಚಿತವಾಗುತ್ತೆ. ಗಹನವಾದ ಕಾಡಿನಲ್ಲಿ ಮಾರ್ಗ ತಪ್ಪಿ ಅಲೆದಾಡುತ್ತಾ ಸರಿಯಾದ ದಾರಿಕಾಣದೇ ತಪಿಸುತ್ತಿರುವಾಗ ಆ ಕಾಡಿನಲ್ಲೇ ಬಹುಕಾಲ ಇದ್ದು ಓಡಾಡುತ್ತಿದ್ದ ಒಬ್ಬ ಪುರುಷನು ನಮಗೆ ದರ್ಶನವಿತ್ತು ಸರಿಯಾದ ಮಾರ್ಗವಿದು, ಈ ಮಾರ್ಗವನ್ನು ಅನುಸರಿಸಿ ನಡೆದರೆ ನಿಮಗೆ ನಿಮ್ಮ ನೆಲೆಯು ದೊರಕುವುದು ಎಂತ ಬೋಧನ ಮಾಡಿದರೆ ಅದರಂತೆ ನಾವು

ನಡೆವರೆ ಹೇಗೆ ಕ್ಷೇಮವನ್ನು ಹೊಂದುತ್ತೇವೋ ಹಾಗೆಯೇ ಅನಾದಿ ಕಾಲ ದಿಂದಲೂ ಅಪೌರುಷೇಯಗಳೆಂದು ಖ್ಯಾತಗಳಾದ ಮತ್ತು ಜೀವ, ಪರಮಾತ್ಮನ ಸಂಬಂಧವನ್ನು ಅರಿತಿರತಕ್ಕ ವೇದಗಳು ನಮಗೆ ಹಿತವುಂಟುಮಾಡಲು ಯಾವ ಹಿತೋಪದೇಶಗಳನ್ನು ಮಾಡಿರುತ್ತವೋ ಅದರಂತೆ ನಾವು ನಡೆದರೆ ದುಃಖದಿಂದ ಮುಕ್ತರಾಗುವುದರಲ್ಲಿ ಸಂದೇಹವಿಲ್ಲ.

ವೇದಗಳೂ ತದನುಸಾರಿಗಳಾದ ಸ್ಮೃತಿಗಳೂ ಶ್ರೀಹರಿಯ ಆಜ್ಞಾ-ರೂಪಗಳು. ಐದನೇ ವೇದವೆಂದು ಪ್ರಸಿದ್ಧವಾದ ಶ್ರೀಮನ್ಮಹಾಭಾರತದಲ್ಲಿ "ಏಷ ನಿಷ್ಕಂಟಕಃ ಪಂಥಾಃ ಯತ್ರ ಸಂಪೂಜ್ಯತೇ ಹರಿಃ। ಕುಪಥಂ ತಂ ವಿಜಾನೀಯಾತ್ ಗೋವಿಂದರಹಿತಾಗಮಮ್ ॥" ಎಂದು ಯಾವ ಶಾಸ್ತ್ರ-ಗಳಲ್ಲಿ ಶ್ರೀಹರಿಯು ಸ್ಪಷ್ಟವಾಗಿ ಪ್ರತಿಪಾದಿಸಲ್ಪಡುತ್ತಾನೋ ಅದು ಮುಳ್ಳು ಇಲ್ಲದ ಸರಿಯಾದ ರಾಜಮಾರ್ಗವೆಂತಲೂ, ಎಲ್ಲಿ ವೇದಪ್ರತಿಪಾದ್ಯನಾದ ಶ್ರೀಹರಿಯು ಪ್ರತಿಪಾದಿಸಲ್ಪಡುವುದಿಲ್ಲವೋ ಅದು ಕೆಟ್ಟ ಮಾರ್ಗವೆಂತಲೂ ಹೇಳಲ್ಪಟ್ಟಿರುತ್ತೆ. ಆದ್ದರಿಂದಲೂ, "ವೇದೈಶ್ಚ ಸರ್ವೈರಹಮೇವವೇದ್ಯಃ"— ಸಮಸ್ತ ವೇದಗಳಿಂದಲೂ ನಾನೇ ಪ್ರತಿಪಾದಿಸಲ್ಪಡತಕ್ಕವನೆಂತಲೂ, "ನಾರಾಯಣಪರಾಃ ವೇದಾಃ" ಸಮಸ್ತ ವೇದಗಳೂ ನಾರಾಯಣನನ್ನೇ ಮುಖ್ಯವಾಗಿ ಬೋಧಿಸತಕ್ಕವುಗಳೆಂತಲೂ ಹೇಳಿರುವುದರಿಂದ ವೇದಗಳು ಸರಿಯಾದ ಮಾರ್ಗವನ್ನು ತಿಳಿಸತಕ್ಕ ಶಾಸ್ತ್ರವೆಂಬುದರಲ್ಲಿ ಆಸ್ತಿಕರೆಲ್ಲರ ಸಮ್ಮತಿ ಉಂಟಷ್ಟೆ. ಅಂದಮೇಲೆ ಅಂಥಾ ವೇದಗಳ ಯಥಾರ್ಥವಾದ ಅರ್ಥ ತಿಳಿದು ಭಗವಂತನ ಜ್ಞಾನವನ್ನು ಸಂಪಾದಿಸಿಕೊಂಡು ದೇವರನ್ನು ಉಪಾಸನಾ ಮಾಡಿದರೇನೇ ಸದ್ಗತಿ; ಇಲ್ಲವಾದರೆ ದುರ್ಗತಿಯಾಗುವುದು ಖಂಡಿತ. ವೇದಗಳನ್ನು ಓದಿ ಅರ್ಥವನ್ನು ತಿಳಿದು ಉಪಾಸನಾ ಮಾಡುವ ಅಧಿಕಾರ "ತ್ರೈವರ್ಣಿಕಾನಾಂ ವೇದೋಕ್ತೇ ಸಮ್ಯಕ್‌ಭಕ್ತಿಮತಾಂ ಹರೌ" ಎಂಬ ಪ್ರಮಾಣಾನುಸಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ವರ್ಣ ದವರಿಗೆ ಮಾತ್ರ ಉಂಟು. ಇತರರಿಗೆ ಇಲ್ಲ. ಇತರರು, ಬ್ರಾಹ್ಮಣರು ಉತ್ತಮ ವರ್ಣದವರನ್ನು ಉದ್ದೇಶಿಸಿ ಹೇಳುತ್ತಿರುವ ಪುರಾಣೇತಿಹಾಸಗಳನ್ನು ಕೇಳಿ ಯಥಾಯೋಗ್ಯವಾಗಿ ಪರಮಾತ್ಮನ ಜ್ಞಾನವನ್ನು ಸಂಪಾದಿಸತಕ್ಕದ್ದು.

ತ್ರೈವರ್ಣಿಕರಿಗೂ ಜನ್ಮಮಾತ್ರದಿಂದ ವೇದಾಧಿಕಾರ ಬರುವುದಿಲ್ಲ. ಅವರಿಗೆ ದ್ವಿಜನ್ಮರೆಂದು ಹೆಸರು. ಮಾತೃಗರ್ಭದಿಂದ ಬರುವುದು ಒಂದನೆಯ ಜನ್ಮ. ಉಪನಯನಸಂಸ್ಕಾರರೂಪವಾದದ್ದು ಎರಡನೇ ಜನ್ಮ. ವಿಧ್ಯುಕ್ತವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಕ್ರಮವಾಗಿ ಎಂಟು, ಹನ್ನೊಂದು, ಹನ್ನೆರಡನೇ ವರ್ಷಗಳಲ್ಲಿ ಉಪನೀತರಾದನಂತರವೇ ಅಧ್ಯಯನ ಮತ್ತು ವೇದೋಕ್ತ ಕರ್ಮಾಚರಣೆ ಇವುಗಳನ್ನು ಮಾಡಲು ಅಧಿಕಾರ ಬರುತ್ತದೆ. ಉಪನಯನ ಮಾತ್ರ ಆದರೆ ಸಾಲದು; ಬ್ರಹ್ಮಚರ್ಯಾಶ್ರಮವನ್ನು ಗುರುಗಳ ಸನ್ನಿಧಾನದಲ್ಲಿದ್ದು ರಕ್ಷಿಸಿಕೊಂಡು, ಕರ್ಮಗಳಲ್ಲಿ ಅತಿಮುಖ್ಯವಾದ ಸಂಧ್ಯಾ-ವಂದನೆಯನ್ನಾದರೂ ತ್ರಿಕಾಲಗಳಲ್ಲಿ ಬಿಡದೆ ಮಾಡುತ್ತಿದ್ದರೆ ಅವನಿಗೆ ಬ್ರಾಹ್ಮಣ್ಯವಿರುತ್ತದೆ. ಆದ್ದರಿಂದ ವೇದವನ್ನೋದಲು ಅಧಿಕಾರಿಯಾಗುತ್ತಾನೆ.

ಹಣಕಾಸುಗಳ ಖರ್ಚಿಲ್ಲದೆ ಸರ್ವತ್ರದಲ್ಲಿ (ಭರತಖಂಡದಲ್ಲಿ) ಭಗವಂತನ ಉಪಾಸನಾ ಮಾಡತಕ್ಕ ಅತಿ ಸುಲಭವಾದ ಕರ್ಮವೆಂದರೆ ಸಂಧ್ಯಾವಂದನೆ. ಇನ್ನೆಲ್ಲಾ ಕರ್ಮಕ್ಕೂ ಹಣ ವ್ಯಯವಾಗಬೇಕಾಗುತ್ತದೆ. ಮತ್ತು ಇತರರ ಅಪೇಕ್ಷೆ ಬೇಕಾಗುತ್ತದೆ. ದ್ರವ್ಯಮಯ ಯಜ್ಞಕ್ಕಿಂತಲೂ ಜ್ಞಾನಮಯಯಜ್ಞ ಅತಿ ಮುಖ್ಯವಾದದ್ದು. ಸಂಧ್ಯಾವಂದನೆಯು ಬಿಂಬನಾಮಕ ಶ್ರೀಹರಿಯ ಉಪಾಸನಾರೂಪವಾದದ್ದು, ಮೋಕ್ಷಕ್ಕೆ ಕಾರಣವಾದದ್ದು. ಆದ್ದರಿಂದಲೇ ಸಂಧ್ಯಾವಂದನೆಯು ದ್ವಿಜರೆಲ್ಲರ ಮುಖ್ಯ ಕರ್ತವ್ಯಕರ್ಮವಾಗಿದೆ. ಸಂಧ್ಯಾ-ವಂದನೆಯ ಅರ್ಥ ವಿಚಾರ ಮಾಡಿದರೆ ಅದರ ಮಹತ್ವ ಮತ್ತು ಸರ್ವಶಾಸ್ತ್ರಾರ್ಥ ಗರ್ಭಿತವಾಗಿರುವಿಕೆಯು ತಿಳಿದುಬರುತ್ತದೆ. ಅದರ ಅರ್ಥ ಮುಂದೆ ವಿವರಿಸಲ್ಪ-ಡುತ್ತದೆ. ಯಾರೋ ಮನುಷ್ಯರು ಈ ಕರ್ಮವನ್ನು ವಿಧಾಯಕ ಮಾಡಿದರೆಂದು ತಿಳಿಯಬಾರದು. ಜಗತ್ತಿನಲ್ಲಿ ಸೃಷ್ಟರಾದ ದ್ವಿಜರು ಸರಿಯಾದ ಸಾಧನ-ಮಾರ್ಗವನ್ನು ಕಾಣದೆ ಎಲ್ಲರೂ ಮೂರ್ಖರಾಗಿ ವಿಕರ್ಮಸ್ಥರಾಗಿ ಅಂದರೆ ಶಾಸ್ತ್ರವಿರುದ್ಧಮಾರ್ಗವನ್ನು ಅನುಸರಿಸಿ ಕೆಡುತ್ತಿರಲಾಗಿ ದ್ವಿಜರಿಗೆ ಪಾವಿತ್ರ್ಯ-ವನ್ನುಂಟುಮಾಡಲು ಜೀವೋತ್ತಮರಾದ ಮುಖ್ಯಗುರುಗಳಾದ ಬ್ರಹ್ಮದೇವರು ಈ ಸಂಧ್ಯಾಕರ್ಮವನ್ನು ಸೃಷ್ಟಿಮಾಡಿ ವಿಧಿಸಿದರು. ಸೂರ್ಯಾಂತರ್ಗತ ಷಡ್ಗುಣೈಶ್ವರ್ಯಪೂರ್ಣನಾದ ಜ್ಞಾನಿಗಮ್ಯನಾದ ಪರಮಾತ್ಮನ ಉಪಾಸನೆಗೆ

' ಸಂಧ್ಯಾ ' ಎಂತ ಹೆಸರು. ಅಥವಾ ಸಂಧ್ಯಾಕಾಲಗಳಲ್ಲಿ ಮಾಡತಕ್ಕ ಭಗವಂತನ ಉಪಾಸನೆಗೆ ' ಸಂಧ್ಯಾ ' ಎಂತ ಹೆಸರು. ಇದಕ್ಕೆ ಪ್ರಮಾಣಗಳು ಹೀಗಿವೆ—

ಯಾವಂತೋಽಸ್ಯಾಂ ವಿಕರ್ಮಸ್ಥಾಃ ಪೃಥಿವ್ಯಾಂ ಬಾಲಿಶಾ ದ್ವಿಜಾಃ ।
ತೇಷಾಂ ಪಾವಿತ್ರ್ಯಸಿದ್ಧ್ಯರ್ಥಂ ಸಂಧ್ಯಾ ಸೃಷ್ಟಾ ಸ್ವಯಂಭುವಾ ॥
—ಶ್ರೀ ವ್ಯಾಸಃ

ಉಪಾಸ್ತಿಸ್ಸಂಧ್ಯೌ ಸೂರ್ಯಸ್ಯ ನಿಶಾಯಾಂ ದಿವಸಸ್ಯ ಚ ।
ತಾವೇವ ಸಂಧ್ಯಾಂ ತಸ್ಮಾತ್ತು ಪ್ರವದಂತಿ ಮಹರ್ಷಯಃ ।
ಸೂರ್ಯಾಂತರ್ಗತ ಭಗವ—ದ್ಧ್ಯಾನಮೇವ ಸಂಧ್ಯೇತ್ಯುಕ್ತಂ ॥
ಭವತಿ ॥ ಇತಿ ॥

ಹೀಗೆ ಬ್ರಹ್ಮದೇವರಿಂದ ಜೀವರ ಉದ್ಧಾರಕ್ಕೋಸ್ಕರ ವಿಧಿಸಲ್ಪಟ್ಟ ಸಂಧ್ಯಾ-ವಂದನೆಯನ್ನು ಎಲ್ಲಿಯವರೆಗೆ ಮಾಡುತ್ತಿರಬೇಕು ? ಅವಧಿಯೇನಾದರೂ ಉಂಟೇ ಎಂದರೆ ಪ್ರಮಾಣ ಹೀಗೆ ಹೇಳುತ್ತದೆ—

ಮೌಂಜೀಬಂಧನಮಾರಭ್ಯ ಸಾಯಂಪ್ರಾತಶ್ಚಕಾಲಯೋಃ ।
ಮಧ್ಯಾಹ್ನೇಽಪಿ ಚ ಕರ್ತವ್ಯಂ ಯಾವತ್ಪ್ರಾಣವಿಮೋಕ್ಷಣಮ್ ॥

ಉಪನಯನದಲ್ಲಿ ಮೌಂಜೀ ಕಟ್ಟಿದಾರಭ್ಯ ಪ್ರಾಣಗಳು ಈ ದೇಹವನ್ನು ಬಿಟ್ಟುಹೋಗುವ ಪರ್ಯಂತವಾಗಿ ತಪ್ಪದೇ ಪ್ರಾತಃ- ಸಾಯಂ- ಮತ್ತು ಮಧ್ಯಾಹ್ನಕಾಲಗಳಲ್ಲಿ ಸಂಧ್ಯೋಪಾಸನೆ ಮಾಡಬೇಕು. " ಪ್ರಾತಸ್ಸಂಧ್ಯಾಂ ಸನಕ್ಷತ್ರಾಂ ಉತ್ತರಾಂ ಸದಿವಾಕರಾಮ್ " ಎಂದು ಸದಾಚಾರಸ್ಮೃತಿಯಲ್ಲಿ ಹೇಳಿದಂತೆ ಬೆಳಗಿನಝಾವ ಸೂರ್ಯೋದಯಕ್ಕಿಂತ ಮುಂಚೆ ಎಂದರೆ ನಕ್ಷತ್ರಗಳು ಕಾಣಿಸುತ್ತಿರುವಾಗ ಪ್ರಾತಃಸಂಧ್ಯಾವಂದನೆಗೆ ಉತ್ತಮವಾದ ಕಾಲ. " ಉತ್ತರಾಂ " ಎಂತ ಹೇಳಿರುವುದರಿಂದ ಪ್ರಾತಃಕಾಲಾನಂತರ ಮಾಡತಕ್ಕ ಮಾಧ್ಯಾಹ್ನದ ಮತ್ತು ಸಾಯಂಕಾಲದ ಸಂಧ್ಯಾವಂದನೆಗೆ ಸೂರ್ಯ ಕಾಣಿಸುವಾಗ ಉತ್ತಮ ಕಾಲ ಎಂತ ತಿಳಿದುಬರುತ್ತದೆ. ಆದರೆ ಮಾಧ್ಯಾಹ್ನಿಕಕ್ಕೆ ಸರಿಯಾದ ಕಾಲ ಯಾವುದು ಎಂದರೆ "ಅಧ್ಯರ್ಧಯಾಮಾದಾಸಾಯಂಸಂಧ್ಯಾ-ಮಾಧ್ಯಾಹ್ನಿಕೀಷ್ಯತೇ." ಸೂರ್ಯೋದಯವಾದಮೇಲೆ ಒಂದೂವರೆ ಯಾಮಾನಂತರ ಅಂದರೆ ಹತ್ತೂವರೆ ಗಂಟೆಮೇಲೆ ಸಾಯಾಹ್ನ ಬರುವವರೆಗೂ

ಮಾಧ್ಯಾಹ್ನಿಕಸಂಧ್ಯಾಕ್ಕೆ ಕಾಲ. ಅದರ ಮಧ್ಯದಲ್ಲಿ ಹದಿನೈದನೇ ಘಳಿಗೆಯಿಂದ ಹದಿನಾರನೇ ಘಳಿಗೆಯೊಳಗೆ ಉತ್ತಮ ಕಾಲವೆಂತ ಪ್ರಮಾಣಾಂತರದಲ್ಲಿ ಹೇಳಿರುತ್ತದೆ. ಪ್ರಾತಃಕಾಲದಲ್ಲಿ ನಕ್ಷತ್ರ ಕಾಣಿಸುತ್ತಿರುವಾಗ ಅರ್ಘ್ಯಕ್ಕೆ ಉತ್ತಮಕಾಲ; ನಕ್ಷತ್ರ ಕಣ್ಣಿಗೆ ಗೋಚರಿಸದೇ ಇದ್ದು ಸೂರ್ಯದರ್ಶನ ವಾಗುವುದಕ್ಕೆ ಮುಂಚಿನ ಕಾಲ ಮಧ್ಯಮವಾದದ್ದು; ಸೂರ್ಯೋದಯ ವಾದಮೇಲೆ ಸಂಗವಕಾಲದವರೆಗೂ ಅಧಮಕಾಲವೆಂತ ತಿಳಿಯಬೇಕು. ಅದಕ್ಕೆ ಮೀರಿದರೆ ಪ್ರಾಯಶ್ಚಿತ್ತಾರ್ಘ್ಯ ಮತ್ತು ಪ್ರಾಣಾಯಾಮಾದಿಗಳನ್ನು ಮಾಡಬೇಕು. ಹೀಗೆಯೇ ಸಾಯಂಕಾಲ ಸಂಧ್ಯಾರ್ಘ್ಯಕ್ಕೂ ಮೂರು ಕಾಲ ಗಳುಂಟು. ಅವು ಹೇಗೆಂದರೆ ಸೂರ್ಯ ಅರ್ಧ ಮುಳುಗಿದ್ದು ಅರ್ಧಭಾಗ ಕಾಣಿಸುತ್ತಿರುವ ಕಾಲ ಉತ್ತಮ; ಅಸ್ತಮಾನಾನಂತರ ನಕ್ಷತ್ರೋದಯಾ-ತ್ಪೂರ್ವಕಾಲ ಮಧ್ಯಮಕಾಲ; ನಕ್ಷತ್ರದರ್ಶನವಾದ ಮೇಲೆ ಒಂದು ಮುಹೂರ್ತದವರೆವಿಗೆ ಅಧಮಕಾಲ. ಈ ವಿಷಯಗಳು ಈ ಕೆಳಗೆ ಹೇಳಿರುವ ಪ್ರಮಾಣಗಳಲ್ಲಿ ಕಾಣುತ್ತವೆ :

ಉತ್ತಮಾ ತಾರಕೋಪೇತಾ ಮಧ್ಯಮಾ ಲುಪ್ತತಾರಕಾ ।
ಅಧಮಾಸೂರ್ಯಸಹಿತಾ ಪ್ರಾತಸ್ಸಂಧ್ಯಾ ತ್ರಿಧಾಮತಾ ॥
ಉತ್ತಮಾ ಸೂರ್ಯಸಹಿತಾ ಮಧ್ಯಮಾಸ್ತಮಿತೇ ರವೌ ।
ಅಧಮಾ ತಾರಕೋಪೇತಾ ಸಾಯಂಸಂಧ್ಯಾ ತ್ರಿಧಾಮತಾ ॥ ಇತಿ—

ಈ ಸಂಧ್ಯಾವಂದನೆ ಕರ್ಮದಲ್ಲಿ ಅರ್ಘ್ಯಪ್ರಧಾನ, ಗಾಯಿತ್ರೀ ಜಪ ಮತ್ತು ಉಪಸ್ಥಾನವೆಂತ ಮೂರು ಭಾಗಗಳುಂಟು. ಅಲ್ಲದೆ ಆಚಮನ, ಸಂಕಲ್ಪ, ಪ್ರಾಣಾಯಾಮಾದಿಗಳೆಂತ ಕೆಲವು ಕ್ರಿಯಗಳೂ ಉಂಟು. ಅವುಗಳ ಪ್ರಯೋಜನವನ್ನೂ ಮೂರು ಭಾಗಗಳನ್ನಾಗಿ ಏಕೆ ಮಾಡಿರುತ್ತಾರೆ ಎಂಬು ದನ್ನೂ ಮುಂದೆ ಆಯಾ ಪ್ರಕರಣಗಳನ್ನು ವಿವರಿಸುವಾಗ ತಿಳಿಸುತ್ತೇನೆ. ಅಂತೂ ಈ ಕರ್ಮ ಅತಿ ಮುಖ್ಯವಾದದ್ದು. ಪ್ರತಿನಿತ್ಯ ಪ್ರಥಮತಃ ಸ್ನಾನವಾದ ಕೂಡಲೇ ಈ ಸಂಧ್ಯಾವಂದನೆ ಮಾಡಿ ನಂತರ ಇತರ ಜಪತಪಗಳನ್ನೂ ಪೂಜಾದಿ ಕರ್ಮಗಳನ್ನೂ ಮಾಡಬೇಕು. ಸಂಧ್ಯಾವಿಹೀನನಾದವನು ಸರ್ವ ಕರ್ಮಗಳಲ್ಲಿಯೂ ನಿಂದಿತನಾಗುತ್ತಾನೆ. ಅವನಿಗೆ ನಿತ್ಯವೈಲಿಗೆ ಅಂದರೆ ಆಶೌಚವೆಂತ.

ಸಂಧ್ಯಾವಿಹೀನೋಽಶುಚಿರ್ನಿ – ತ್ಯಂ ಅನರ್ಹಸ್ಸರ್ವಕರ್ಮಸು ।
ಯದನ್ಯತ್ಕುರುತೇ ಕರ್ಮ ನ ತಸ್ಯ ಫಲಭಾಗ್ಭವೇತ್ ॥
ಎಂದು ದಕ್ಷಸ್ಮೃತಿಯಲ್ಲಿ ಹೇಳಿರುತ್ತದೆ. ಮತ್ತು,
ಯೋಽನ್ಯತ್ರ ಕುರುತೇ ಯತ್ನಂ ಧರ್ಮಕಾರ್ಯೇ ದ್ವಿಜೋತ್ತಮಃ ।
ವಿಹಾಯ ಸಂಧ್ಯಾ ಪ್ರಣತಿಂ ಸ ಯಾತಿ ನರಕಾಯುತಮ್ ॥ ಇತಿ—

ಬ್ರಾಹ್ಮಣೋತ್ತಮನಾದ ಯಾವನೇ ಆಗಲಿ ಸಂಧ್ಯೋಪಾಸನೆಯನ್ನು ಬಿಟ್ಟು ಇತರ ಧರ್ಮಕಾರ್ಯಗಳನ್ನು ಮಾಡಲು ಯತ್ನ ಮಾಡುತ್ತಾನೋ ಅವನು ಹತ್ತುಸಾವಿರ ನರಕಗಳನ್ನು ಹೊಂದುತ್ತಾನೆ. ಮತ್ತು

ಯಸ್ಸಂಧ್ಯಾಂಕಾಲತಃ ಪ್ರಾಪ್ತಾಂ ಆಲಸ್ಯಾದತಿವರ್ತತೇ ।
ಸೂರ್ಯಹತ್ಯಾಮವಾಪ್ನೋತಿ ಉಲೂಕತ್ವಮಿಯಾತ್ ಸದಾ ॥

ಯಾವನು ಕಾಲಕ್ಕೆ ಸರಿಯಾಗಿ ಸಂಧ್ಯಾವಂದನೆ ಮಾಡದೆ ಆಲಸ್ಯದಿಂದ ಅತಿಕ್ರಮಿಸಿ ಇರುತ್ತಾನೋ ಅವನು ಸೂರ್ಯನನ್ನು ಕೊಂದ ಪಾಪಕ್ಕೆ ಗುರಿಯಾಗಿ ಜನ್ಮಾಂತರದಲ್ಲಿ ಸದಾ ಗೂಬೆಯಾಗಿರುತ್ತಾನೆ. ಇಷ್ಟೇ ಅಲ್ಲದೆ ಇನ್ನೂ ಅನೇಕ ಅನರ್ಥಗಳು ಆಗುತ್ತವೆಂತ ಧರ್ಮಶಾಸ್ತ್ರಗಳಲ್ಲಿ ವಚನಗಳಿವೆ ಲೇಖನ ವಿಸ್ತರಭಯದಿಂದ ಇಲ್ಲಿ ಅವುಗಳನ್ನು ಉದಾಹರಿಸಲಿಲ್ಲ. ಸಂಧ್ಯಾ ಬಿಟ್ಟರೆ ನರಕಾದ್ಯನರ್ಥಗಳಾಗುತ್ತವೆ. ಆದ್ದರಿಂದ ಇದು ಮುಖ್ಯಕರ್ಮವೆಂತ ಭಾವಿಸಿ ಮೊದಲು ಇದನ್ನು ಮಾಡಬೇಕೆಂತಲೇ ಅರ್ಥವಲ್ಲ; ಮತ್ತೊಂದು ಕಾರಣವೂ ಉಂಟು. ಗುಣಪೂರ್ಣನಾದ ಬ್ರಹ್ಮನನ್ನು ಉಪಾಸನಾ ಮಾಡಿದ-ರೇನೇ ಮೋಕ್ಷವಾಗತಕ್ಕದ್ದು ಎಂದು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಸ್ಪಷ್ಟವಾಗಿ ನಿರೂಪಿಸಿರುತ್ತದೆ.

ಸಂಧ್ಯಾವಂದನೆಯಾದರೋ ಬ್ರಹ್ಮನ ಉಪಾಸನಾರೂಪವಾದ ಅತಿ ಮುಖ್ಯಕರ್ಮ ಎಂದು ವೇದ ಹೇಳುತ್ತದೆ.

"ಅಹರಹಃ ಸಂಧ್ಯಾಮುಪಾಸೀತ", "ಯಃ ಸಂಧ್ಯಾಮುಪಾಸತೇ", "ಬ್ರಹ್ಮೈವ ತದುಪಾಸತೇ ॥" ಇತಿ ಶ್ರುತೇಃ ॥ ಆದ್ದರಿಂದ ಬ್ರಹ್ಮಶಬ್ದವಾಚ್ಯನಾದ ವಿಷ್ಣುವಿನ ಉಪಾಸನಾ ಮಾಡಿದಂತಾಗುತ್ತದೆ. ವಿಷ್ಣುವಿನ ಉಪಾಸನಾ ಮಾಡುವುದರಿಂದ ಅವನ ಪ್ರಸಾದದಿಂದ ಮೋಕ್ಷವಾಗುತ್ತದೆ. ಆದಕಾರಣ

ಸಂಧ್ಯಾವಂದನೆಯು ಮುಮುಕ್ಷುಗಳಾದ ದ್ವಿಜರಿಂದ ಅನುಷ್ಠೇಯವಾದ ಕರ್ಮಗಳಲ್ಲಿ ಅತಿ ಮುಖ್ಯವಾದದ್ದು ಎಂದು ತಿಳಿಯಲ್ಪಡಬೇಕು.

ಉದ್ಯಂತಮಸ್ತಂ ಯಂ ತಮಾದಿತ್ಯಮಭಿಧ್ಯಾಯನ್ ಕುರ್ವನ್
ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇ।
ಅಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವಸನ್ ಬ್ರಹ್ಮಾಪ್ನೋತಿ॥
ಯ ಏವಂ ವೇದ॥

ಎಂಬ ತೈತ್ತಿರೀಯ ಶ್ರುತಿಯು ಉದಯಿಸುತ್ತಿರುವ ಅಸ್ತಮಾನ ಹೊಂದುತ್ತಲಿರುವ ಸೂರ್ಯನಿಗೆ ಅಭಿಮುಖನಾಗಿ ಸಂಧ್ಯಾಕರ್ಮ ಮಾಡುವ ಬ್ರಾಹ್ಮಣನು ಈ ಎದುರಿನಲ್ಲಿ ಕಾಣುತ್ತಿರುವ ಸೂರ್ಯಮಂಡಲಾಂತರ್ಗತನಾದವನು ಗುಣಪೂರ್ಣನಾದ ನಾರಾಯಣನು ಎಂದು ತಿಳಿದವನಾಗಿ ಸಮಸ್ತವಾದ ಐಹಿಕ ಮತ್ತು ಆಮುಷ್ಮಿಕವಾದ ಫಲಗಳನ್ನು ಅನುಭವಿಸುತ್ತಾನೆ. ಅಷ್ಟೇ ಅಲ್ಲ, ತನ್ನ ಯೋಗ್ಯತಾನುಗುಣವಾಗಿ ಪೂರ್ಣನಾಗಿ ಗುಣಪೂರ್ಣನಾದ ಬ್ರಹ್ಮಶಬ್ದವಾಚ್ಯನಾದ ನಾರಾಯಣನನ್ನು ಹೊಂದೇಹೊಂದುತ್ತಾನೆ. ಇವರಲ್ಲಿ ಸಂಶಯವಿಲ್ಲವೆಂದು ಹೇಳುವುದರಿಂದ ಸರಿಯಾಗಿ ಸಂಧ್ಯೋಪಾಸನೆ ಮಾಡಿದರೆ ಬ್ರಹ್ಮಪ್ರಾಪ್ತಿರೂಪವಾದ ಮೋಕ್ಷವಾಗುತ್ತದೆಂದು ಸಿದ್ಧವಾಯಿತಷ್ಟೆ. ನಾವು ಒಂದು ಊರಿಗೆ ಹೊರಟು ಸುರಕ್ಷಿತವಾಗಿ ತಲುಪಬೇಕಾದರೆ ಮಾರ್ಗದಲ್ಲಿ ಬರತಕ್ಕ ಅಡ್ಡಹಾದಿಗಳು ಯಾವುವು, ಸರಿಯಾದ ದಾರಿ ಯಾವುದು, ಎಂದು ತಿಳಿದಿರಬೇಕಾದ್ದು ಹೇಗೆ ಅವಶ್ಯಕವೋ, ಮತ್ತು ರೋಗಿಯಾದವನು ವೈದ್ಯರಲ್ಲಿ ಔಷಧವನ್ನು ತೆಗೆದುಕೊಂಡು ಅದರ ಬಗ್ಗೆ ತಾನು ಮಾಡಬೇಕಾದ ಪಥ್ಯ ಮತ್ತು ಅನುಪಾನಗಳನ್ನು ಸರಿಯಾಗಿ ತಿಳಿಯುವುದು ಹೇಗೆ ಕರ್ತವ್ಯವೋ, ಅದರಂತೆಯೇ ಸಂಧ್ಯೋಪಾಸನೆ ಮಾಡುವವನೂ ಕೂಡ ತಾನು ಹೇಗೆ ಇದ್ದರೆ ಸಂಧ್ಯಾವಂದನೆಗೆ ಅಧಿಕಾರ ಬರುತ್ತದೆ ಎಂಬುದನ್ನೂ ಯಾವ ನಿಷಿದ್ಧ ಕರ್ಮಾಚರಣೆಗಳಿಂದ ಸಂಧ್ಯೋಪಾಸನೆಯ ಅಧಿಕಾರ ನಷ್ಟವಾಗುತ್ತದೆಂಬುದನ್ನೂ ಚೆನ್ನಾಗಿ ತಿಳಿದು ನಿಷಿದ್ಧಕರ್ಮಗಳ ಪರಿತ್ಯಾಗಪೂರ್ವಕ ವಿಹಿತಕರ್ಮಾಚರಣೆಯನ್ನು ಮಾಡಿದರೆ ಈ ಸಂಧ್ಯೋಪಾಸನೆಯೆಂಬ ಮುಕ್ತಿಪ್ರಥಮ ಸೋಪಾನವನ್ನು ಹತ್ತಲು ಅರ್ಹನಾಗುತ್ತಾನೆ. ಇಲ್ಲವಾದರೆ ಎಲ್ಲೋ

ಅನ್ಯತ್ರ ದೃಷ್ಟಿ ಇಟ್ಟುಕೊಂಡು ಸೋಪಾನವೇರಲು ಪ್ರಯತ್ನಪಟ್ಟವನು ಕಾಲುಜಾರಿ ಕೆಳಗೆ ಬೀಳುವಂತೆ ಸಾಧನಮಾರ್ಗ ತಪ್ಪಿ ಶ್ರೀಹರಿ ಕೊಟ್ಟ ಅಧಿಕಾರದಿಂದ ಭ್ರಷ್ಟನಾಗಿ ನರಕಾದಿಗಳಲ್ಲಿ ಬೀಳುವುದು ನಿಜ. ಆದ್ದರಿಂದ ಇಲ್ಲಿ ಸ್ವಲ್ಪ ಅಧಿಕಾರ್ಯಾದಿಗಳ ವಿಚಾರ ಮಾಡುವುದು ಅತ್ಯವಶ್ಯಕವಾಗಿರುತ್ತದೆ. ಪ್ರಥಮತಃ ಸಂಧ್ಯಾದಿ ವೇದೋಕ್ತಕ್ರಿಯಾನುಷ್ಠಾನ ಮಾಡಲು ದ್ವಿಜಶಬ್ದ-ವಾಚ್ಯರಾದ ಮೂರು ವರ್ಣದವರು (ಬ್ರಹ್ಮ ಕ್ಷತ್ರಿಯ ವೈಶ್ಯ) ಅರ್ಹರೆಂದು ಶಾಸ್ತ್ರದಲ್ಲಿ ಉಕ್ತಿಯುಂಟಷ್ಟೆ. ಆದರೆ ಯಾರೇ ಆಗಲೀ ಮೇಲ್ಕಂಡ ವರ್ಣಗಳಲ್ಲಿ ಹುಟ್ಟಿದ ಮಾತ್ರಕ್ಕೆ ಅವರು ಅಧಿಕಾರಿಗಳಾಗುವುದಿಲ್ಲ. ಹುಟ್ಟಿದವನು ಮತ್ತು ಅವನ ತಂದೆತಾಯಿಗಳು ವ್ರಾತ್ಯರಾಗದಿದ್ದರೆ ಸಂಧ್ಯಾವಂದನೆಗೆ ಸರಿಯಾದ ಅಧಿಕಾರಿಯಾಗುತ್ತಾನೆ. "ವ್ರಾತ್ಯಃ ಸಂಸ್ಕಾರಹೀನಸ್ಸ್ಯಾತ್" ಎಂಬ ಪ್ರಮಾಣಾನುಸಾರ ಷೋಡಶಸಂಸ್ಕಾರರಹಿತನಾದವನು ವ್ರಾತ್ಯನಾಗುತ್ತಾನೆ ಎಂತ ವಿದಿತವಾಯಿತು. ಆದ್ದರಿಂದ ನಮ್ಮನ್ನು ಪಡೆದ ತಂದೆಗೆ ಷೋಡಶಸಂಸ್ಕಾರಗಳು ಸರಿಯಾಗಿ ನಡೆದಿರಬೇಕು. ಅಂಥವನಿಂದ ನಮಗೆ ಜನ್ಮ ದೊರೆತರೆ ನಾವು ಸರಿಯಾದ ಅಧಿಕಾರಿಗಳಾಗುತ್ತೇವೆ. "ನಮ್ಮಲ್ಲಿ ಪದ್ಧತಿ ಇಲ್ಲ, ಆದ್ದರಿಂದ ಸೀಮಂತ, ನಾಮಕರಣ ಸಂಸ್ಕಾರ ಮಾಡುವುದಿಲ್ಲ" ಎಂತ ಕೆಲವರು ವೇದೋಕ್ತ ಸಂಸ್ಕಾರಗಳನ್ನು ಈ ಕಾಲದಲ್ಲಿ ತ್ಯಜಿಸಿರುತ್ತಾರೆ. ಹೀಗೆ ಮಾಡಿದರೆ ಇನ್ನು ಕೆಲವು ಕಾಲದ ಮೇಲೆ ಉಪನಯನಾದಿ ಸಂಸ್ಕಾರಗಳೂ ಪದ್ಧತಿ ಇಲ್ಲವೆಂತ ನಾಶವಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಅಂಧಶ್ರದ್ಧೆಯನ್ನು ಬಿಟ್ಟು ಈ ಕೆಳಗೆ ಉದಾಹರಿಸಿರುವ ಷೋಡಶಸಂಸ್ಕಾರಗಳನ್ನೂ ದ್ವಿಜರು ಆಚರಿಸಿದರೇನೇ ಸಂಧ್ಯೋಪಾಸನೆಗೆ ಅಧಿಕಾರಿಗಳಾಗುತ್ತಾರೆ ಇಲ್ಲವಾದರೆ ಇಲ್ಲ.

ಗರ್ಭಾದಾನಂ ಪುಂಸವನಂ ಸೀಮಂತೋ ವೈಷ್ಣವೋ ಬಲಿಃ ।
ಜಾತಕಂ ನಾಮನಿಷ್ಕ್ರಾಂತಂ ಅನ್ನಾಶಂ ಚೌಲಮೇವ ಚ ॥ ೧ ॥
ಉಪವೀತಿಃ ಮಹಾನಾಮ್ನೀ ಮಹಾವ್ರತಮತಃ ಪರಮ್ ।
ಉಪನಿಷಚ್ಚ ಗೋದಾನಂ ಸಮಾವರ್ತನಮೇವ ಚ ॥ ೨ ॥
ವಿವಾಹಶ್ಚೇವಮಿತ್ಯೇತಾಃ ವಿಪ್ರಾಣಾಂ ಷೋಡಶಕ್ರಿಯಾಃ ॥

೧. ಗರ್ಭಾಧಾನ, ೨. ಪುಂಸವನ, ೩. ಸೀಮಂತ, ೪. ವಿಷ್ಣುಬಲಿ, ೫. ಜಾತಕರ್ಮ, ೬. ನಾಮಕರಣ, ೭. ನಿಷ್ಕ್ರಾಂತ (ಶಿಶುವನ್ನು ಗುಡಿಗೆ ಕರೆದುಕೊಂಡು ಹೋಗುವುದು ಮತ್ತು ಸೂರ್ಯದರ್ಶನ ಮಾಡಿಸುವುದು), ೮. ಅನ್ನಪ್ರಾಶನ, ೯. ಚೌಲ, ೧೦. ಉಪನಯನ, ೧೧. ಮಹಾನಾಮ್ನೀ ವ್ರತ, ೧೨. ಮಹಾವ್ರತ, ೧೩. ಉಪನಿಷದ್ವ್ರತ, ೧೪. ಗೋದಾನಿಕ ವ್ರತ, ೧೫. ಸಮಾವರ್ತನ ಮತ್ತು ೧೬. ವಿವಾಹ — ಹೀಗೆ ವಿಪ್ರಸಂಸ್ಕಾರಗಳು ವಿಧಿಸಲ್ಪಟ್ಟಿರುತ್ತವೆ.

ಇವುಗಳಲ್ಲಿ ಈಗ ಎಷ್ಟು ಸಂಸ್ಕಾರಗಳು ನಡೆಯುತ್ತಿವೆ, ಎಷ್ಟು ನಡೆಯುತ್ತಿಲ್ಲ, ಎಂಬುದನ್ನು ವಾಚಕರೇ ಊಹಿಸಿಕೊಳ್ಳತಕ್ಕದ್ದು. ಇನ್ನು ವಿಧ್ಯುಕ್ತ-ರೀತಿಯಿಂದ ಯೋಗ್ಯರ ವಂಶದಲ್ಲಿ ಜನನವಾದರೆ ಸಾಲದು. ಜಾತಕರ್ಮಾದಿ ಉಪನಯನಾಂತ ಸಂಸ್ಕಾರಗಳಾದ ಮೇಲೆ ಜಾತಕನು ಸಂಧ್ಯೋಪಾಸನೆಗೆ ಅರ್ಹನಾಗುತ್ತಾನೆ. ಸಂಸ್ಕಾರ ನಡೆದರೆ ಸಾಲದು, ವಟುವು ವಿಕರ್ಮಸ್ಥನಾಗಬಾರದು, ಪತಿತನಾಗಬಾರದು, ಪಾಷಂಡಿಯಾಗಬಾರದು. ಏಕೆಂದರೆ ವಿಕರ್ಮಸ್ಥರು, ಪತಿತರು, ಪಾಷಂಡಿಗಳು ಸದಾ ಅಶುಚಿಗಳೆಂತಲೂ ಸ್ಪರ್ಶ ಮತ್ತು ಸಂಭಾಷಣೆಗಳಿಗೆ ಅನರ್ಹರೆಂತಲೂ ಶಾಸ್ತ್ರದಲ್ಲಿ ಉಕ್ತವಾಗಿರುವುದರಿಂದ ಮೇಲ್ಕಂಡ ದೋಷದೂರರಾಗಿರುವವರೇ ಸಂಧ್ಯಾದಿ ವೇದೋಕ್ತ-ಕರ್ಮಾನುಷ್ಠಾನಕ್ಕೆ ಅಧಿಕಾರಿಗಳೆಂತ ಸ್ಪಷ್ಟವಾಗುತ್ತದೆ. ಯಥಾಕ್ರಮವಾಗಿ ವಿಕರ್ಮಸ್ಥಾದಿಗಳ ಲಕ್ಷಣವು ಪದ್ಮಪುರಾಣ ಉತ್ತರಖಂಡ ೨೬೨ನೇ ಅಧ್ಯಾಯದಲ್ಲಿ ಹೀಗೆ ನಿರೂಪಿಸಲ್ಪಟ್ಟಿರುತ್ತೆ. "ಶಿಖೋಪವೀತತ್ಯಾಗೀ ಚ ವಿಕರ್ಮಸ್ಥ ಇತೀರಿತಃ" ತಲೆಯಲ್ಲಿ ಶಿಖಾವನ್ನು ಕತ್ತರಿಸಿಕೊಂಡವನೂ, ಯಜ್ಞೋಪವೀತವನ್ನು ತೆಗೆದುಹಾಕಿರುವವನೂ ವಿಕರ್ಮಸ್ಥನೆಂದು ಕರೆಯಲ್ಪಡುತ್ತಾನೆ. ಅವನೂ ಅನಧಿಕಾರಿ. "ಮಹಾಪಾಪೋಪಪಾಪಾಭ್ಯಾಂ ಯುಕ್ತಃ ಪತಿತ ಉಚ್ಯತೇ" ಬ್ರಹ್ಮಹತ್ಯಾ, ಸ್ವರ್ಣಸ್ತೇಯ, ಸುರಾಪಾನ. ಗುರುಪತ್ನೀಗಮನ, ಇಂಥಾ ಪಾಪಗಳನ್ನು ಮಾಡಿದವರ ಸಂಗಡ ವಾಸ ಮಾಡೋಣ — ಇವೇ ಮೊದಲಾದ ಮಹಾಪಾಪ ಮಾಡಿದವರೂ ಪರಹಿಂಸಾರತರಾಗಿರೋಣ, ಅಭಕ್ಷ್ಯಭಕ್ಷಣ ಅಂದರೆ ತಮಗೆ ವಿಹಿತಗಳಲ್ಲದೇ ಇರುವ ಈರುಳ್ಳಿ, ಬೆಳ್ಳುಳ್ಳಿ,

ಮೂಲಂಗಿ, ಕೋಸು, ಬದನೇಕಾಯಿ ಮುಂತಾದ ನಿಷಿದ್ಧಪದಾರ್ಥಗಳನ್ನು ತಿನ್ನುವುದೂ, ಸಮುದ್ರಯಾನ, ಭರತಖಂಡ ಬಿಟ್ಟು ಮ್ಲೇಂಛದೇಶಗಳಿಗೆ ಗಮನಮಾಡೋಣ ಮತ್ತು ಅಲ್ಲೇ ವಾಸಮಾಡೋಣ ಏನಮಾದಿ ಉಪ-ಪಾಪಗಳಿಂದಲೂ ಕೂಡಿದವರು ಪತಿತರೆನಿಸಿಕೊಳ್ಳುತ್ತಾರೆ. ಇವರೂ ಕರ್ಮಾ-ನಧಿಕಾರಿಗಳು. ಮೇಲ್ಕಂಡ ಈ ವಿಷಯಗಳು ಅನೇಕ ಧರ್ಮಶಾಸ್ತ್ರಗಳಲ್ಲಿ ಸಪ್ರಮಾಣವಾಗಿ ಉದಾಹರಿಸಲ್ಪಟ್ಟಿರುತ್ತವೆ. ಅವುಗಳನ್ನೆಲ್ಲಾ ಇಲ್ಲಿ ಉದಾ-ಹರಿಸುವುದು ಲೇಖನವಿಸ್ತಾರಭಯದಿಂದ ಅನಾವಶ್ಯಕವೆಂದು ಬಿಟ್ಟಿರುತ್ತದೆ. ಆದಾಗ್ಯೂ ಅಭಕ್ಷ್ಯಭಕ್ಷಣ ಮಾಡಿದರೆ ಪುನಃ ಉಪನಯನ ಸಂಸ್ಕಾರ ಮಾಡಿ ಕೊಂಡರೇ ಶುದ್ಧನಾಗುತ್ತಾನೆ, ಇಲ್ಲವಾದರೆ ಇಲ್ಲ ಎಂಬುದಕ್ಕೆ ಶಾತಾತಪರು ಪಾರಿಜಾತದಲ್ಲಿ ಹೇಳಿರುವ ಈ ವಚನಗಳು ಪ್ರಮಾಣವಾಗಿವೆ :

ಲಶುನಂ ಗೃಂಜನಂ ಜಗ್ಧ್ವಾ ಪಲಾಂಡುಂ ಚ ತಥಾಶುನಃ ।
ಉಷ್ಟ್ರಮಾನುಷಕೇಭಾಶ್ವ—ರಾಸಭೀಕ್ಷೀರಭೋಜನಾತ್ ॥
ಉಪಾಯನಂ ಪುನಃ ಕುರ್ಯಾತ್—ತಪ್ತಕೃಚ್ಛ್ರಂ ಚರೇನ್ಮುಹುಃ ॥

ಬೆಳ್ಳುಳ್ಳಿ, ಕೆಂಪು ಮತ್ತು ಬಿಳೀಬಣ್ಣದ ಈರುಳ್ಳಿಯನ್ನು ತಿಂದರಾಗಲೀ. ಹಾಗೂ ನಾಯಿಮಾನುಷಕ (ಅಂದರೆ ಸ್ತನ್ಯ) ಆನೆ, ಕುದುರೆ, ಕತ್ತೆ ಇವುಗಳ ಹಾಲನ್ನು ಪ್ರಾಶನ ಮಾಡುವುದರಿಂದಾಗಲೀ ಪತಿತನಾದವನು ತಪ್ತಕೃಚ್ಛ್ರ ವೆಂಬ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಮತ್ತು ಪುನಃ ಉಪನಯನ ವನ್ನು ಮಾಡಿಕೊಳ್ಳಬೇಕು ಎಂತ ಅರ್ಥ. ಆದುದರಿಂದ ಜಿಹ್ವಾಚಾಪಲ್ಯಕ್ಕೆ ಅಧೀನರಾಗಿ ಬ್ರಾಹ್ಮಣ್ಯವನ್ನು ಕಳೆದುಕೊಳ್ಳಬಾರದು. ಧರ್ಮರಕ್ಷಣೆಯು ವಿಷಯದಲ್ಲಿ ಬಹಳ ಜಾಗರೂಕತೆಯಿಂದ ವರ್ತಿಸಬೇಕು. ದ್ವಿಜರ ಜಾತಿಯಲ್ಲೇ ಹುಟ್ಟಿದ್ದರೂ ಯಾರು ಜಗತ್ಸತ್ಯತ್ವವನ್ನೂ, ಬ್ರಹ್ಮನಿಗೆ ಗುಣಪೂರ್ಣತ್ವ-ವನ್ನೂ, ಜೀವೇಶ್ವರಭೇದವನ್ನೂ, ಜೀವರು ಬ್ರಹ್ಮನ ಅನುಚರರೆಂಬುದನ್ನೂ ಒಪ್ಪಿಕೊಳ್ಳುವುದಿಲ್ಲವೋ ಅಂಥವರಿಗೆ “ ಮತ್ತಸ್ತ್ವಂ ಉತ್ಕೃಷ್ಟಃ” ನನಗಿಂತ ನೀನು ಉತ್ತಮನಾಗಿರುತ್ತಿ ಎಂಬ ಅನುಸಂಧಾನಪೂರ್ವಕ ಮಾಡತಕ್ಕ ವಂದನಾರೂಪವಾದ ಸಂಧ್ಯಾವಂದನ ಮತ್ತು ದೇವರಪೂಜಾದಿ ಕರ್ಮಾನು-ಷ್ಠಾನವೇ ಕೂಡುವುದಿಲ್ಲ. ಇವರು ಪಾಷಂಡಿಗಳೆಂತ ಕರೆಸಿಕೊಳ್ಳಲ್ಪಡುತ್ತಾರೆ.

ಮತ್ತು ಯಾರು ಜಡವಾದ ಪ್ರಕೃತಿಗೆ ಸರ್ವೋತ್ತಮತ್ವವನ್ನು ಹೇಳಿ ಪುರುಷನಾದ ದೇವನಿಗೆ ಪ್ರಕೃತ್ಯಧೀನತೆಯನ್ನು ಹೇಳುತ್ತಾರೋ ಅವರನ್ನೂ ಪಾಷಂಡಿಗಳೆಂತ ತಿಳಿಯಬೇಕು. ಅವರಿಗೂ ಸಂಧ್ಯಾವಂದನಾಧಿಕಾರವಿಲ್ಲ. ದೇವರಿಗಿಂತ ಜೀವರಿಗೆ ಗುಣ ಹೆಚ್ಚು ಎನ್ನುವವರನ್ನೂ, ವೇದಾದಿಗಳು ಅಪ್ರಾಮಾಣಿಕವೆನ್ನುವವರನ್ನೂ, ನಾರಾಯಣನಿಗಿಂತಲೂ ರುದ್ರಾದಿ ಅನ್ಯದೇವತೆಗಳು ಉತ್ತಮರೆಂತಲೂ, ಅಥವಾ ಸಮರೆಂತಲೂ ಹೇಳುವವರನ್ನೂ ಪಾಷಂಡಿಗಳೆಂತಲೇ ಶಾಸ್ತ್ರವು ಕರೆದಿರುತ್ತದೆ. ಆದ್ದರಿಂದ ಅವರೂ ಅನಧಿಕಾರಿಗಳು. ಪಾಷಂಡಿಗಳು ಯಾರು, ಅವರು ಹೇಗಿರುತ್ತಾರೆ, ಅವರ ಆಚರಣೆ ಎಂತಹುದು, ಇವೇ ಮೊದಲಾದ ವಿಷಯಗಳನ್ನು ಶ್ರೀ ಮಹಾರುದ್ರದೇವರು ತಮ್ಮ ಪತ್ನಿಯಾದ ಉಮಾದೇವಿಯನ್ನು ಉದ್ದೇಶಿಸಿ ಹೇಳಿದ ಕೆಲವು ಶ್ಲೋಕಗಳು ಇಲ್ಲಿವೆ :

ಯೇಽನ್ಯಂ ದೇವಂ ಪರತ್ವೇನ ವದಂತ್ಯಜ್ಞಾನಮೋಹಿತಾಃ ।
ನಾರಾಯಣಾಜ್ಜಗನ್ನಾಥಾತ್ ತೇ ವೈ ಪಾಷಂಡಿನಸ್ತಥಾ ॥ ೧ ॥
ಕಪಾಲಭಸ್ಮಾಸ್ಥಿಧರಾ ಯೇ ಹ್ಯವೈದಿಕಲಿಂಗಿನಃ ।
ಋತೇ ವನಸ್ಥಾಶ್ರಮಾಚ್ಚ ಜಟಾವಲ್ಕಲಧಾರಿಣಃ ॥ ೨ ॥
ಅವೈದಿಕಕ್ರಿಯೋಪೇತಾಃ ತೇ ವೈ ಪಾಷಂಡಿನಸ್ತಥಾ ।
ಶಂಖಚಕ್ರೋರ್ಧ್ವಪುಂಡ್ರಾದಿ—ಚಿಹ್ನೈಃ ಪ್ರಿಯತಮೈರ್ಹರೇಃ ॥ ೩ ॥
ರಹಿತಾ ಯೇ ದ್ವಿಜಾ ದೇವಿ ತೇ ವೈ ಪಾಷಂಡಿನಃ ಸ್ಮೃತಾಃ ।
ಶ್ರುತಿಸ್ಮೃತ್ಯುದಿತಾಚಾರಂ ಯಸ್ತು ನಾಚರತಿ ದ್ವಿಜಃ ॥ ೪ ॥
ಸ ಪಾಷಂಡೀತಿ ವಿಜ್ಞೇಯಃ ಸರ್ವಲೋಕೇಷು ಗರ್ಹಿತಃ ।
ವಿನಾ ವೈ ಭಗವತ್ಪ್ರೀತ್ಯಾ ತೇ ವೈ ಪಾಷಂಡಿನಃ ಸ್ಮೃತಾಃ ॥ ೫ ॥
ಸಮಸ್ತಯಜ್ಞಭೋಕ್ತಾರಂ ವಿಷ್ಣುಂ ಬ್ರಹ್ಮಣ್ಯದೈವತಮ್ ।
ಉದ್ದಿಶ್ಯ ದೇವತಾ ಏವ ಜುಹೋತಿ ಚ ದದಾತಿ ಚ ॥ ೬ ॥
ಸ ಪಾಷಂಡೀತಿ ವಿಜ್ಞೇಯಃ ಸ್ವತಂತ್ರಶ್ಚಾಪಿ ಕರ್ಮಸು ।
ಸ್ವಾತಂತ್ರ್ಯಾತ್ಕುರುತೇ ಯಸ್ತು ಕರ್ಮ ವೇದೋದಿತಂ ಮಹತ್ ॥ ೭ ॥
ಯಸ್ತು ನಾರಾಯಣಂ ದೇವಂ ಬ್ರಹ್ಮರುದ್ರಾದಿ ದೈವತೈಃ ।
ಸಮತ್ವೇನೈವ ವೀಕ್ಷ್ಯೇತ ಸ ಪಾಷಂಡೀ ಭವೇತ್ಸದಾ ॥ ೮ ॥

ಅವಸ್ಥಾತ್ರಿತಯೇ ಯಸ್ತು ಮನೋವಾಕ್ಕಾಯಕರ್ಮಭಿಃ ।
ವಾಸುದೇವಂ ನ ಜಾನಾತಿ ಸ ಪಾಷಂಡೀ ಭವೇದ್ದ್ವಿಜಃ ॥ ೯ ॥
ಕಿಮತ್ರಬಹುನೋಕ್ತೇನ ಬ್ರಾಹ್ಮಣಾ ಯೇಪ್ಯವೈಷ್ಣವಾಃ ।
ನ ಸ್ಪ್ರಷ್ಟವ್ಯಾ ನ ವಕ್ತವ್ಯಾ ನ ದ್ರಷ್ಟವ್ಯಾಃ ಕದಾಚನ ॥ ೧೦ ॥
— ಪದ್ಮಪುರಾಣ, ಉತ್ತರಖಂಡ, ಅಧ್ಯಾಯ ೨೬೨

ಏವಮಾದಿ ವಚನಗಳ ತಾತ್ಪರ್ಯವೇನೆಂದರೆ—ಅಜ್ಞಾನಮೋಹಿತರಾಗಿ ಜಗತ್ಪತಿಯಾದ ನಾರಾಯಣನನ್ನು ಬಿಟ್ಟು ಅನ್ಯದೇವರನ್ನು ಸರ್ವೋತ್ತಮನೆಂದು ಹೇಳುವವರೂ, ವೇದೋಕ್ತಗಳಲ್ಲದ ಕಪಾಲ, ಬೂದಿ, ಮೂಳೆ, ಇವುಗಳನ್ನು ಧರಿಸಿರುವವರೂ, ವಾನಪ್ರಸ್ಥಾಶ್ರಮಿಗಳನ್ನು ಬಿಟ್ಟು ಉಳಿದ ಆಶ್ರಮಿಗಳು ಅದರಲ್ಲೂ ಗೃಹಸ್ಥಾಶ್ರಮಿಗಳು ಜಟಾ ನಾರುಬಟ್ಟೆಗಳನ್ನು ಧರಿಸಿರುವವರೂ, ವೇದವಿರುದ್ಧ ಕರ್ಮಾಚರಣೆ ಮಾಡುವವರೂ, ಶ್ರೀಹರಿಗೆ ಅತ್ಯಂತ ಪ್ರಿಯಗಳಾದ ಶಂಖ, ಚಕ್ರ, ಊರ್ಧ್ವಪುಂಡ್ರಾದಿಗಳನ್ನು ಧಾರಣೆ ಮಾಡದಿರುವ ದ್ವಿಜರೂ, ಶೃತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಧರ್ಮಾಚರಣೆ ಮಾಡದವರೂ, ಲೋಕದಲ್ಲಿ ಅತ್ಯಂತ ನಿಂದಿತರಾದ ಪಾಷಂಡಿಗಳೆಂತ ಹೇಳಿಸಿಕೊಳ್ಳಲ್ಪಡುತ್ತಾರೆ. ಮತ್ತು ಸಮಸ್ತ ಯಜ್ಞಭೋಕ್ತೃವಾದ ಬ್ರಾಹ್ಮಣ್ಯವತ್ಸಲನಾದ ಶ್ರೀವಿಷ್ಣುವನ್ನು ಉದ್ದೇಶಿಸಿ ಯಜ್ಞಾದಿಗಳನ್ನು ಭಗವತ್ಪ್ರೀತ್ಯಾ ಮಾಡದೆ ಕೇವಲ ಬ್ರಹ್ಮೇಂದ್ರಾದಿ ದೇವತೆಗಳನ್ನೇ ಉದ್ದೇಶ ಮಾಡಿಕೊಂಡು ಹೋಮ ಮಾಡುತ್ತಾರೋ, ದಾನ ಮಾಡುತ್ತಾರೋ ಅವರು ಸ್ವಾತಂತ್ರ್ಯಾಭಿಮಾನದಿಂದ ಕರ್ಮಾಚರಣೆ ಮಾಡುವವರಾಗಿ ಬ್ರಹ್ಮರುದ್ರಾದಿ ದೇವತೆಗಳಿಂದ ನಾರಾಯಣನಿಗೆ ಸಮತ್ವವನ್ನು ಹೇಳುವವರಾಗಿ ತ್ರಿಕರಣದಿಂದ ಜಾಗ್ರತ್ ಸ್ವಪ್ನ ಸುಷುಪ್ತಿ ಅವಸ್ಥೆಗಳಲ್ಲಿ ವಾಸುದೇವನನ್ನು ತಿಳಿಯದವರು ಪಾಷಂಡಿಗಳೆನ್ನಿಸಿಕೊಳ್ಳಲ್ಪಡುತ್ತಾರೆ.

"ಹೇ ದೇವಿ ! ಬಹಳ ಹೇಳುವುದೇನು ? ಬ್ರಾಹ್ಮಣಜಾತಿಯಲ್ಲೇ ಜನ್ಮತಾಳಿರಲಿ, ಯಾರು ಅವೈಷ್ಣವರೋ (ಅಂದರೆ ತಪ್ತಮುದ್ರಾಧಾರಣ, ಊರ್ಧ್ವಪುಂಡ್ರ, ಶಂಖಚಕ್ರಾದಿಗಳನ್ನು ಧಾರಣೆ ಮಾಡುವುದಿಲ್ಲವೋ ಮೇಲೆ ಸೂಚಿಸಿದಂತೆ ನಾರಾಯಣನನ್ನು ಅನ್ಯಥೋಪಾಸನೆ ಮಾಡುವರೋ ಅವರು

ಎಂದರ್ಥ) ಅವರೆಲ್ಲರೂ ಪಾಷಂಡಿಗಳು; ಅವರನ್ನು ನೋಡಬಾರದು, ಅವರೊಡನೆ ಮಾತನಾಡಬಾರದು, ಅವರನ್ನು ಮುಟ್ಟಬಾರದು" ಎಂದು ರುದ್ರದೇವರು ಉಮಾದೇವಿಗೆ ತಿಳಿಸಿದ್ದಾರೆ. ಆದ್ದರಿಂದ ಸದ್ವಂಶದಲ್ಲಿ ಸುಸಂಸ್ಕೃತರಾಗಿ ಜನ್ಮವೆತ್ತಿ ಉಕ್ತಕಾಲದಲ್ಲಿ ಉಪನಯನಾದಿ ಸಂಸ್ಕಾರಗಳಿಂದ ವೇದೋಕ್ತ ಸಂಧ್ಯಾವಂದನಾದಿ ಕ್ರಿಯೆಗಳಿಗೆ ಅಧಿಕಾರ ಸಂಪಾದನೆ ಮಾಡಿದ-ಮೇಲೆ ಜಾಗರೂಕರಾಗಿದ್ದು ವ್ರಾತ್ಯತನ, ವಿಕರ್ಮಸ್ಥತ್ವ, ಪತಿತತ್ವ, ಪಾಷಂಡಿತ್ವ ಇವುಗಳಿಗೆ ಅವಕಾಶ ಕೊಡದೆ ಇರುವವರು ಸಂಧ್ಯೋಪಾಸನೆಗೆ ಮುಖ್ಯಾಧಿಕಾರಿಗಳಾಗುತ್ತಾರೆ.

ಅಧಿಕಾರಿಯಾದ ದ್ವಿಜನು ಸಂಧ್ಯಾವಂದನಕರ್ಮವನ್ನು ಆರಂಭಿಸುವುದಕ್ಕೆ ಪೂರ್ವಭಾವಿಯಾಗಿ ತನ್ನ ಗುರುವಿಗೆ ಅಂದರೆ ಗಾಯತ್ರೀ ಉಪದೇಶ ಮಾಡಿದ ತಂದೆ ಮೊದಲಾದವರಿಗೆ ನಮಸ್ಕರಿಸಿ ನಂತರ ಆಸನದಲ್ಲಿ ಕೂತು

ಧೃತೋರ್ಧ್ವಪುಂಡ್ರದೇಹಸ್ತು ಸಂಧ್ಯೋಪಾಸನಮಾಚರೇತ್ ।
ಉಪಾಸೀತ ದ್ವಿಜಃ ಸಂಧ್ಯಾಃ ಪ್ರಾಙ್ಮುಖೋದಙ್ಮುಖೋಽಪಿ ವಾ ॥

ಊರ್ಧ್ವಪುಂಡ್ರಮುದ್ರಾದಿಗಳನ್ನು ದೇಹದಲ್ಲಿ ಧರಿಸಿ ಪೂರ್ವಾಭಿಮುಖವಾಗಿ ಅಥವಾ ಉತ್ತರಾಭಿಮುಖವಾಗಿ ಕೂತು ದ್ವಿಜನು ಸಂಧ್ಯೋಪಾಸನೆಯನ್ನು ಮಾಡಬೇಕು. —ವಸಿಷ್ಠರು

ಹೋಮದೇವಾರ್ಚನಾದ್ಯಾಸು ಕ್ರಿಯಾಸು ಪಠನೇ ತಥಾ ।
ನೈಕವಸ್ತ್ರಃ ಪ್ರವರ್ತೇತ ದ್ವಿಜಶ್ಚಾಚಮನೇ ಜಪೇ ॥

ಹೋಮ, ದೇವರಪೂಜಾ ಮತ್ತು ಪಾರಾಯಣಾದಿ ಕ್ರಿಯೆಗಳಲ್ಲಿ ಒಂದೇ ವಸ್ತ್ರವುಳ್ಳವನಾಗಿ ಆಚಮನ ಮಾಡಬಾರದು. ಅಂದರೆ ಎರಡು ವಸ್ತ್ರವುಳ್ಳವನಾಗಿರಬೇಕು. — ವಿಷ್ಣುಪುರಾಣ ಇದೂ ಅಲ್ಲದೆ,

ಸವ್ಯಾದಂಸಾತ್ಪರಿಭ್ರಷ್ಟಂ ನಾಭಿದೇಶೇ ವ್ಯವಸ್ಥಿತಮ್ ।
ಏಕವಸ್ತ್ರಂ ಚ ತದ್ವಿದ್ಯಾದ್—ದೈವೇ ಪಿತ್ರ್ಯೇ ಚ ಕರ್ಮಣಿ ॥

ಯಜ್ಞೋಪವೀತವು ಎಡಭುಜದಿಂದ ಕೆಳಗೆ ಬಿದ್ದು ನಾಭಿಯ ದೇಶದಲ್ಲಿ ಇದ್ದರೆ ಏಕವಸ್ತ್ರವೆಂತ ತಿಳಿಯಬೇಕು. ಆದ್ದರಿಂದ ಯಜ್ಞೋಪವೀತ ದೇಹದಲ್ಲಿ

ಸರಿಯಾಗಿ ಇರುವಂತೆ ಜಾಗರೂಕರಾಗಿದ್ದು ಆಚಮನ ಮಾಡಬೇಕು. ದೇವ-ಪಿತೃಕಾರ್ಯಗಳಲ್ಲಿಯೂ ಸರಿಯಾಗಿ ಉಪವೀತವಿರಬೇಕು. —ಶಾತಾತಪರು

ದಾನೇ ಪ್ರತಿಗ್ರಹೇ ಹೋಮೇ ಜಪೇ ಸಂಧ್ಯಾತ್ರಯೇ ತಥಾ ।
ಬಲಿಕರ್ಮಣಿ ಚಾಚಾಮೇ—ದಾದೌ ದ್ವಿಸ್ಸಕೃದಂತತಃ ॥

ದಾನ ಕೊಡುವಾಗಲೂ, ದಾನವನ್ನು ಸ್ವೀಕರಿಸುವಾಗಲೂ, ಹೋಮ, ಜಪ ಮತ್ತು ಮೂರು ಕಾಲಗಳಲ್ಲಿ ಸಂಧ್ಯಾವಂದನೆಗಳನ್ನು ಮಾಡುವಾಗಲೂ, ಬಲಿಹರಣಕರ್ಮದಲ್ಲಿಯೂ ಪ್ರಾರಂಭದಲ್ಲಿ ಎರಡಾವರ್ತಿ, ಸಮಾಪ್ತಿಯಾದ ಮೇಲೆ ಒಂದು ಸಲ ಆಚಮನ ಮಾಡಬೇಕು. —ಸ್ಮೃತಿರತ್ನ

" ಜಾನುಮಾತ್ರೇ ಜಲೇ ತಿಷ್ಠ—ನ್ನಾಸೀನಃ ಪ್ರಾಙ್ಮುಖಸ್ಥಲೇ "

ತಟಾಕಗಳಲ್ಲಿ ಮೊಳಕಾಲುಪರ್ಯಂತ ನೀರಿನಲ್ಲಿ ನಿಂತು, ಭೂಮಿಯ ಮೇಲೆ ಪೂರ್ವಾಭಿಮುಖವಾಗಿ ಕುಳಿತು (ಆಚಮನ ಮಾಡಬೇಕು).

ಸಗ್ರಂಥಿಕುಶಹಸ್ತೈಸ್ತು ಕರ್ಮಾಂಗಾಚಮನಂ ಚರೇತ್ ।
ನೋಚ್ಛಿಷ್ಟಂ ತತ್ಪವಿತ್ರಂಸ್ಯಾ—ದ್ಭುಕ್ತೋಚ್ಛಿಷ್ಟಂ ತು ವರ್ಜಯೇತ್॥

ಗಂಟಿನಿಂದ ಕೂಡಿದ ದರ್ಭೆಯನ್ನು ಕೈಯಲ್ಲಿ ಧರಿಸಿ ಕರ್ಮಾಂಗವಾಗಿ ಆಚಮನ ಮಾಡಬೇಕು. ಪವಿತ್ರವು ಎಂಜಲಾಗುವುದಿಲ್ಲ. ಭೋಜನಕಾಲದಲ್ಲಿ ಹಸ್ತಗತವಾದ ಪವಿತ್ರವು ಎಂಜಲಾಗುತ್ತದೆಯಾದ್ದರಿಂದ ಭೋಜನಾನಂತರ ಅದನ್ನು ಬಿಚ್ಚಿ (ನೆಲದ ಮೇಲೆ) ಹಾಕಬೇಕು.

ನಿತ್ಯವೂ ದರ್ಭೆಯು ದೊರೆಯುವುದು ಕಷ್ಟವಾದರೆ ಈ ಮುಂದೆ (ಶಂಖಸ್ಮೃತಿಯಲ್ಲಿ) ಉದಾಹರಿಸಿರುವ ಪ್ರಮಾಣದಲ್ಲಿ ಕಂಡಂತೆ ಭಂಗಾರದ ಪವಿತ್ರದ ಉಂಗುರವನ್ನು ಧರಿಸಿ ಎಲ್ಲರೂ ಸಂಧ್ಯಾವಂದನಾರಂಭದಲ್ಲಿ ಆಚಮನ ಮಾಡಬೇಕು.

ಸುವರ್ಣಸ್ಯ ಸುವರ್ಣಸ್ಯ ಸುವರ್ಣಸ್ಯಾಂಗುಲೀಯಕಮ್ ।
ಪವಿತ್ರಮಿತಿ ವಿಜ್ಞೇಯಂ ಸರ್ವಕರ್ಮಸುಪೂಜಿತಮ್ ॥

" ಪಂಚಗುಂಜಾತ್ಮಕಂ ಮಾಷಂ. ಷೋಡಶ ಮಾಷ ಪರಿಮಿತಂ ಸುವರ್ಣ ಶಬ್ದೇನ ಉಚ್ಯತೇ "—ಐದು ಗುಲಗಂಜೀ ತೂಕ ಪ್ರಮಾಣಕ್ಕೆ ಸವ. ಒಂದು ಮಾಷ. ಹದಿನಾರು ಮಾಷ ಪರಿಮಿತಿಗೆ ಸುವರ್ಣ ಎಂತ ಮೊದಲಿನ ಸುವರ್ಣ

ಶಬ್ದಕ್ಕೆ ಅರ್ಥ. ಎರಡನೇ ಸುವರ್ಣ ಶಬ್ದಕ್ಕೆ ಮಿಶ್ರವಲ್ಲದ ಭಂಗಾರ ಎಂತ ಅರ್ಥ. ಒಟ್ಟಿನಲ್ಲಿ ಮೇಲಿನ ಪ್ರಮಾಣಶ್ಲೋಕಕ್ಕೆ ಎಂಭತ್ತು ಗುಲಗಂಜೀ ತೂಕವುಳ್ಳ ಶುದ್ಧವಾದ ಭಂಗಾರದ ಉಂಗುರವು 'ಪವಿತ್ರ'ವೆಂತ ಕರೆಯಲ್ಪಡುತ್ತೆ. ಇದು ಸಮಸ್ತ ಕರ್ಮಗಳಲ್ಲಿಯೂ ಧಾರಣಕ್ಕೆ ಅರ್ಹವಾದದ್ದು ಎಂತ ಅಭಿಪ್ರಾಯ.

ಅಂತರ್ಜಾನುವಾಗಿ (ಮೊಣಕಾಲಿನಿಂದ ಹೊರಗೆ ಹಸ್ತವನ್ನು ಇಡದಂತೆ ಎಂತ ಅರ್ಥ) ಶುಚಿಯಾದ ಪ್ರದೇಶದಲ್ಲಿ ಕುಳಿತು ತಲೆಗೂದಲನ್ನು ಗಂಟು ಹಾಕಿಕೊಂಡು ಗೋಕರ್ಣಾಕೃತಿಯಾದ ಹಸ್ತದಲ್ಲಿ ಉದ್ದಿನಕಾಳು ಮುಳುಗುವಷ್ಟು ಪ್ರಮಾಣ ನೀರನ್ನು ಒಂದೊಂದು ಸಲಕ್ಕೆ ಹಾಕಿಕೊಂಡು ಬ್ರಹ್ಮತೀರ್ಥದಿಂದ ಮೂರು ಸಲ ಆಚಮನ ಮಾಡಬೇಕು (ನೀರು ಕುಡಿಯಬೇಕು). ಇದಕ್ಕೆ ವ್ಯಾಸರಿಂದ ಉಕ್ತವಾದ ಶಾಸ್ತ್ರವಚನ ಹೀಗಿದೆ:

ಗೋಕರ್ಣಾಕೃತಿಹಸ್ತೇನ ಮಾಷಮಾತ್ರಂ ಜಲಂ ಪಿಬೇತ್ ।
ತಸ್ಮಾನ್ಯೂನಮಧಿಕಂ ಪೀತ್ವಾ ಸುರಾಪಾನಸಮಂ ಭವೇತ್ ॥

ಗೋಕರ್ಣಾಕೃತಿಹಸ್ತದಿಂದ ಮಾಷಪರಿಮಿತವಾದ ಉದಕವನ್ನು ಪಾನ ಮಾಡಬೇಕು. ಅದಕ್ಕಿಂತಲೂ ಹೆಚ್ಚಾದರೂ ಕಡಿಮೆಯಾದರೂ ಸುರಾಪಾನಕ್ಕೆ ಸದೃಶವಾಗುತ್ತದೆ.

ಪ್ರಾಸಂಗಿಕವಾಗಿ ಬ್ರಹ್ಮತೀರ್ಥಾದಿ ಲಕ್ಷಣವನ್ನು ಶ್ರೀ ಭಾರದ್ವಾಜರು ಹೀಗೆ ಹೇಳಿರುತ್ತಾರೆ:

ಅಂಗುಷ್ಠಮೂಲಂ ಬ್ರಾಹ್ಮಂ ಸ್ಯಾ—ತ್ಪ್ರಾಜಾಪತ್ಯಂ ತಥೈವ ಚ ।
ಪೈತೃಕಂ ತರ್ಜನೀಮೂಲಂ ಕರಾಗ್ರೇ ದೈವತಂ ಸ್ಮೃತಮ್ ॥
ಆಗ್ನೇಯಂ ಕರಮಧ್ಯಂ ಸ್ಯಾ—ತ್ತೀರ್ಥಾನ್ಯೇವಂ ದ್ವಿಜಸ್ಯ ಹಿ ।
ದಕ್ಷಿಣೇ ತು ಕರೇ ಸಂತಿ ಜ್ಞಾತ್ವಾ ಕರ್ಮ ಸಮಾಚರೇತ್ ॥
ಪಿಬೇದಾಚಮನಂ ವಾರಿ ವೀಕ್ಷಿತಂ ಬ್ರಹ್ಮತೀರ್ಥತಃ ।
ಪ್ರಾಜಾಪತ್ಯೇನ ಹೋತವ್ಯಂ ಪೈತ್ರೇಣ ಪಿತೃತರ್ಪಣಮ್ ।
ಕರಾಗ್ರೇಣ ಪ್ರದಾನಂ ಸ್ಯಾತ್—ಮಧ್ಯಮೇನ ಪರಿಗ್ರಹಃ ॥

ಹಸ್ತದ ಹೆಬ್ಬೆಟ್ಟಿನ ಮೂಲವನ್ನು (ಬುಡವನ್ನು) ಬ್ರಹ್ಮತೀರ್ಥ ಅಥವಾ ಪ್ರಾಜಾಪತ್ಯತೀರ್ಥವೆಂತಲೂ, ತರ್ಜನೀಮೂಲವನ್ನು ಪಿತೃತೀರ್ಥವೆಂತಲೂ, ಕರಾಗ್ರವನ್ನು ದೇವತೀರ್ಥವೆಂತಲೂ, ಕರಮಧ್ಯಪ್ರದೇಶವನ್ನು ಅಗ್ನಿತೀರ್ಥ ವೆಂತಲೂ ಹೇಳುತ್ತಾರೆ. ಬ್ರಾಹ್ಮಣರ ಬಲಗೈಯಲ್ಲಿ ಮೇಲ್ಕಂಡಂತೆ ತೀರ್ಥ ಗಳನ್ನು ತಿಳಿದು ಕರ್ಮಗಳನ್ನು ಮಾಡಬೇಕು. ಬ್ರಹ್ಮತೀರ್ಥದಿಂದ ಆಚಮ- ನೋದಕವನ್ನು ಪಾನ ಮಾಡಬೇಕು. ಪಾನಮಾಡುವಾಗ ಉದಕವನ್ನು ನೋಡಿ ಶುದ್ಧವಾಗಿದೆ ಎಂಬುದನ್ನು ತಿಳಿದು ಕುಡಿಯಬೇಕು. ಪ್ರಾಜಾಪತ್ಯ- ತೀರ್ಥದಿಂದ ಹೋಮಿಸಬೇಕು. ಪಿತೃತೀರ್ಥದಿಂದ ಪಿತೃತರ್ಪಣ ಮಾಡಬೇಕು. ಕರಾಗ್ರದಿಂದ ದಾನ ಕೊಡಬೇಕು. ಕರಮಧ್ಯದಿಂದ ದಾನ ಪರಿಗ್ರಹಿಸಬೇಕು. (ಮೇಲ್ಕಂಡ ಪ್ರಮಾಣದಲ್ಲಿ ಬ್ರಹ್ಮತೀರ್ಥ ಮತ್ತು ಪ್ರಾಜಾಪತ್ಯತೀರ್ಥ ಒಂದೇ ಎಂತ ಅರ್ಥವಾಗುತ್ತದೆ. ಸ್ಮೃತಿರತ್ನಾಕರ ರೀತ್ಯಾ ಅಗ್ನಿತೀರ್ಥ, ಪ್ರಾಜಾ- ಪತ್ಯತೀರ್ಥ ಇವೆರಡೂ ಒಂದೇ ಅಂತ ಆಗುತ್ತದೆ. ಋಷಿಮತ ವ್ಯತ್ಯಾಸವಿರು ತ್ತದೆ. ಅವರವರ ಗುರುಗಳು ಹೇಗೆ ನಿರೂಪಣ ಮಾಡುವರೋ ಹಾಗೆಯೇ ಆಚರಿಸತಕ್ಕದ್ದು.) ಆಚಮನ ಪೂರ್ವೋತ್ತರ ದಿಕ್ಕುಗಳನ್ನು ಬಿಟ್ಟು ಅನ್ಯ ದಿಕ್ಕುಗಳಲ್ಲಿ ಮಾಡಬಾರದು. ಏಕೆಂದರೆ ಯಮದೇವರು ನಿಷೇಧಿಸಿರುತ್ತಾರೆ.

ಪ್ರತ್ಯಙ್ಮುಖಶ್ಚೇದಾಚಾಮೇತ್ ಪುನರಾಚಮ್ಯ ಶುದ್ಧ್ಯತಿ।
ಯಾಮ್ಯದಿಙ್ಮುಖ ಆಚಮ್ಯ ಪುನಃ ಸ್ನಾನೇನ ಶುದ್ಧ್ಯತಿ॥

ಪಶ್ಚಿಮಾಭಿಮುಖವಾಗಿ ಆಚಮನ ಮಾಡಿದರೆ ಪುನಃ ಪೂರ್ವಕ್ಕೆ ತಿರುಗಿ ಆಚಮನ ಮಾಡುವುದರಿಂದ ಶುದ್ಧನಾಗುತ್ತಾನೆ. ದಕ್ಷಿಣಾಭಿಮುಖ ವಾಗಿ ಮಾಡಿದರೆ ಪುನಃ ಸ್ನಾನ ಮಾಡಿದರೆ ಶುದ್ಧನಾಗುತ್ತಾನೆ.

ಆಚಮನಗಳಲ್ಲಿ ಅನೇಕ ಪ್ರಕಾರಗಳುಂಟು. ಅವುಗಳಲ್ಲಿ ಸ್ಮಾರ್ತಾಚ- ಮನ, ವೈಷ್ಣವಾಚಮನ, ಶ್ರೌತಾಚಮನಗಳೆಂದು ಮೂರು ಮುಖ್ಯ ಪ್ರಭೇದಗಳು. ಶ್ರೌತಾಚಮನದಲ್ಲಿ ಎರಡು ಪ್ರಕಾರವುಂಟು. ಪ್ರಕೃತ ವೈಷ್ಣವರಲ್ಲಿ ರೂಢಿಯಲ್ಲಿರುವ ವೈಷ್ಣವಾಚಮನವನ್ನು ಮೊದಲು ನಿರೂಪಿಸಿ ನಂತರ ದೇಶಭೇದದಿಂದ ಮಾಧ್ವರಲ್ಲಿ ಕಂಡುಬರುವ ಎರಡು ವಿಧಗಳಾದ ಶ್ರೌತಾಚಮನಗಳ ಪ್ರಕಾರವನ್ನು ವಿಶೇಷ ತಿಳುವಳಿಕೆಗಾಗಿ ಬರೆಯುತ್ತೇನೆ.

ಆಚಮನ ಮಾಡುವುದಕ್ಕೆ ಮೊದಲು ಈ ಕೆಳಗೆ ಉದಾಹರಿಸಿರುವ ಶ್ಲೋಕ ದಿಂದ ಉದಕವನ್ನು ಶಿರಸ್ಸಿನಲ್ಲಿ ಪ್ರೋಕ್ಷಣ ಮಾಡಿಕೊಳ್ಳಬೇಕು. :

**ಅಪವಿತ್ರಃ ಪವಿತ್ರೋವ ಸರ್ವಾವಸ್ಥಾಂ ಗತೋಪಿ ವಾ ।**
**ಯಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಶ್ಶುಚಿಃ ॥**

ಅಶುಚಿಯಾದವನಾಗಲೀ ಶುಚಿಯಾಗಿರುವವನಾಗಲೀ ಎಲ್ಲಾ ಅವಸ್ಥೆ ಗಳನ್ನು ಹೊಂದಿದವನಾಗಲಿ ಯಾವ ಪುರುಷನು ಕಮಲನೇತ್ರನಾದ ಶ್ರೀಹರಿ- ಯನ್ನು ಸ್ಮರಿಸುತ್ತಾನೆಯೋ ಆತನು ಹೊರಗೂ ಒಳಗೂ (ಅಂದರೆ ಮನಸ್ಸಿನ ಒಳಗೂ) ಶುದ್ಧನಾಗುತ್ತಾನೆ.

ಸಂಧ್ಯಾವಂದನೆಗೆ ಉಪಯೋಗಿಸಬೇಕಾದ ಜಲವು ಹೇಗಿರಬಾರದು ಎಂಬುದು ಈ ಮುಂದಿನ ಶ್ಲೋಕಗಳು ಸ್ಪಷ್ಟಪಡಿಸುತ್ತವೆ:

ಅಗ್ನಿತಪ್ತಂಚ ದುರ್ಗಂಧಂ ತಥಾ ಬುದ್ಬುದಫೇನವತ್ ।
ಏಲಾದಿವಾಸಿತಂ ಕ್ಷಾರಂ ಜಲಂ ಶೌಚಾವಶೇಷಿತಮ್ ॥
ಭಿನ್ನಂ ಪರ್ಯುಷಿತಂ ಸ್ಪೃಷ್ಟಂ ತ್ಯಜೇಚ್ಚಕ್ರಿಮಿಸಂಯುತಮ್ ।
ದೇವಾಭಿಷಿಕ್ತಶೇಷಂ ಚ ತ್ಯಜೇದಾಚಮನಂ ಜಲಮ್ ॥

—ಬಿಸಿಯಾದ, ದುರ್ಗಂಧಯುಕ್ತವಾದ, ಬುರುಗಿನ ಗುಳ್ಳೆಗಳುಳ್ಳ, ಏಲಕ್ಕಿ ಕೇಸರಿ ಮುಂತಾದ ಸುಗಂಧದ್ರವ್ಯಮಿಶ್ರಿತವಾದ ಉಪ್ಪಾದ, ಶೌಚ ಮಾಡಿ ಮಿಕ್ಕಿರುವ, ಮುಚ್ಚಿಟ್ಟ ಹಿಂದಿನ ದಿನದ ತಂಗಳಾದ, ಮತ್ತೊಬ್ಬರಿಂದ ಮುಟ್ಟಲ್ಪಟ್ಟ, ಕ್ರಿಮಿಸಂಯುತವಾದ, ದೇವರಿಗೆ ಅಭಿಷೇಕ ಮಾಡಿ ಉಳಿದ ಉದಕವನ್ನು ಆಚಮನಕ್ಕೆ ಉಪಯೋಗಿಸಬಾರದು.

ಪರಿಶುದ್ಧವಾದ ಉದಕವನ್ನು ಶುಭ್ರವಾದ ಪಾತ್ರೆಯಲ್ಲಿ ಹಾಕಿಕೊಂಡು ಅದರಲ್ಲಿ ಈ ಮುಂದೆ ತೋರಿಸಿರುವಂತೆ ಯಂತ್ರವನ್ನು ಬರೆದು ಆಚಮನ ಮಾಡಬೇಕೆಂದು ಶಂಖಸ್ಮೃತಿಯಲ್ಲಿ ಉಕ್ತವಾಗಿದೆ:

ಆದೌ ತ್ರಿಕೋಣಮಾಲಿಖ್ಯ ತನ್ಮಧ್ಯೇ ಪ್ರಣವಂ ಲಿಖೇತ್ ।
ಕೋಣಪಾರ್ಶ್ವೇ ವ್ಯಾಹೃತಯಃ ಕೋಣಾಗ್ರೇ ಪ್ರಣವಂ ನ್ಯಸೇತ್ ॥
ಮಧ್ಯಮಾಂಗುಲಿನಾ ತತ್ರ ಉಲ್ಲಿಖೇತ್ತು ಯಥಾವಿಧಿ ।
ಲಿಖಿತ್ವಾ ಯಂತ್ರರಾಜಂ ತು ಪಶ್ಚಾದಾಚಮನಂ ಚರೇತ್ ॥




ಈ ರೀತಿ ತ್ರಿಕೋಣವನ್ನು ಮಧ್ಯದ ಬೆಟ್ಟಿನಿಂದ ಬರೆದು ಮಧ್ಯದಲ್ಲಿ ಪ್ರಣವವನ್ನೂ ಕೋಣ-ಪಾರ್ಶ್ವಗಳಲ್ಲಿ ವ್ಯಾಹೃತಿಗಳನ್ನು ಬರೆದು ಕೋಣದ ಅಗ ದಲ್ಲಿ ಪುನಃ ಪ್ರಣವವನ್ನು ಬರೆಯಬೇಕು. ಕರ್ಮಾಂಗದೇಹಶುದ್ಧಿಗೋಸ್ಕರ ಆಚಮನವನ್ನು ಮಾಡಬೇಕೆಂದು ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿದೆ.

ವೈಷ್ಣವಾಚಮನವೆಂದರೇನೆಂಬುದನ್ನು ಈ ಮುಂದಿನ ಶ್ಲೋಕದಲ್ಲಿ ಹೇಳಿದೆ :

ಶ್ರೀಪೂರ್ವಕೈರ್ನಾಮಭಿಸ್ತು ನಮೋಂತೈಶ್ಚ ತತಃ ಕ್ರಮಾತ್ ।
ವೈಷ್ಣವಾಚಮನಂ ಹ್ಯೇತತ್–ಸ್ವಯಂ ನಾರಾಯಣೋ ಭವೇತ್ ॥

—ಕೇಶವಾದಿ ನಾಮಗಳಿಗೆ ಆದಿಯಲ್ಲಿ 'ಓಂ'ಕಾರದ ಜೊತೆಗೆ 'ಶ್ರೀ'ಕಾರ ವನ್ನೂ ಸೇರಿಸಿ ಅಂತ್ಯದಲ್ಲಿ 'ನಮಃ'ಶಬ್ದವನ್ನೂ ಉಚ್ಚರಿಸಿ ಮಾಡುವ ಆಚಮನವು "ವೈಷ್ಣವಾಚಮನ"ವೆನಿಸುವುದು.

### ಆಚಮನ

೧. **ಓಂ ಶ್ರೀ ಕೇಶವಾಯ ಸ್ವಾಹಾ** ೨. **ಓಂ ಶ್ರೀ ನಾರಾಯಣಾಯ ಸ್ವಾಹಾ** ೩. **ಓಂ ಶ್ರೀ ಮಾಧವಾಯ ಸ್ವಾಹಾ** (ಎಂದು ಪ್ರತ್ಯೇಕ ಪ್ರತ್ಯೇಕವಾಗಿ ಉದ್ದಿನಕಾಳು ಮುಳುಗುವಷ್ಟು ಜಲವನ್ನು ಬಲಅಂಗೈಯಲ್ಲಿ ಹಾಕಿಕೊಂಡು ಬ್ರಹ್ಮತೀರ್ಥದಿಂದ ಆಚಮನ ಮಾಡಬೇಕು (ನೀರನ್ನು ಕುಡಿಯಬೇಕು). ೪. **ಓಂ ಶ್ರೀ ಗೋವಿಂದಾಯ ನಮಃ** ೫. **ಓಂ ಶ್ರೀ ವಿಷ್ಣವೇ ನಮಃ** ಎಂತ ಮೊದಲು ಬಲದ ಕೈಯಿಂದ ಎಡದ ಹಸ್ತವನ್ನೂ ಅನಂತರ ಎಡಕೈಯಿಂದ ಬಲದ ಹಸ್ತವನ್ನೂ ನೀರಿನಿಂದ ಶುದ್ಧಿಮಾಡಬೇಕು. ೬. **ಓಂ ಶ್ರೀ ಮಧುಸೂದನಾಯ ನಮಃ** (ಒಟ್ಟುಗೂಡಿಸಿದ ಸಂಕುಚಿತಗಳಾದ ಬೆರಳುಗಳಿಂದ ತುಟಿಯನ್ನೂ) ಅನಂತರ ೭. **ಓಂ ಶ್ರೀ ತ್ರಿವಿಕ್ರಮಾಯ ನಮಃ** (ಎಂದು ಕೆಳತುಟಿಯನ್ನೂ ಒರಸಿಕೊಳ್ಳಬೇಕು). ೮. **ಓಂ ಶ್ರೀ ವಾಮನಾಯ ನಮಃ** ೯. **ಓಂ ಶ್ರೀ ಶ್ರೀಧರಾಯ ನಮಃ** (ಎಂತ ಒಟ್ಟುಗೂಡಿಸಿದ ಬೆರಳುಗಳ ಮೂಲದಿಂದ ಕ್ರಮವಾಗಿ ಬಲ ಮತ್ತು ಎಡ ಗಲ್ಲಗಳನ್ನು ಮುಟ್ಟಬೇಕು. ೧೦. **ಓಂ ಶ್ರೀ ಹೃಷೀಕೇಶಾಯ ನಮಃ**

(ಎಂತ ಎರಡು ಹಸ್ತಗಳನ್ನು ಜೋಡಿಸಬೇಕು) ೧೧. ಓಂ ಶ್ರೀ **ಪದ್ಮನಾಭಾಯ ನಮಃ** (ಎಂತ ಎರಡು ಪಾದಗಳನ್ನು ಮುಟ್ಟಬೇಕು) ೧೨. **ಓಂ ಶ್ರೀ ದಾಮೋದರಾಯ ನಮಃ** (ಮುಕುಳಿತಗಳಾದ ಬೆರಳುಗಳಿಂದ ತಲೆಯನ್ನು ಮುಟ್ಟಬೇಕು) ೧೩. **ಓಂ ಶ್ರೀ ಸಂಕರ್ಷಣಾಯ ನಮಃ** (ಮಧ್ಯದ ಬೆರಳಿನ ಹಿಂಭಾಗದಿಂದ ಮೂಗಿನ ಕೆಳಭಾಗವನ್ನು ಮುಟ್ಟಬೇಕು) ೧೪. **ಓಂ ಶ್ರೀ ವಾಸುದೇವಾಯ ನಮಃ** ೧೫. **ಓಂ ಶ್ರೀ ಪ್ರದ್ಯುಮ್ನಾಯ ನಮಃ** (ಎಂತ ತರ್ಜನೀ ಅಂಗುಷ್ಠವನ್ನು ಸೇರಿಸಿ ಬಲ ಮತ್ತು ಎಡದ ಮೂಗಿನ ಹೊಳ್ಳೆಗಳ ಮೇಲುಭಾಗವನ್ನು ಮುಟ್ಟಬೇಕು) ೧೬. **ಓಂ ಶ್ರೀ ಅನಿರುದ್ಧಾಯ ನಮಃ** ೧೭. **ಓಂ ಶ್ರೀ ಪುರುಷೋತ್ತಮಾಯ ನಮಃ** (ಎಂದು ಮಧ್ಯದ ಮತ್ತು ಅಂಗುಷ್ಠದ ಬೆರಳನ್ನು ಸೇರಿಸಿ ಬಲದ ಮತ್ತು ಎಡದ ಕಣ್ಣನ್ನು ಮುಟ್ಟಬೇಕು) ೧೮. **ಓಂ ಶ್ರೀ ಅಧೋಕ್ಷಜಾಯ ನಮಃ** ೧೯. **ಓಂ ಶ್ರೀ ನಾರಸಿಂಹಾಯ ನಮಃ** (ಎಂತ ಅಂಗುಷ್ಠ ಅನಾಮಿಕವನ್ನು ಸೇರಿಸಿ ಬಲ ಮತ್ತು ಎಡದ ಕಿವಿಯನ್ನು ಮುಟ್ಟಬೇಕು) ೨೦. **ಓಂ ಶ್ರೀ ಅಚ್ಯುತಾಯ ನಮಃ** (ಅಂಗುಷ್ಠ ಕನಿಷ್ಠ ಬೆರಳುಗಳನ್ನು ಸೇರಿಸಿ ನಾಭಿಯನ್ನು ಮುಟ್ಟಬೇಕು) ೨೧. **ಓಂ ಶ್ರೀ ಜನಾರ್ದನಾಯ ನಮಃ** (ಎಂತ ಅಂಗೈಯಿಂದ ಹೃದಯವನ್ನು ಮುಟ್ಟಬೇಕು) ೨೨. **ಓಂ ಶ್ರೀ ಉಪೇಂದ್ರಾಯ ನಮಃ** (ಐದು ಬೆರಳುಗಳ ಅಗ್ರಗಳನ್ನು ಒಟ್ಟು ಸೇರಿಸಿ ತಲೆಯನ್ನು ಮುಟ್ಟಬೇಕು) ೨೩. **ಓಂ ಶ್ರೀ ಹರಯೇ ನಮಃ** ೨೪. **ಓಂ ಶ್ರೀ ಕೃಷ್ಣಾಯ ನಮಃ** (ಎಂತ ಮೇಲಿನಂತೆಯೇ ಬೆರಳುಗಳನ್ನು ಸೇರಿಸಿ ಕ್ರಮವಾಗಿ ಬಲ ಮತ್ತು ಎಡ ಭುಜವನ್ನು ಮುಟ್ಟಬೇಕು).

ಹೀಗೆ ಸಂಧ್ಯಾರಂಭದಲ್ಲಿ ಎರಡಾವರ್ತಿ ವೈಷ್ಣವಾಚಮನವನ್ನು ಮಾಡಬೇಕು. ಇವರಲ್ಲಿ ಪರಮಾತ್ಮನಲ್ಲಿರುವ ಗುಣಗಳನ್ನು ವರ್ಣಿಸುವ ಕೇಶವಾದಿ ನಾಮಗಳು ಉಚ್ಚರಿಸಲ್ಪಡುತ್ತವೆಯಾದಕಾರಣ ನಮ್ಮ ಸಮಸ್ತ ಪಾಪಗಳೂ ಪರಿಹಾರವಾಗುವುದು. ಮುಂದೆ ಭಗವದುಪಾಸನೆಗೆ ಅರ್ಹರಾಗುತ್ತೇವೆ; ಸಂಶಯವಿಲ್ಲ. ಶ್ರೀನಾರಾಯಣನ ಸನ್ನಿಧಾನವು ನಮ್ಮಲ್ಲಿ ಉಂಟಾಗುತ್ತದೆ. ಆದ್ದರಿಂದ ನಾವು ನಾರಾಯಣರಾಗುತ್ತೇವೆ ಅಂದರೆ ಸದ್ಗುಣಗಳಿಗೆ ಆಶ್ರಯ

ರಾಗುತ್ತೇವೆ. ಅಂದರೆ ಮುಕ್ತರಾಗಿ ಸ್ವಸ್ವರೂಪಜ್ಞಾನಾನಂದಾದಿಗಳನ್ನು ಪಡೆಯುತ್ತೇವೆ ಎಂತ ಅರ್ಥ. ಆಚಮನಕ್ಕೆ ಇಂಥಾ ಮಹಾಫಲವನ್ನು ಕೊಡತಕ್ಕ ಮಹತ್ವವಿರುವ ಕಾರಣ ಸರ್ವಕರ್ಮಾರಂಭಗಳಲ್ಲಿಯೂ ಇದು ವಿಧಿಸಲ್ಪಟ್ಟಿರುತ್ತದೆಂದು ತಿಳಿಯಬೇಕು. ಸ್ತ್ರೀ ಶೂದ್ರರಿಗೆ ಪ್ರಣವೋಚ್ಚಾರ ಮಾಡಲು ಅಧಿಕಾರವಿಲ್ಲವಾದ್ದರಿಂದಲೂ, ಆಚಮನಕ್ಕೆ ಮಾತ್ರ ಅಧಿಕಾರಿಗಳಾದ್ದರಿಂದಲೂ ಅವರಿಗಾಗಿ ಸ್ಮಾರ್ತಾಚಮನವು ಹೇಳಲ್ಪಟ್ಟಿದೆ. ಅದು ಯಾವುದೆಂದರೆ ಆದಿಯಲ್ಲಿ 'ಶ್ರೀ' ಶಬ್ದವನ್ನೂ ಅಂತ್ಯದಲ್ಲಿ 'ನಮಃ' ಶಬ್ದವನ್ನೂ ಉಚ್ಚರಿಸಿ ಮಾಡುವ ಆಚಮನಕ್ಕೆ 'ಸ್ಮಾರ್ತಾಚಮನ'ವೆಂತ ಹೆಸರು. ಆಚಮನದ ಮೊದಲಿನ ಕೇಶವಾದಿ ಮೂರು ನಾಮಗಳ ಅಂತ್ಯದಲ್ಲಿ 'ಸ್ವಾಹಾ' ಶಬ್ದವನ್ನು ದ್ವಿಜರು ಮತ್ತು ದ್ವಿಜಪತ್ನಿಯರು ಹೇಳಬೇಕು. ಶೂದ್ರರು 'ನಮಃ' ಎಂತ ಹೇಳಿ ಆಚಮಿಸಬೇಕು.

'ಸ್ವಾಹಾದೇವ ಹವಿರ್ದಾನೇ' ಎಂಬ ಕೋಶಾನುಸಾರ ದೇವತೆಗಳಿಗೆ ಆಹುತಿ ಕೊಡುವಾಗ "ಸ್ವಾಹಾ" ಎಂತ ಹೇಳಬೇಕಾದ್ದರಿಂದ ನಮ್ಮ ಅಂತರ್ಯಾಮಿಯಾದ, ಇಪ್ಪತ್ತುನಾಲ್ಕು ತತ್ತ್ವಾಭಿಮಾನಿ ದೇವತೆಗಳಿಗೆ ನಿಯಾಮಕನಾದ ಪರಮಾತ್ಮನಿಗೆ ಆಹುತಿರೂಪವಾಗಿ ಉದಕವನ್ನು ಕೊಡುತ್ತೇವೆಯಾಗಿ 'ಸ್ವಾಹಾ' ಶಬ್ದವನ್ನು ಹೇಳಬೇಕು. ಶ್ರೀ ಛಲಾರೀ ಮತ್ತು ಸ್ಮೃತಿಮುಕ್ತಾವಳೀ, ಸಂಧ್ಯಾಭಾಷ್ಯಗಳ ಆಧಾರಗಳ ಮೇಲೆ ಮೇಲ್ಕಂಡ ಆಚಮನದ ವಿಷಯವು ಬರೆಯಲ್ಪಟ್ಟಿದೆ.

### [1]ಚತುರ್ವಿಂಶತಿನಾಮಗಳ ಅರ್ಥ

ಕೇಶವಾದಿ ಕೃಷ್ಣಾಂತ ೨೪ ನಾಮಗಳ ಅರ್ಥಗಳನ್ನು ತಿಳಿದು ಅನುಷ್ಠಾನ ಮಾಡುವುದು ಫಲದಾಯಕವಾದುದರಿಂದ ಇಲ್ಲಿ ಯಥಾಮತಿ ವಿವರಿಸಲಾಗಿದೆ.

---

[1] ಈ ಚತುರ್ವಿಂಶತಿಮೂರ್ತಿಗಳ ಲಕ್ಷಣವನ್ನು ತಿಳಿಸುವ ಚಿತ್ರಪಟವು ಸುದರ್ಶನ ಕಲಾಮಂದಿರ, 64/ಎ, 5ನೇ ಅಡ್ಡರಸ್ತೆ, ಚಾಮರಾಜಪೇಟೆ, ಬೆಂಗಳೂರು-560018, ಇವರಿಂದಲೂ, ಅಗ್ನಿಪುರಾಣ, ತಂತ್ರಸಾರಗಳಲ್ಲಿ ಉಕ್ತವಾಗಿರುವ ಆಧಾರಶ್ಲೋಕಗಳನ್ನೂ ವಾದಿರಾಜಾದಿ ಮಹನೀಯರಿಂದ ರಚಿತವಾಗಿರುವ ಸರಳ ಕನ್ನಡ ಕೀರ್ತನೆಗಳನ್ನೂ ಉಳ್ಳ ಸಚಿತ್ರವಾದ "ಚತುರ್ವಿಂಶತಿಮೂರ್ತಿಗಳ ಲಕ್ಷಣ"ವು ವಾಸುದೇವಪದಸಂತತಸಂಗೀ, 25, ಗಾಂಧಿ ಬಜಾರ್, ಬೆಂಗಳೂರು 4, ಇವರಿಂದಲೂ ಪ್ರಕಟವಾಗಿದೆ.

೧. **ಕೇಶವ :** ಬ್ರಹ್ಮರುದ್ರರನ್ನು ಅತಿಕ್ರಮಿಸಿ ಇರುವವನು. ಅಂದರೆ ಅವರಿಗಿಂತಲೂ ಉತ್ತಮನಾಗಿರುವುದರಿಂದಲೂ, ಬ್ರಹ್ಮನಲ್ಲಿಯೂ ರುದ್ರ-ನಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು ಬ್ರಹ್ಮರುದ್ರನಾಮಕನಾಗಿ ಅವರುಗಳನ್ನು ಕ್ರಮವಾಗಿ ಸೃಷ್ಟಿ ಮತ್ತು ಲಯಕಾರ್ಯಗಳಲ್ಲಿ ನಿಯಮನ ಮಾಡುವುದರಿಂದಲೂ, ಪ್ರಶಸ್ತವಾದ ಕೇಶಗಳುಳ್ಳವನಾದ್ದರಿಂದಲೂ, ಬ್ರಹ್ಮ ಶ್ರೀ ಲಕ್ಷ್ಮೀ ಕಾಮ ರುದ್ರ ಇವರುಗಳನ್ನು ಕಾರ್ಯಗಳಲ್ಲಿ ನಿಯಮನ ಮಾಡುವುದರಿಂದಲೂ, ಶ್ರೇಷ್ಠಗಳಾದ ಸುಖಾದಿ ಗುಣಗಳನ್ನು ಹೊಂದಿರುವುದರಿಂದಲೂ, ಕೇಶಿನಾಮಕ ದೈತ್ಯನನ್ನು ವಧ ಮಾಡಿದ್ದರಿಂದಲೂ, ಪ್ರಳ-ಯೋದಕದಲ್ಲಿ ಮಲಗಿರುವನಾದ್ದರಿಂದಲೂ, ಪೂರ್ಣಗಳಾದ ಚಿದಾನಂದಾತ್ಮಕಗಳಾದ ಶುಕ್ಲಕೇಶ ಮತ್ತು ಕೃಷ್ಣಕೇಶವೆಂಬ ಅವತಾರಗಳುಳ್ಳವನಾದ್ದರಿಂದಲೂ "ಕೇಶವ" ಎಂದು ಪರಮಾತ್ಮನಿಗೆ ಹೆಸರು. ಇಂತಹ ಪರ-ಮಾತ್ಮನಿಗೋಸ್ಕರ ಆಹುತಿರೂಪವಾದ ಉದಕವನ್ನು ಪ್ರಾಶನ ಮಾಡುತ್ತೇನೆ ಎಂದರ್ಥ. ಮುಂದೆಯೂ ಹೀಗೆಯೇ ತಿಳಿಯಬೇಕು.

೨. **ನಾರಾಯಣ :** ದೋಷವಿರುದ್ಧಗಳಾದ ಕಲ್ಯಾಣಗುಣಗಳಿಗೆ ಆಶ್ರಯನಾದ್ದರಿಂದಲೂ, ಚೇತನರ ಜ್ಞಾನಕ್ಕೆ ವಿಷಯತಯಾ ಆಶ್ರಯನಾದ್ದರಿಂದಲೂ ಮುಕ್ತರಿಗೆ ಆಶ್ರಯನಾದ್ದರಿಂದಲೂ, ಮುಕ್ತಿಪ್ರದನಾದ್ದರಿಂದಲೂ ಪರಮಾತ್ಮನಿಗೆ "ನಾರಾಯಣ" ಎಂತ ಹೆಸರು.

೩. **ಮಾಧವ :** ಲಕ್ಷ್ಮೀದೇವಿಗೆ ಪತಿಯಾದ್ದರಿಂದಲೂ, ಮಧು-ಕುಲೋತ್ಪನ್ನನಾದ್ದರಿಂದಲೂ, ಜ್ಞಾನಧರ್ಮಗಳನ್ನು ಧರಿಸಿರುವವನಾದ್ದರಿಂದಲೂ ಮತ್ತು ಪ್ರವರ್ತನ ಮಾಡುವವನಾದ್ದರಿಂದಲೂ, ಶ್ರೀದೇವಿಯಲ್ಲಿರುವ ತನ್ನ ಸ್ವರೂಪಭೂತವಾದ ಶ್ರೀ ರೂಪದಲ್ಲಿಯೇ ಕ್ರೀಡಿಸುವವನಾದ್ದರಿಂದಲೂ, ಧ್ಯಾನ ಮತ್ತು ಜ್ಞಾನಯೋಗವುಳ್ಳವನಾದ್ದರಿಂದಲೂ, ಮಧುವಿದ್ಯಾಪ್ರವರ್ತಕನಾದ್ದರಿಂದಲೂ, ಮಧುರವತ್ ಸರ್ವಸಾರವಾದ ಪ್ರಚುರ ಭೋಗವುಳ್ಳವನಾದ್ದರಿಂದಲೂ, ಸರ್ವೋತ್ತಮನೂ ಆದ್ದರಿಂದಲೂ ಹರಿಯು "ಮಾಧವ" ಎಂತ ಕರೆಯಲ್ಪಡುತ್ತಾನೆ.

೪. **ಗೋವಿಂದ:** ವೇದಾರ್ಥಗಳನ್ನು ತಿಳಿದವನೂ, ಸರ್ವವೇದಗಳಿಂದ ಪ್ರತಿಪಾದಿಸಲ್ಪಡುವವನೂ, ವಿದ್ಯಾ, ಧೇನು, ಭೂಮಿ, ಸ್ವರ್ಗ ಇವುಗಳನ್ನು ಹೊಂದಿರತಕ್ಕವನೂ (ಅಂದರೆ ಅವುಗಳಿಗೆ ಸತ್ತಾಪ್ರದನಾಗಿ ಅವುಗಳಲ್ಲಿ ಸನ್ನಿಧಾನ ಮಾಡಿರುವವನೂ) ಆದ್ದರಿಂದಲೂ, ಕೇಶರೂಪ ಅವತಾರಗಳನ್ನೂ ಜ್ಞಾನರಶ್ಮಿಗಳನ್ನೂ ಹೊಂದತಕ್ಕವನೂ, ಉಪದೇಶರೂಪವಾದ ವಾಣಿಯಿಂದ ವಿಷ್ಣುವಿಷಯಕ ಜ್ಞಾನವನ್ನೂ ಮತ್ತು ವಿಷ್ಣುವನ್ನೂ ಕೊಡತಕ್ಕವನೂ ಮತ್ತು ಗೀತಾದಿ ಉಪದೇಶದಿಂದ ಅಜ್ಞಾನವನ್ನು ಖಂಡನ ಮಾಡತಕ್ಕವನೂ ಆದ್ದರಿಂದಲೂ "ಗೋವಿಂದ" ಎಂತ ಹೆಸರು.

೫. **ವಿಷ್ಣು:** ವಿಶಿಷ್ಟಬಲಚೇಷ್ಟಾ ಸ್ವಭಾವವುಳ್ಳವನೂ ಮತ್ತು ವ್ಯಾಪ್ತನಾದವನೂ ಆದ್ದರಿಂದ "ವಿಷ್ಣು" ಎನಿಸುವನು.

೬. **ಮಧುಸೂದನ:** ಮಧುನಾಮಕ ದೈತ್ಯನನ್ನು ಸಂಹರಿಸಿದವನೂ, ಅಲ್ಪಸುಖದಿಂದ ಕೂಡಿರುವ ಸಂಸಾರವನ್ನು ಬಿಡಿಸುವವನೂ, ಸ್ವಾದುಪಾಚಕನಾದ (ಅಂದರೆ ರುಚಿಕರವಾಗಿ ಅಡಿಗೆ ಮಾಡುವ) ಭೀಮಸೇನನನ್ನು ನಿಯಮನ ಮಾಡುವವನಾದ್ದರಿಂದಲೂ "ಮಧುಸೂದನ"ನೆಂತ ಕರೆಯಲ್ಪಡುತ್ತಾನೆ.

೭. **ತ್ರಿವಿಕ್ರಮ:** ಮೂರು ವಿಧವಾದ ಪಾದವಿಕ್ಷೇಪವುಳ್ಳವನೂ ಅಂದರೆ ವಾಮನಾವತಾರದಲ್ಲಿ ತ್ರಿವಿಕ್ರಮರೂಪನಾಗಿ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೂ ಗೆದ್ದವನು), ತ್ರಿವಿಧ ಜೀವರಲ್ಲಿಯೂ ಮೂರು ಲೋಕಗಳಲ್ಲಿಯೂ ಪರಾಕ್ರಮವುಳ್ಳವನಾದ್ದರಿಂದ "ತ್ರಿವಿಕ್ರಮ" ಎಂದೆನಿಸುತ್ತಾನೆ.

೮. **ವಾಮನ:** ಸೌಂದರ್ಯವನ್ನು ನಿಯಮಿಸುವವನೂ, ಲಕ್ಷ್ಮಿಯನ್ನು ಸದಾಕಾಲದಲ್ಲಿ ತನ್ನ ಎಡಭಾಗದಲ್ಲಿರಿಸಿಕೊಂಡಿರುವವನೂ, ಸುಂದರನಾದವನೂ, ಮಂಗಳಕರಗಳಾದ ರೂಪಗಳಿಂದ ನಿಯಮನ ಮಾಡುವವನೂ ಆದ್ದರಿಂದ "ವಾಮನ" ಎಂದು ಹೇಳುತ್ತಾರೆ.

೯. **ಶ್ರೀಧರ:** ಶ್ರೀದೇವಿಯನ್ನು (ವಕ್ಷಸ್ಥಳದಲ್ಲಿ) ಧರಿಸಿರತಕ್ಕವನು. ಆದ್ದರಿಂದ "ಶ್ರೀಧರಃ."

೧೦. **ಹೃಷೀಕೇಶ:** ಏಕಾದಶೇಂದ್ರಿಯ ಮತ್ತು ಇಂದ್ರಿಯಾಭಿಮಾನಿ ದೇವತೆಗಳನ್ನು ನಿಯಮನ ಮಾಡುವುದರಿಂದಲೂ, ಬ್ರಹ್ಮ, ರುದ್ರ, ಕಾಮ,

ಲಕ್ಷ್ಮೀ ಮುಂತಾದ ದೇವತೆಗಳಿಗೆ ಹರ್ಷವನ್ನು ಕೊಡುವವನಾದ್ದರಿಂದಲೂ "ಹೃಷೀಕೇಶ"ನೆನಿಸುವನು.

೧೧. **ಪದ್ಮನಾಭ:** ಜಗದುಪಾದಾನಕಾರಣವಾದ ಪದ್ಮವನ್ನು ನಾಭಿಯಲ್ಲಿ ಉಳ್ಳವನಾದ್ದರಿಂದ "ಪದ್ಮನಾಭ"ನೆನಿಸುವನು.

೧೨. **ದಾಮೋದರ:** ದಾಮವೆಂದು ಕರೆಯಲ್ಪಡುವ ಹದಿನಾಲ್ಕು ಲೋಕಗಳನ್ನು ಉದರದಲ್ಲಿ ಉಳ್ಳವನೂ, ಯಶೋದೆಯಿಂದ ಹಗ್ಗದಿಂದ ಕಟ್ಟಲ್ಪಟ್ಟ ಉದರಪ್ರದೇಶವುಳ್ಳವನೂ ಆದ್ದರಿಂದ "ದಾಮೋದರ" ಎಂತ ಹೇಳುತ್ತಾರೆ.

೧೩. **ಸಂಕರ್ಷಣ:** ಜಗತ್ತನ್ನು ಪ್ರಳಯದಲ್ಲಿ ಚೆನ್ನಾಗಿ ಕರ್ಷಣೆ ಮಾಡುತ್ತಾನೆಯಾದ್ದರಿಂದ "ಸಂಕರ್ಷಣ"ನೆನಿಸುತ್ತಾನೆ.

೧೪. **ವಾಸುದೇವ:** ವಸುದೇವಪುತ್ರನಾದ್ದರಿಂದಲೂ, ಸಮಸ್ತ ಭೂತಗಳನ್ನೂ ತನ್ನಲ್ಲಿಟ್ಟುಕೊಂಡಿರುವವನೂ ಮತ್ತು ಜಗತ್ರಯಗಳಲ್ಲಿ ವಾಸಮಾಡಿಕೊಂಡು ಇರುವವನೂ ಆದ್ದರಿಂದಲೂ, ಜ್ಞಾನರೂಪನೂ, ಬಲ-ರೂಪನೂ, ಕ್ರೀಡಾದಿ ಗುಣವಿಶಿಷ್ಟನೂ ಆದ್ದರಿಂದಲೂ "ವಾಸುದೇವ"ನೆಂತ ಹೇಳಿಸಿಕೊಳ್ಳಲ್ಪಡುತ್ತಾನೆ.

೧೫. **ಪ್ರದ್ಯುಮ್ನ:** ಪ್ರಕೃಷ್ಟವಾದ ಪ್ರಕಾಶವುಳ್ಳವನೊ, ಚೆನ್ನಾಗಿ ಸೂರ್ಯ, ಚಂದ್ರ, ಅಗ್ನ್ಯಾದಿಗಳಲ್ಲಿದ್ದು ಜಗತ್ತನ್ನು ಪ್ರಕಾಶಗೊಳಿಸತಕ್ಕವನೂ ಆದ್ದರಿಂದ "ಪ್ರದ್ಯುಮ್ನ"ನೆನಿಸುತ್ತಾನೆ.

೧೬. **ಅನಿರುದ್ಧ:** ಯಾರಿಂದಲೂ ನಿರೋಧಿಸಲ್ಪಡದವನಾದ್ದರಿಂದಲೂ ಭಕ್ತರಾದ ಪ್ರಾಣಿಗಳಿಂದ (ಚೇತನರಿಂದ) ತಡೆಯಲ್ಪಡತಕ್ಕವನೂ ಆದ್ದರಿಂದಲೂ "ಅನಿರುದ್ಧ"ನೆನಿಸುತ್ತಾನೆ.

೧೭. **ಪುರುಷೋತ್ತಮ:** ಕ್ಷರಾಕ್ಷರ ಪುರುಷರಿಗಿಂತಲೂ (ಕ್ಷರರಾದ ಬ್ರಹ್ಮಾದಿ ಜಗತ್ತು, ಅಕ್ಷರಳಾದ ಲಕ್ಷ್ಮೀದೇವಿ ಇವರಿಗಿಂತಲೂ) ಶ್ರೇಷ್ಠನಾದ್ದರಿಂದಲೂ, ಪೂರ್ಣಗಳಾದ ಆರು ಗುಣಗಳುಳ್ಳವನಾದ್ದರಿಂದಲೂ, ಜೀವರುಗಳಲ್ಲಿ ವ್ಯಾಪಕನಾದ್ದರಿಂದಲೂ, ಶ್ವೇತದ್ವೀಪ, ಅನಂತಾಸನ, ವೈಕುಂಠ, ಸರ್ವರ ಹೃದಯಾಕಾಶ, ಸತ್ಯಲೋಕ, ಅವ್ಯಾಕೃತಾಕಾಶಗಳೆಂಬ

ಆರು ಸ್ಥಾನಗಳಲ್ಲಿರತಕ್ಕವನೂ, ಸರ್ವೋತ್ತಮನೂ ಆದ್ದರಿಂದ ಪರಮಾತ್ಮ "ಪುರುಷೋತ್ತಮ"ನೆನಿಸುತ್ತಾನೆ.

೧೮. **ಅಧೋಕ್ಷಜ:** ತನ್ನ ಇಚ್ಛೆಯಿಲ್ಲದೆ ಯಾರ ಪ್ರತ್ಯಕ್ಷಕ್ಕೂ ಗೋಚರಿಸದವನಾದ್ದರಿಂದ "ಅಧೋಕ್ಷಜ"ನೆನಿಸುತ್ತಾನೆ.

೧೯. **ನಾರಸಿಂಹ:** ನಾಶವನ್ನು ಹೊಂದದೇ ಇರುವವನೂ, ದೈತ್ಯ ರನ್ನು ನಾಶಗೊಳಿಸುವವನೂ ಆದ್ದರಿಂದ "ನಾರಸಿಂಹ"ನೆನಿಸುತ್ತಾನೆ.

೨೦. **ಅಚ್ಯುತ:** ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ ಹಾಗೂ ಅಪೂರ್ಣತಾ ಎಂಬ ನಾಲ್ಕು ವಿಧವಾದ ನಾಶರಹಿತನಾದ್ದರಿಂದ "ಅಚ್ಯುತ" ಎಂತ ಹೆಸರು.

೨೧. **ಜನಾರ್ದನ:** ಜನಗಳನ್ನು ಉತ್ಪತ್ತಿ ಮಾಡತಕ್ಕವನೂ ಮತ್ತು ಸಂಸಾರವನ್ನು ನಾಶಗೊಳಿಸುವವನೂ ಆದ್ದರಿಂದಲೂ, ತಾನು ಉತ್ಪತ್ತಿಶೂನ್ಯ ನಾಗಿದ್ದು ದುಷ್ಟಜನಗಳನ್ನು ಮರ್ದನ ಮಾಡತಕ್ಕವನೂ, ಸಜ್ಜನರಿಗೆ ಸದ್ಗತಿ ಯನ್ನು ಹೊಂದಿಸತಕ್ಕವನೂ, ಬಲ್ಯಾದಿಗಳನ್ನು ಅವತಾರಗಳಲ್ಲಿ ಯೋಜನ ಮಾಡತಕ್ಕವನೂ, ಪ್ರಳಯಕಾಲದಲ್ಲಿ ಸಕಲ ಜನಗಳನ್ನೂ ಸಂಹರಿಸುವವನೂ ಆದ್ದರಿಂದ "ಜನಾರ್ದನ"ನೆನಿಸುತ್ತಾನೆ.

೨೨. **ಉಪೇಂದ್ರ:** ಅಧಿಕನಾಗಿದ್ದು ಪರಮೈಶ್ವರ್ಯವುಳ್ಳವನೂ, ಇಂದ್ರಾನುಜನಾಗಿ ವಾಮನಾವತಾರ ಮಾಡಿ ಇಂದ್ರನ ಸಮೀಪದಲ್ಲಿರತಕ್ಕವ- ನಾದ್ದರಿಂದ "ಉಪೇಂದ್ರ"ನೆನಿಸುತ್ತಾನೆ.

೨೩. **ಹರಿ:** ಭಕ್ತರ ಅಪರಾಧಗಳನ್ನು ಸಹಿಸಿಕೊಂಡು ಅವರ ಪಾಪ ಗಳನ್ನು ಪರಿಹರಿಸುತ್ತಾನೆ, ಮತ್ತು ಸ್ವರೂಪವನ್ನು ವಶೀಕರಣಮಾಡುತ್ತಾನೆ. ಆದ್ದರಿಂದಲೂ ದೈತ್ಯರುಗಳನ್ನು ಸಂಹರಿಸುವುದರಿಂದಲೂ "**ಹರಿ**" ಎಂತ ಹೆಸರು.

೨೪. ಕೃಷ್ಣ: ಪರಿಪೂರ್ಣ ಜ್ಞಾನಾನಂದಸ್ವರೂಪನೂ, ದೈತ್ಯರು ಗಳನ್ನು ತಮಸ್ಸಿಗೆ ಎಳೆದುಹಾಕುವವನೂ, ದೇವಾದಿಗಳಿಗೆ ಪ್ರಾಣ ಬಲಗಳನ್ನು ಕೊಡತಕ್ಕವನೂ ಆದ್ದರಿಂದಲೂ, ಭೂಭಾರಭೂತರಾದ ದೈತ್ಯರುಗಳನ್ನು ಕೊಂದು ಭೂದೇವಿಗೆ ಸುಖವನ್ನುಂಟುಮಾಡುವವನೂ ಆದ್ದರಿಂದಲೂ "ಕೃಷ್ಣ" ಎಂತ ಹೆಸರು.

ಈ ಚತುರ್ವಿಂಶತಿ (೨೪) ನಾಮಗಳಿಗೆ ನೂರಾರು ಅರ್ಥಗಳುಂಟೆಂದು ಶ್ರೀಮದಾಚಾರ್ಯರು ಹೇಳಿರುತ್ತಾರೆ. ಅವುಗಳನ್ನು ನಾವು ತಿಳಿಯಲು ಸಾಧ್ಯವಿಲ್ಲ. ದೇವಾಂಶಸಂಭೂತರಾದವರೂ ಕೂಡ ಯಥಾಯೋಗ್ಯವಾಗಿ ತಿಳಿಯಬಲ್ಲರು. ಪ್ರಕೃತ ಒಂದೆರಡು ಅರ್ಥವನ್ನಾದರೂ ಜ್ಞಾಪಕದಲ್ಲಿಟ್ಟು-ಕೊಂಡು ಆಚಮನ ಮಾಡುವಾಗ ಸ್ಮರಣೆಗೆ ತಂದರೆ ಶ್ರೀಹರಿಯು ಪ್ರಸನ್ನನಾಗುತ್ತಾನೆ ಇನ್ನು ಕೇಶವಾದಿ ಮೂರ್ತಿಗಳ ವರ್ಣ, ಪತ್ನೀಯರುಗಳೂ ಆಯುಧವಿಶೇಷಗಳೂ ತಿಳಿಯಲ್ಪಟ್ಟರೆ ಮಹಾ ಪುಣ್ಯವು ಲಭಿಸುತ್ತದೆ. ಆದುದರಿಂದ ಅವುಗಳನ್ನು ಗಾಯಿತ್ರೀಮಂತ್ರದ ಅರ್ಥ ವಿವರಣೆ ಮಾಡುವಾಗ ತಿಳಿಸಲಾಗುತ್ತದೆ.

ಈಗ ಶ್ರೌತಾಚಮನಪ್ರಕಾರವನ್ನು ತಿಳಿಯೋಣ :

ದೇವೀ ಪಾದ್ಯೈಃ ತ್ರಿಭಿಃ ಪೀತ್ವಾ ಅಬ್ಲಿಂಗ್ಯೈಃ ನವಭಿಃ ಪಾದ್ಯೈಃ ।
ಸಪ್ತವ್ಯಾಹೃತಿ ಗಾಯತ್ರ್ಯಾ ಶಿರೋವ್ಯಾಹೃತಿ ಸಂಪುಟಮ್ ॥

೧. ಓಂ ತತ್ಸವಿತುರ್ವರೇಣ್ಯಂ ಸ್ವಾಹಾ, ೨. ಓಂ ಭರ್ಗೋ ದೇವಸ್ಯ ಧೀಮಹಿ ಸ್ವಾಹಾ, ೩. ಓಂ ಧಿಯೋ ಯೋ ನಃ ಪ್ರಚೋದಯಾತ್ ಸ್ವಾಹಾ (ಎಂದು ಮೂರು ಆವರ್ತಿ ಪ್ರತ್ಯೇಕವಾಗಿ ಆಚಮನ ಮಾಡಬೇಕು.

೪. ಓಂ ಆಪೋ ಹಿ ಷ್ಠಾ ಮಯೋ ಭುವಃ, ೫. ತಾನ ಊರ್ಜೇ ದಧಾತನ (ಹಸ್ತಗಳನ್ನು ತೊಳೆಯಬೇಕು), ೬. ಮಹೇ ರಣಾಯ ಚಕ್ಷಸೇ, ೭. ಯೋ ವಶ್ಶಿವತಮೋ ರಸಃ (ಎರಡು ಹನು [ಗಲ್ಲ] ಗಳನ್ನು ಮುಟ್ಟಬೇಕು), ೮. ತಸ್ಯ ಭಾಜಯತೇ ಹನಃ, ೯. ಉಶತೀರಿವ ಮಾತರಃ (ಎರಡು ತುಟಿಗಳನ್ನು ಸ್ಪರ್ಶ ಮಾಡಬೇಕು), ೧೦. ತಸ್ಮಾ ಅರಂ ಗಮಾಮ ವಃ (ಕರತಲಗಳನ್ನು ಜೋಡಿಸಬೇಕು), ೧೧. ಯಸ್ಯ ಕ್ಷಯಾಯ ಜಿನ್ವಥ (ಪಾದಗಳನ್ನು ಮುಟ್ಟಬೇಕು), ೧೨. ಆಪೋ ಜನಯಥಾ ಚ ನಃ (ಅಂಗೈಯಿಂದ ಶಿರಸ್ಸನ್ನು ಮುಟ್ಟಬೇಕು), ೧೩. ಓಂ ಭೂಃ (ಮೂಗಿನ ಕೆಳಭಾಗವನ್ನೂ), ೧೪. ಓಂ ಭುವಃ, ೧೫. ಓಂ ಸ್ವಃ (ಅಂಗುಷ್ಠ ತರ್ಜನೀ ಬೆರಳುಗಳನ್ನು ಸೇರಿಸಿ ಮೂಗಿನ ಹೊಳ್ಳೆಗಳನ್ನೂ), ೧೬. ಓಂ ಮಹಃ, ೧೭. ಓಂ ಜನಃ (ಅಂಗುಷ್ಠ ಮಧ್ಯಮ

ಗಳಿಂದ ಕಣ್ಣನ್ನೂ), ೧೮. ಓಂ ತಪಃ, ೧೯. ಓಂ ಸತ್ಯಂ (ಅಂಗುಷ್ಠಾನಾಮಿಕ ಗಳಿಂದ ಎರಡು ಕಿವಿಗಳನ್ನೂ), ೨೦. ಓಂ ತತ್ಸವಿತುರ್ವರೇಣ್ಯಂ (ಅಂಗುಷ್ಠ ಕನಿಷ್ಠ ಯೋಗದಿಂದ ನಾಭಿಯನ್ನೂ), ೨೧. ಓಂ ಭರ್ಗೋ ದೇವಸ್ಯ ಧೀಮಹಿ (ಅಂಗೈಯಿಂದ ಹೃದಯವನ್ನೂ), ೨೨. ಧಿಯೋ ಯೋ ನಃ ಪ್ರಚೋದಯಾತ್ (ಮುಕುಳಿತಾಂಗುಲಿಗಳಿಂದ ಶಿರಸ್ಸನ್ನೂ), ೨೩. ಓಂ ಆಪೋ ಜ್ಯೋತಿ ರಸೋಽಮೃತಂ (ದಕ್ಷಿಣಬಾಹುಮೂಲವನ್ನೂ), ೨೪. ಓಂ ಬ್ರಹ್ಮಭೂರ್ಭುವಸ್ವರೋಂ (ಎಡದ ಬಾಹುಮೂಲವನ್ನೂ ಮುಟ್ಟಬೇಕು).

ಈ ರೀತಿಯಾದ ಶ್ರೌತಾಚಮನವನ್ನೇ ಮಾಡುವ ಕೆಲವು ದೇಶೀಯರಿದ್ದಾರೆ. ನಾವೂ ಕೂಡ ಸಂಧ್ಯಾವಂದನೆಯಲ್ಲಿ ಪುನರ್ಮಾರ್ಜನಾನಂತರ ಪಾಪಪುರುಷ ಜಲವಿಸರ್ಜನಾನಂತರ ಶ್ರೌತಾಚಮನ ಮಾಡಿದರೆ ಬಹಳ ಪುಣ್ಯವುಂಟೆಂದು ಸಂಧ್ಯಾಭಾಷ್ಯಕಾರರು ಹೇಳಿರುತ್ತಾರೆ.

ಏವಂ ಯಃ ಕುರುತೇ ವಿಪ್ರೋ ಮಹಾಪಾಪೈಃ ಪ್ರಮುಚ್ಯತೇ ॥

(ಇತಿ ಭರದ್ವಾಜಸ್ಮೃತೇಃ). ಈ ಪ್ರಕಾರ ಶ್ರೌತಾಚಮನವನ್ನು ಯಾವ ಬ್ರಾಹ್ಮಣನು ಮಾಡುತ್ತಾನೋ ಆತನು ಮಹಾ ಪಾಪಗಳಿಂದ ಮುಕ್ತನಾಗುತ್ತಾನೆ ಎಂದು ಅರ್ಥ. ಶ್ರೌತಾಚಮನದಲ್ಲಿ ಇನ್ನೊಂದು ಪ್ರಕಾರವೂ ಉಂಟು. ಅದು ಪ್ರಾಯಃ ದ್ರಾವಿಡರಲ್ಲಿಯೂ, ಔಡುಸ್ಯರಲ್ಲಿಯೂ ವಿಶೇಷ ಬಳಕೆಯಲ್ಲಿರುತ್ತದೆ. ತದ್ದೇಶೀಯ ಮಾಧ್ವಬಾಲಕರಿಗೆ ಉಪಯೋಗವಾಗಲಿ ಎಂದು ಅದನ್ನೂ ಈ ಮುಂದೆ ಕೊಡಲಾಗಿದೆ.

೧. ಓಂ ಋಗ್ವೇದಾಯ ಸ್ವಾಹಾ, ೨. ಓಂ ಯಜುರ್ವೇದಾಯ ಸ್ವಾಹಾ, ೩. ಓಂ ಸಾಮವೇದಾಯ ಸ್ವಾಹಾ (ಎಂದು ಮೂರು ಸಲ ನೀರನ್ನು ಪ್ರಾಶನ ಮಾಡಬೇಕು). ೪. ಓಂ ಅಥರ್ವಣವೇದಾಯ ನಮಃ. ೫. ಓಂ ಇತಿಹಾಸ-ಪುರಾಣೇಭ್ಯೋ ನಮಃ (ಎಂದು ಕರತಳ ಕರಪೃಷ್ಠಗಳಲ್ಲಿ ಮಾರ್ಜನವನ್ನು ಮಾಡಬೇಕು), ೬. ಓಂ ಅಗ್ನಯೇ ನಮಃ, ೭. ಓಂ ಅಗ್ನಯೇ ನಮಃ (ಎಂದು ಎರಡು ತುಟಿಗಳನ್ನು ಸ್ಪರ್ಶನ ಮಾಡಬೇಕು), ೮. ಓಂ ವಾಯುವೇ ನಮಃ, ೯. ಓಂ ವಾಯುವೇ ನಮಃ (ಎಂದು ನಾಸಾಗಳನ್ನು), ೧೦. ಓಂ ಸೂರ್ಯಾಯ ನಮಃ, ೧೧. ಓಂ ಚಂದ್ರಾಯ ನಮಃ (ಎಂದು ಎರಡು

ನೇತ್ರಗಳನ್ನೂ), ೧೨. ಓಂ ದಿಗ್ಭ್ಯೋ ನಮಃ, ೧೩. ಓಂ ದಿಗ್ಭ್ಯೋ ನಮಃ (ಎಂದು ಎರಡು ಕಿವಿಗಳನ್ನೂ), ೧೪. ಓಂ ಇಂದ್ರಾಯ ನಮಃ, ೧೫. ಓಂ ಇಂದ್ರಾಯ ನಮಃ (ಎಂದು ಎರಡು ಬಾಹುಗಳನ್ನೂ), ೧೬. ಓಂ ವಿಷ್ಣವೇ ನಮಃ, ೧೭. ಓಂ ವಿಷ್ಣವೇ ನಮಃ (ಎಂದು ಕುಕ್ಷಿಯ ಎರಡು ಪಾರ್ಶ್ವಗಳನ್ನೂ), ೧೮. ಓಂ ದಿವೇ ನಮಃ, ೧೯. ಓಂ ದಿವೇ ನಮಃ (ಎಂದು ಕಟಿಯ ಪಾರ್ಶ್ವಗಳನ್ನೂ), ೨೦. ಓಂ ಪೃಥಿವ್ಯೈ ನಮಃ, ೨೧. ಓಂ ಪೃಥಿವ್ಯೈ ನಮಃ (ಎಂದು ಎರಡು ಪಾದಗಳನ್ನೂ), ೨೨. ಓಂ ಆತ್ಮನೇ ನಮಃ (ಎಂದು ಹೃದಯವನ್ನೂ), ೨೩. ಓಂ ಅಂತರಾತ್ಮನೇ ನಮಃ (ಎಂದು ವದನವನ್ನೂ) ೨೪. ಓಂ. ಪರಮಾತ್ಮನೇ ನಮಃ (ಎಂತ ಶಿರಸ್ಸನ್ನೂ) ಮುಟ್ಟಬೇಕು.

ಹೀಗೆ ಶ್ರೌತಾಚಮನವಿಧಿಯು ಉಕ್ತವಾಗಿರುತ್ತದೆ. ಭರತಖಂಡದ ಎಲ್ಲಾ ಭಾಗಗಳಲ್ಲಿಯೂ ಮಾಧ್ವರು ಇರುವುದರಿಂದ ಸರ್ವರಿಗೂ ಅನುಕೂಲವಾಗಬೇಕೆಂದು ಯೋಚಿಸಿ ಭಿನ್ನಭಿನ್ನ ಸಂಪ್ರದಾಯಾನುಗುಣವಾಗಿ ಈ ಆಚಮನವಿಧಿಯನ್ನು ಸಂಗ್ರಹಿಸಿ ಇಲ್ಲಿ ಬರೆಯಲಾಗಿದೆ. ಆಯಾ ಸಂಪ್ರದಾಯದವರು ಅವರ ರೀತಿಯನ್ನು ಅನುಸರಿಸಬೇಕಾದ್ದು ಕರ್ತವ್ಯವಾಗಿರುತ್ತೆ.

ಕೆಲವು ವೇಳೆ ನೀರೂ ಸಹ ಇಲ್ಲದಿರುವಾಗ ದೇಹಶುದ್ಧಿಗಾಗಿ ಆಚಮನ ಮಾಡಬೇಕಾದ ಪ್ರಸಂಗ ಬಂದರೆ ಅಂಥಾ ಕಾಲದಲ್ಲಿ 'ಶ್ರೋತ್ರಾಚಮನ' ವೆಂಬ ಮತ್ತೊಂದು ವಿಧಿಯು ಶಾಸ್ತ್ರದಲ್ಲಿ ಉಕ್ತವಾಗಿರುವುದು.

ಆದಿತ್ಯಾವಸವೋರುದ್ರಾ—ವಾಯುರಗ್ನಿಶ್ಚ ಧರ್ಮರಾಟ್ ।
ವಿಪ್ರಸ್ಯ ದಕ್ಷಿಣೇ ಕರ್ಣೇ ನಿವಸಂತಿ ಹಿ ಸರ್ವದಾ ॥
ಪುಷ್ಕರಾದ್ಯಾನಿ ತೀರ್ಥಾನಿ. ಗಂಗಾದ್ಯಾಃ ಸರಿತಸ್ತಥಾ ।
ವಿಪ್ರಸ್ಯ ದಕ್ಷಿಣೇ ಕರ್ಣೇ ಸಂತೀತಿ ಮನುರಬ್ರವೀತ್ ॥
ಪಂಚಾಂಗುಲಿಂ ಮೇಲಯಿತ್ವಾ ದಕ್ಷಿಣಂ ಶ್ರವಣಂ ಸ್ಪೃಶೇತ್ ॥

— ಪರಾಶರಸ್ಮೃತಿ

ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶ ರುದ್ರರೂ, ವಾಯು, ಅಗ್ನಿ, ಯಮಧರ್ಮರಾಜ, ಪುಷ್ಕರಾದಿ ತೀರ್ಥಗಳೂ, ಗಂಗಾದಿನದ್ಯಭಿ

ಮಾನಿಗಳೂ ಸದಾ ಕಾಲದಲ್ಲಿ ಬ್ರಾಹ್ಮಣನ ಬಲಕಿವಿಯಲ್ಲಿ ಇರುತ್ತವೆಯಾದ್ದ
ರಿಂದ ಐದು ಬೆರಳುಗಳನ್ನು ಒಟ್ಟುಗೂಡಿಸಿ ಬಲಕಿವಿಯನ್ನು ಮುಟ್ಟಬೇಕು.
ಇದಕ್ಕೆ ಶ್ರೋತ್ರಾಚಮನವೆಂತ ಹೆಸರು. ಇದರಿಂದ ಆಚಮನ ಮಾಡಿದ ಫಲ
ಆರುತ್ತದೆ ಎಂತ ಪರಾಶರಸ್ಮೃತಿಯಲ್ಲಿ ಹೇಳಲ್ಪಟ್ಟಿದೆ.

ಆಚಮನ ಮಾಡುವಾಗ ಕೆಲವು ನಿಷೇಧವಾದ ಕೆಲಸಗಳನ್ನು ಮಾಡ
ಬಾರದು. ಅದು ಯಾವುದೆಂಬುದನ್ನು ವಿಷ್ಣುತೀರ್ಥೀಯದಲ್ಲಿ ಹೀಗೆ ನಿರೂಪಣೆ
ಮಾಡಿರುತ್ತಾರೆ.

ತಿಷ್ಠನ್ಮೇಹಂ ಚ ಸಂಜಲ್ಪನ್ ಶೃಣ್ವನ್ ದುರ್ಜನಭಾಷಣಮ್ ।
ಅನ್ಯಂ ಸ್ಪೃಶನ್ ದಿಶಂ ಪಶ್ಯನ್ ಪಶ್ಯನ್ ದುಷ್ಟಪದಾರ್ಥಕಮ್ ॥
ಶಯಾನಃ ಪಾದುಕಸ್ಥಶ್ಚ ಬಹಿರ್ಜಾನುಕರೋಪಿ ಚ ।
ಕಂಚುಕ್ಯಾಚ್ಛಾದಿತಶಿರಾಃ ಸೋಪಾನಸ್ಥೋ ನ ಚಾಚಮೇತ್ ॥
ಏಕಹಸ್ತೇನ ನಾಚಾಮೇತ್ ಮುಕ್ತಕೇಶೋ ಜಲಾಪ್ಲುತಃ ।
ಸದಾ ಯಜ್ಞೋಪವೀತೀಸ್ಯಾತ್ ತಥಾಬದ್ಧಶಿಖಸ್ಸದಾ ॥
ತದ್ವಿನಾಯಕ್ರಿಜಃ ಕುರ್ಯಾತ್ ತತ್ಸರ್ವಂ ನಿಷ್ಫಲಂ ಭವೇತ್ ॥

ನಿಂತುಕೊಂಡಿರಬಾರದು, ಮೂತ್ರವಿಸರ್ಜನ ಮಾಡಬಾರದು, ಕಾಡು-
ಹರಟೆಗಳನ್ನು ಆಡಬಾರದು, ದುರ್ಜನರ ಮಾತನ್ನು ಕೇಳಬಾರದು, ಅನ್ಯ-
ಪುರುಷರನ್ನು ಮುಟ್ಟಬಾರದು, ದಿಕ್ಕುದಿಕ್ಕುಗಳನ್ನು ನೋಡಬಾರದು, ಮಲಗಿರ
ಕೂಡದು, ಪಾದುಕಾಧಾರಣ ಕೂಡದು, ಮೊಳಕಾಲು ಹೊರಗೆ ಕೈಗಳನ್ನು
ಇಡಬಾರದು, ಅಂಗಿ ಮುಂತಾದ ಕವಚ ಧಾರಣ ಮಾಡಿರಬಾರದು. ತಲೆ
ಯನ್ನು ಆಚ್ಛಾದನೆ ಮಾಡಿರಬಾರದು, ಚಪ್ಪಲಿ ಧರಿಸಿರಬಾರದು, ಒಂದು
ಹಸ್ತದಿಂದ ಆಚಮನ ಮಾಡಬಾರದು, ನೀರಿನಲ್ಲಿ ಮುಳುಗಿಕೊಂಡಾಗಲೀ,
ತಲೆ ಬಿರಿಹಾಕಿಕೊಂಡಾಗಲೀ ಇರಬಾರದು, ಯಜ್ಞೋಪವೀತವನ್ನು ಸದಾ
ಧರಿಸಿದವರಾಗಿರಬೇಕು, ಶಿಖಾ ಗಂಟು ಹಾಕಿರಬೇಕು. ಇವುಗಳನ್ನು ಬಿಟ್ಟು
ಯಾವ ಕರ್ಮವನ್ನು ಮಾಡಿದರೂ ಅವೆಲ್ಲವೂ ನಿಷ್ಫಲವಾಗುತ್ತದೆ.

ಈ ಕೆಳಗೆ ಸೂಚಿಸಿರುವ ನಿಮಿತ್ತಗಳಿದ್ದಲ್ಲಿ ಶುದ್ಧಿಗಾಗಿ ಆಚಮನವನ್ನು ಮಾಡಬೇಕು :

ಅಧೋವಾಯುಸಮುತ್ಸರ್ಗೇ ಆಕ್ರಂದೇ ಕ್ರೋಧಸಂಭವೇ ।
ಮಾರ್ಜಾರಮೂಷಿಕಾಸ್ಪರ್ಶೇ ಪ್ರಹಸೇಽನೃತಭಾಷಣೇ ।
ನಿಮಿತ್ತೇಷ್ವೇಷು ಸರ್ವೇಷು ಕರ್ಮ ಕುರ್ವನ್ ಉಪಸ್ಪೃಶೇತ್ ॥

ಅಪಾನವಾಯು ಹೊರಗೆ ಹೋದರೆ, ಅತ್ತರೆ, ಕೋಪಗೊಂಡರೆ, ಬೆಕ್ಕು ಮತ್ತು ಇಲಿಗಳ ಸ್ಪರ್ಶ ನಮಗಾದರೆ, ನಕ್ಕರೆ, ಸುಳ್ಳುಮಾತಾಡಿದರೆ, ಇವೇ ಮೊದಲಾದ ನಿಮಿತ್ತಗಳಲ್ಲಿ ಆಚಮನ ಮಾಡಿ ಮುಂದಿನ ಸತ್ಕರ್ಮಾನುಷ್ಠಾನವನ್ನು ನೆರವೇರಿಸಬೇಕು.

ಇಲ್ಲಿಯವರೆಗೆ ಆಚಮನವಿಧಿಯು ಹೇಳಲ್ಪಟ್ಟಿತು. ಇನ್ನು ಪ್ರಾಣಾಯಾಮದ ಬಗ್ಗೆ ಏನು ಹೇಳಿದ್ದಾರೆಂಬುದನ್ನು ಸ್ಥೂಲವಾಗಿ ತಿಳಿಯೋಣ.

## ಪ್ರಾಣಾಯಾಮ

**ಓಮ್ ॥ ಪ್ರಣವಸ್ಯ ಪರಬ್ರಹ್ಮ ಋಷಿಃ ಪರಮಾತ್ಮಾ ದೇವತಾ ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ ॥**

**ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ ಓಂ ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋ-ಜ್ಯೋತಿರಸೋಽಮೃತಂ ಬ್ರಹ್ಮಭೂರ್ಭುವಸ್ಸ್ವರೋಮ್ ॥**

ಈ ದಶೋಂಕಾರ ಗಾಯತ್ರೀ ಮಂತ್ರದಿಂದ ಬ್ರಹ್ಮಚಾರಿಗಳು ಅಂಗುಷ್ಠಾನಾಮಿಕಾಕನಿಷ್ಠಾಂಗುಲಿಗಳಿಂದಲೂ, ಗೃಹಸ್ಥಾಶ್ರಮಿಗಳು ಅಂಗುಷ್ಠ-ತರ್ಜನೀ ಬೆರಳುಗಳಿಂದಲೂ ಮೂಗಿನ ರಂಧ್ರವನ್ನು ಒತ್ತಿ ಹಿಡಿದು ಪ್ರಾಣಾಯಾಮವನ್ನು ಮಾಡಬೇಕು.

ಮಂತ್ರದ ಅರ್ಥ : ಓಂ ಪ್ರಣವಸ್ಯ–ಓಂಕಾರಮಂತ್ರಕ್ಕೆ, ಪರಬ್ರಹ್ಮ ಋಷಿಃ–ಗುಣಪೂರ್ಣನಾದ ನಾರಾಯಣನೇ ಋಷಿಯು (ದ್ರಷ್ಟಾ), ಪರಮಾತ್ಮಾ ದೇವತಾ–ಸರ್ವೋತ್ತಮನಾದ ನಾರಾಯಣನೇ ಪ್ರತಿಪಾದ್ಯದೇವತೆ,

ದೈವೀ ಗಾಯತ್ರೀ ಛಂದಃ-ಇಪ್ಪತ್ತನಾಲ್ಕು ಅಕ್ಷರಾತ್ಮಕವಾದ ಗಾಯತ್ರೀ-ಛಂದಸ್ಸು (ವೃತ್ತಂ), ಇಂಥಾ ಪ್ರಣವವು ಅಂದರೆ ಓಂಕಾರವು, ಪ್ರಾಣಾ-ಯಾಮೇ ವಿನಿಯೋಗಃ-ಶ್ವಾಸನಿರೋಧರೂಪವಾದ ಪ್ರಾಣಜಯಾಖ್ಯ ಕರ್ಮದಲ್ಲಿ ಉಪಯೋಗಿಸಲ್ಪಡತಕ್ಕದ್ದು. ಓಂಕಾರಪ್ರತಿಪಾದ್ಯನಾದ ನಾರಾಯಣನೇ ಭೂಃ ಮೊದಲಾದ ಏಳು ವ್ಯಾಹೃತಿಗಳಿಂದ ಹೇಳಿಸಿಕೊಳ್ಳಲ್ಪಡತಕ್ಕವನು. ಪರಕೀಯರು ವ್ಯಾಹೃತಿಗಳನ್ನು ಸಪ್ತಲೋಕವಾಚಕವಾದದ್ದನ್ನಾಗಿ ಹೇಳುತ್ತಾರೆ. ಅದು ಸರಿಯಾದದ್ದು ಅಲ್ಲ.

ಏತಕ್ಕೆಂದರೆ, ಶ್ರೀಹರಿಯನ್ನು ಕೊಂಡಾಡುತ್ತಿರುವ ವೇದಮಂತ್ರಪ್ರ ಇದ್ದಕ್ಕಿದ್ದಹಾಗೆಯೇ ಜಡವಾದ ಲೋಕಗಳನ್ನು ವರ್ಣಿಸುತ್ತವೆ ಎಂತ ಹೇಳುವುದು ಉಪಕ್ರಮಾದಿ ತಾತ್ಪರ್ಯಲಿಂಗಗಳಿಗೆ ವಿರೋಧವಾಗುತ್ತವೆ. ಆದ್ದರಿಂದ ಈ ಕೆಳಗೆ ಸೂಚಿಸುವಂತೆ ವ್ಯಾಹೃತಿಗಳನ್ನು ಗಾಯತ್ರ್ಯಾದಿ ವೇದಪ್ರತಿಪಾದ್ಯನಾದ ನಾರಾಯಣನ ಪರವಾಗಿ ಅರ್ಥಮಾಡಿಕೊಳ್ಳಬೇಕು.

ಓಂ ಭೂಃ-ಸಮಸ್ತ ಗುಣಗಳಿಗೆ ಆಶ್ರಯನು ಮತ್ತು ಪೂರ್ಣನಾದವನು. ಓಂ ಭುವಃ-ಅವಧಿರಹಿತವಾದ ಐಶ್ವರ್ಯಶ್ರೇಷ್ಠನು. ಓಂ ಸ್ವಃ-ನಾಶರಹಿತವಾದ ಸುಖವುಳ್ಳವನು. ಓಂ ಮಹಃ-ಪೂಜ್ಯನಾದವನು. ಓಂ ಜನಃ-ಜಗತ್ತಿಗೆ ಸೃಷ್ಟಿಕರ್ತನು, ಮತ್ತು ತಾನು ಮತ್ತೊಬ್ಬರಿಂದ ಜನಿಸದೇ ಇರುವವನು. ಓಂ ತಪಃ-ಜ್ಞಾನಸ್ವರೂಪನು. ಓಂ ಸತ್ಯಂ-ಉತ್ತಮಾನಂದ ಜ್ಞಾನರೂಪವುಳ್ಳವನು ಅಥವಾ ಮುಕ್ತಾಮುಕ್ತ ಪ್ರಪಂಚಕ್ಕೆ ನಿಯಾಮಕನಾದವನು. ಈ ರೀತಿಯಾದ ಗುಣಗಳಿಂದ ಕೂಡಿರುವ, ಯಃ-ಯಾವಾತನು, ನಃ-ನಮ್ಮ (ಸಮಸ್ತ ಪ್ರಾಣಿ)ಗಳ, ಧಿಯಃ-ಬುದ್ಧಿಗಳನ್ನು, ಅಥವಾ ಕರ್ಮಗಳನ್ನು, ಪ್ರಚೋದಯಾತ್-ಚೆನ್ನಾಗಿ ಪ್ರೇರಣೆ ಮಾಡುತ್ತಾನೋ, ತಸ್ಯ ದೇವಸ್ಯ-ಅಂಥಾ ಕ್ರೀಡಾದಿಗುಣವಿಶಿಷ್ಟನಾದ, ಸವಿತುಃ-ಸೃಷ್ಟ್ಯಾದ್ಯಷ್ಟಕರ್ತನಾದ ನಾರಾಯಣನ, ತತ್-ಆ ಗುಣಗಳಿಂದ ವ್ಯಾಪ್ತವಾದ, ವರೇಣ್ಯಂ-ಸರ್ವೋತ್ತಮವಾದ ಅಥವಾ ಗುಣಗಳಿಂದ ಸ್ತುತ್ಯವಾದ, ಭರ್ಗಃ-ಪೂರ್ಣ ಕಾಂತೀ-ಕ್ರೀಡಾಜ್ಞಾನಸ್ವರೂಪವಾದ ಪರಮಾತ್ಮನ ರೂಪವನ್ನು, ಧೀಮಹಿ-ಧ್ಯಾನ ಮಾಡುತ್ತೇವೆ. ಓಂ-ಇಂಥಾ ಗಾಯತ್ರೀಪ್ರತಿಪಾದ್ಯನಾದ ಭಗವಂತನು,

ಆಪಃ–ಚೆನ್ನಾಗಿ ಸರ್ವತ್ರ ಪಾಲಕನು, ಜ್ಯೋತಿಃ–ಪ್ರಕಾಶಸ್ವರೂಪನು, ರಸಃ–ಸಾರಭೂತನು, ಅಂದರೆ ಶ್ರೇಷ್ಠನೂ, ಅಮೃತಂ-ಮರಣರಹಿತನು, ಬ್ರಹ್ಮ-ಗುಣಪೂರ್ಣನು, ಭೂರ್ಭುವಸ್ಸ್ವರೋಂ–ಪೂರ್ಣನು, ಐಶ್ವರ್ಯಶ್ರೇಷ್ಠನು, ಅನಂತಸುಖವುಳ್ಳವನು, ಅಶೇಷಗುಣಗಳಿಗೆ ಆಶ್ರಯನಾದವನು—ಎಂತ ತಿಳಿಯಬೇಕು.

ದಶೋಂಕಾರಗಾಯತ್ರೀ ಎಂದರೆ ಓಂಕಾರಸಹಿತ ಏಳು ವ್ಯಾಹೃತಿಗಳೂ, ಓಂಕಾರಸಹಿತ ಗಾಯತ್ರೀಮಂತ್ರ ಮತ್ತು ಓಂ ಆಪೋ....ಸ್ಸ್ವರೋಂ ಎಂಬ ಗಾಯತ್ರೀ ಶಿರಸ್ಸು ಈ ಮೂರೂ ಸೇರಿರತಕ್ಕ ಮಂತ್ರ. ಇದನ್ನು ಸಂಧ್ಯಾಂಗ ಪ್ರಾಣಾಯಾಮದಲ್ಲಿ ಕುಂಭಕರೀತ್ಯಾ ಜಪಿಸಬೇಕು. ಕುಂಭಕ ಎಂದರೇನು ಎಂಬುದನ್ನು ತಿಳಿಯೋಣ. ಯಾಜ್ಞವಲ್ಕ್ಯರು ಹೇಳಿರುವ

ಪ್ರಾಣೋವಾಯುರಿತಿಪ್ರೋಕ್ತಃ ಆಯಾಮಸ್ತಂ ನಿರೋಧನಮ್ ।
ಪೂರಕಃ ಕುಂಭಕೋರೇಚಃ ಪ್ರಾಣಾಯಾಮಸ್ತ್ರಿಲಕ್ಷಣಃ ॥

ಎಂಬ ಪ್ರಮಾಣದಂತೆ ಪ್ರಾಣವೆಂದರೆ ವಾಯುವೆಂತಲೂ, ಅದರ ನಿರೋಧನ ಮಾಡೋಣವೇ ಆಯಾಮಃ ಎಂತಲೂ ತಿಳಿಯಬೇಕು. ಪೂರಕ, ಕುಂಭಕ, ರೇಚಕ ಎಂತ ಮೂರು ಲಕ್ಷಣಗಳಿಂದ ಯುಕ್ತವಾದದ್ದು ಪ್ರಾಣಾಯಾಮ ವೆನಿಸುತ್ತದೆ. ಪೂರಕಕ್ಕೆ ಚತುರ್ಮುಖಬ್ರಹ್ಮದೇವರು ದೇವತಾ, ಕುಂಭಕದಲ್ಲಿ ಶ್ರೀವಿಷ್ಣು ದೇವತಾ, ರೇಚಕಕ್ಕೆ ಉಮಾಪತಿಗಳಾದ ರುದ್ರದೇವರು ದೇವತಾ. ಇವರುಗಳನ್ನು ಸ್ಮರಿಸಿಕೊಂಡು ಪ್ರಾಣಾಯಾಮ ಮಾಡಲುಪಕ್ರಮಿಸಬೇಕು.

ರೇಚಕ : ದೇಹದ ಒಳಗಿರತಕ್ಕ ವಾಯುವನ್ನು ಬಲಮೂಗಿನ ರಂಧ್ರದಿಂದ ಹೊರಗೆ ಬಿಡತಕ್ಕದ್ದು.

ಪೂರಕ : ಹೊರಗಿನ ವಾಯುವನ್ನು ಎಡಮೂಗಿನ ರಂಧ್ರದಿಂದ ಒಳಗೆ ತೆಗೆದುಕೊಳ್ಳುವುದು.

ಕುಂಭಕ : ತೆಗೆದುಕೊಂಡ ವಾಯುವನ್ನು ನೆತ್ತಿಯಲ್ಲಿ ಕೆಲವು ಕಾಲ ನಿಲ್ಲಿಸುವುದು. ಅಂದರೆ ಸುಷುಮ್ನಾನಾಡಿಯಲ್ಲಿ ವಾಯುವನ್ನು ಪ್ರವೇಶಿಸುವುದು.

ಪ್ರಥಮತಃ ಅಭ್ಯಾಸ ಮಾಡುವಾಗ ಒಂದು ಮಾತ್ರಾ—ಅಂದರೆ 'ಓಂ' ಎಂದು ಉಚ್ಚರಿಸಲ್ಪಡುವಷ್ಟು—ಕಾಲ ರೇಚಕ ಮಾಡಬೇಕು ರೇಚಕದ ಎರಡರಷ್ಟು ಅಂದರೆ ಎರಡು ಮಾತ್ರಾಕಾಲ ಪೂರಕ ಮಾಡಬೇಕು. ಪೂರಕದ ಎರಡರಷ್ಟು ಕಾಲ ಅಂದರೆ ನಾಲ್ಕು ಮಾತ್ರಾಕಾಲ ಕುಂಭಕವನ್ನು ಮಾಡಬೇಕು. ಪುನಃ ರೇಚಕ, ಪೂರಕ, ಕುಂಭಕ—ಹೀಗೆ ಮೂರು ಸಲ ಆವರ್ತನ ಮಾಡಬೇಕು. ಕ್ರಮಕ್ರಮವಾಗಿ ಹೆಚ್ಚಿಸಬೇಕು. "ತ್ರಿರಾವರ್ತನಯೋಗಾತ್ತು ಪ್ರಾಣಾಯಾಮಸ್ತು ಶಬ್ದ್ಯತೆ" ಎಂಬ ವಾಕ್ಯದಿಂದ ಮೂರು ಸಲ ಆವರ್ತನ ಮಾಡಬೇಕೆಂದು ತಿಳಿದುಬರುತ್ತದೆ.

ಮೊದಲು ಯಮ, ನಿಯಮ, ಆಸನಗಳನ್ನು ಅಭ್ಯಸಿಸಿ ನಂತರ ತಮಗೆ ಹಿತಕರವಾದ ಸ್ವಸ್ತಿಕಾದಿ ಆಸನಗಳಲ್ಲಿ ಕುಳಿತು ಮೇಲೆ ಹೇಳಿದ ಕ್ರಮದಿಂದ ಒಂದು ಮಾತ್ರಾ ಕಾಲ ರೇಚಕದಿಂದ ಅಭ್ಯಾಸ ಮಾಡಿ, ದಿನಕ್ರಮೇಣ ಹದಿನಾರು (೧೬) ಮಾತ್ರಾ ಕಾಲ ರೇಚಕವನ್ನೂ, ಮೂವತ್ತೆರಡು (೩೨) ಮಾತ್ರಾ ಕಾಲ ಪೂರಕವನ್ನೂ, ಅರವತ್ತುನಾಲ್ಕು (೬೪) ಮಾತ್ರಾ ಕಾಲ ಕುಂಭಕವನ್ನೂ ಮಾಡುವುದಕ್ಕೆ ಶಕ್ತನಾಗಬೇಕು. ಆಗ ಪ್ರಾಣಾಯಾಮವು ಸಿದ್ಧಿಸುತ್ತದೆ.

ಪ್ರಾಣಾಯಾಮದಲ್ಲಿ ಎಷ್ಟು ವಿಧವೆಂಬುದನ್ನು ವಾಯುಪುರಾಣದಲ್ಲಿ ಹೀಗೆ ಹೇಳಿದೆ :

ಅಗರ್ಭಶ್ಚ ಸಗರ್ಭಶ್ಚ ಪ್ರಾಣಾಯಾಮೋದ್ವಿಧಾಪುನಃ ।
ಅಗರ್ಭೋಽಧ್ಯಾನಹೀನಸ್ತು ಸಗರ್ಭೋಽ ಧ್ಯಾನಸಂಯುತಃ ॥
ಅಗರ್ಭಾತ್ಕೋಟಿಗುಣಿತಃ ಪ್ರಾಣಾಯಾಮಃ ಸಗರ್ಭಕ ॥

ಪ್ರಾಣಾಯಾಮದಲ್ಲಿ ಅಗರ್ಭ ಪ್ರಾಣಾಯಾಮ, ಸಗರ್ಭ ಪ್ರಾಣಾಯಾಮ ಎಂತ ಎರಡು ವಿಧವುಂಟು.

ಧ್ಯಾನರಹಿತವಾಗಿ ಮಾಡತಕ್ಕ ಪ್ರಾಣಾಯಾಮವು 'ಅಗರ್ಭ'ವೆಂದೂ, ಮಂತ್ರಾರ್ಥವನ್ನು ಸ್ಮರಿಸಿ ಮಂತ್ರಪ್ರತಿಪಾದ್ಯದೇವತಾ ಧ್ಯಾನಸಹಿತವಾಗಿ ಮಾಡತಕ್ಕ ಪ್ರಾಣಾಯಾಮವು 'ಸಗರ್ಭ'ವೆಂದೂ ಹೇಳಲ್ಪಟ್ಟಿದೆ.

ಅಗರ್ಭಪ್ರಾಣಾಯಾಮಕ್ಕಿಂತಲೂ ಸಗರ್ಭಪ್ರಾಣಾಯಾಮವು ಕೋಟಿ-ಗುಣ ಪುಣ್ಯ ಅಧಿಕವಾಗಿ ಕೊಡತಕ್ಕದ್ದಾಗುತ್ತದೆ. ಶ್ರೀ ತಂತ್ರಸಾರ ನಾಲ್ಕನೇ ಅಧ್ಯಾಯದಲ್ಲಿ ಪ್ರಾಣಾಯಾಮ ಅಭ್ಯಾಸಿಸುವ ಕ್ರಮ ಉಕ್ತವಾಗಿದುತ್ತದೆ.

ಅದನ್ನು ಅನುಸರಿಸಿ ಇಲ್ಲಿ ಬರೆಯಲಾಗಿದೆ. ಪುಸ್ತಕದಲ್ಲಿ ಎಷ್ಟು ವಿವರಿಸಿದರೂ ಸ್ಪಷ್ಟವಾಗಿ ತಿಳಿಯುವುದು ಕಷ್ಟ. ಯೋಗಶಾಸ್ತ್ರ ತಿಳಿದ ಗುರುಗಳಲ್ಲಿ ಇದ್ದು ಅಭ್ಯಾಸ ಮಾಡಬೇಕು. ಇಲ್ಲದಿದ್ದರೆ ಅನರ್ಥಗಳುಂಟಾಗುತ್ತವೆ. ಇಲ್ಲಿ ಮಾಡಿರುವುದು ಬರಿಯ ದಿಗ್ದರ್ಶನ ಮಾತ್ರ. ದೇಹದಲ್ಲಿ ಆಲಸ್ಯವಾದಾಗಲೂ, ನೆಗಡಿ ಕೆಮ್ಮು ಇರುವಾಗಲೂ, ಅಜೀರ್ಣವಾಗಿ ಅಪಾನವಾಯುಗಳು ಹೋಗುತ್ತಿರುವಾಗಲೂ, ಆಶೌಚಕಾಲದಲ್ಲೂ ಪ್ರಾಣಾಯಾಮ ಮಾಡಬಾರದು. ಶ್ವಾಸನಿರೋಧ ಕಾಲದಲ್ಲಿ ಅಪಾನವಾಯುವು ಹೋದರಾಗಲೀ, ಕೆಮ್ಮಿನಿಂದ ತಟ್ಟನೆ ಉಸಿರು ಬಿಟ್ಟರಾಗಲೀ, ಪ್ರಾಣಾಪಾಯವೋ ಅಥವಾ ಅಂಗಹೀನವೋ ಆಗುವ ಸಂಭವವುಂಟು. ಆದ್ದರಿಂದ ಬಹಳ ಜಾಗರೂಕರಾಗಿದ್ದು ಮೇಲ್ಕಂಡ ದೋಷಗಳಿಗೆ ಆಸ್ಪದ ಕೊಡದಹಾಗೆ ಅಭ್ಯಾಸ ಮಾಡಬೇಕು.

ಪ್ರಕೃತ ಸಂಧ್ಯಾಕರ್ಮದಲ್ಲಿ ಪ್ರಾಣಾಯಾಮ ಮಾಡುವಾಗ ಮೊದಲು ಸಪ್ತವ್ಯಾಹೃತಿಗಳನ್ನು (ಓಂ ಭೂಃ–ಓಂ ಸತ್ಯಂ) ಮನಸ್ಸಿನಲ್ಲಿ ಸ್ಮರಿಸುತ್ತಾ ರೇಚಕವನ್ನೂ ನಂತರ (ಓಂ ತತ್ಸ–ಭೂರ್ಭುವಸ್ಸ್ವರೋಂ) ಎಂತ ಸ್ಮರಿಸುತ್ತಾ ಪೂರಕವನ್ನೂ ನಂತರ ವ್ಯಾಹೃತಿಗಳು (೭) ಗಾಯತ್ರೀಮಂತ್ರ ಮತ್ತು ಗಾಯತ್ರೀ ಶಿರಸ್ಸು ಸೇರಿದ ದಶೋಂಕಾರಗಾಯತ್ರಿಯನ್ನು (ಓಂ ಭೂಃ.... ಸ್ವರೋಂ) ಎಂದು ಕುಂಭಕದಲ್ಲಿ ಜಪ ಮಾಡಬೇಕು. ಪುನಃ ಮೇಲ್ಕಂಡಂತೆ ರೇಚಕ ಮಾಡಬೇಕು. ಹೀಗೆ ಮೂರಾವರ್ತಿ ಮಾಡುವುದು ಉತ್ತಮ. ಕೊನೆಯಪಕ್ಷ ಒಂದಾವರ್ತಿಯಾದರೂ ಮಾಡಲೇಬೇಕು. ಕೇವಲ ಅಶಕ್ತರು ನಾಸಿಕವನ್ನು ಪ್ರಣವಮುದ್ರಾದಿಂದ ಹಿಡಿದುಕೊಂಡು ಮಂತ್ರೋಚ್ಚಾರಣೆಯನ್ನು ಮಾತ್ರ ಮಾಡಿ ಮುಂದಿನ ಕರ್ಮವನ್ನು ಆರಂಭಿಸಬೇಕು.

ಪಂಚಾಂಗುಲಿಭಿರ್ನಾಸಾಗ್ರ— ಪೀಡನಂ ಪ್ರಣವಾಭಿಧಾ ।
ಮುದ್ರೇಯಂ ಸರ್ವಪಾಪಘ್ನೀ ವಾನಪ್ರಸ್ಥಗೃಹಸ್ಥಯೋಃ ॥

ಕನಿಷ್ಠಾನಾಮಿಕಾಂಗುಷ್ಠೈಃ ನಾಸಾಗ್ರಸ್ಯಪ್ರಪೀಡನಮ್ ।
ಓಂಕಾರಮುದ್ರಿಕಾಪ್ರೋಕ್ತಾ ಯತೀಶ್ಚಬ್ರಹ್ಮಚಾರಿಣಃ ॥

ಇತಿ. ಇದರ ಅರ್ಥವನ್ನೇ ಪ್ರಾಣಾಯಾಮ ಮಂತ್ರದ ಕೆಳಗೆ ಮೊದಲೇ ಸೂಚಿಸಿರುತ್ತೇನೆ.

ಪ್ರಾಣಾನಾಯಮ್ಯವಿಧಿವ—ದ್ವಾಗ್ಯತಃ ಸಂಯತೇಂದ್ರಿಯಃ ।
ಅಥಸಂಧ್ಯಾಮುಪಾಸಿಷ್ಯ ಇತಿ ಸಂಕಲ್ಪ್ಯ ಮಾರ್ಜಯೇತ್ ॥

ಎಂಬ ಭಾಗವತವಚನಾನುಸಾರ ಪ್ರಾಣಾಯಾಮವನ್ನು ಜಿತೇಂದ್ರಿಯನಾಗಿ ಮೌನದಿಂದ ವಿಧಿಪೂರ್ವಕ ಮಾಡಿ ಆಮೇಲೆ ದೇಶಕಾಲಗಳನ್ನು ಉಚ್ಚರಿಸಿ "ಸಂಧ್ಯಾಮುಪಾಸಿಷ್ಯೇ" ಎಂತ ಸಂಕಲ್ಪ ಮಾಡಿ ತರುವಾಯ ಮಾರ್ಜನ ಮಾಡಬೇಕು.

## ಸಂಕಲ್ಪ

"ಶುಭೇ ಶೋಭನೇ ಮುಹೂರ್ತೇ........" [ಕೆಲವು ದೇಶಗಳಲ್ಲಿ "ಶ್ರೀ ಗೋವಿಂದ ಗೋವಿಂದ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ" ಎಂದು ಹೇಳುವುದೂ ಉಂಟು.] ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ರೀ ಶ್ವೇತ-ವರಾಹಕಲ್ಪೇ ವೈವಸ್ವತ ಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡ-ಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನಶಕೇ ಬೌದ್ಧಾವತಾರೇ ಶ್ರೀ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರ-ಮಾನೇನ ....ಸಂವತ್ಸರೇ ....ಅಯನೇ ....ಋತೌ ....ಮಾಸೇ ....ಪಕ್ಷೇ ....ತಿಥೌ ....ವಾಸರಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭ-ಕರಣ ಏವಂ ಗುಣವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಸೂರ್ಯಾಂತರ್ಗತ (ಸೂರ್ಯಮಂಡಲಾಂತರ್ಗತ) ಮನುನಾಮಕ ಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಪ್ರಾತಃಸಂಧ್ಯಾ-ಮುಪಾಸಿಷ್ಯೇ ॥ (ಎಂತ ಕೈ ಜೋಡಿಸಿಕೊಂಡು ಸಂಕಲ್ಪ ಮಾಡಿ ಉದ್ಧರಣೆಯಿಂದ ನೀರನ್ನು ಬಲದ ಕೈಲಿ ಹಾಕಿಕೊಂಡು ಬಿಡಬೇಕು.)

ಅರ್ಥ : ಶುಭೇ ಶೋಭನೇ ಮುಹೂರ್ತೇ—ಅತ್ಯಂತ ಮಂಗಳಕರವಾದ ಮುಹೂರ್ತದಲ್ಲಿ, ಆದ್ಯಬ್ರಹ್ಮಣಃ—ಪರಮಾತ್ಮನಿಂದ ಸೃಷ್ಟಿಮಾಡಲ್ಪಟ್ಟ ಬ್ರಹ್ಮಾಂಡದ ಬಹಿರ್ಭಾಗದ ಸೃಷ್ಟಿಯಲ್ಲಿ ಮೊದಲು ಸೃಷ್ಟಿಸಲ್ಪಟ್ಟ ಚತುರ್ಮುಖ ಬ್ರಹ್ಮದೇವರ, ದ್ವಿತೀಯಪರಾರ್ಧೇ—ಪರಾಯುವಿನ ಎರಡನೇ ಭಾಗದಲ್ಲಿ [ಅಂದರೆ ಬ್ರಹ್ಮನ ನೂರು ವರ್ಷದಲ್ಲಿ ಮೊದಲಿನ ಐವತ್ತು [೫೦] ವರ್ಷ ಕಳೆದ ನಂತರ ಎರಡನೇ ಐವತ್ತು ವರ್ಷಗಳಲ್ಲಿ ನಡೆಯುತ್ತಿರುವ], ಶ್ರೀಶ್ವೇತ-ವರಾಹಕಲ್ಪೇ—ಶ್ವೇತವರಾಹವೆಂಬ ವಿಷ್ಣುವಿನ ಅವತಾರವಾದ ಕಲ್ಪದಲ್ಲಿ, ವೈವಸ್ವತಮನ್ವಂತರೇ—ವೈವಸ್ವತನಾಮಕವಾದ ಏಳನೇ ಮನ್ವಂತರದಲ್ಲಿ, ಅಷ್ಟಾವಿಂಶತಿತಮೇ—ಇಪ್ಪತ್ತೆಂಟನೇ, ಕಲಿಯುಗೇ—ಕಲಿಯುಗದಲ್ಲಿ, ಪ್ರಥಮ ಪಾದೇ—ಮೊದಲನೇ ಪಾದದಲ್ಲಿ, ಜಂಬೂದ್ವೀಪೇ—ಜಂಬೂ ಎಂತ ಪ್ರಸಿದ್ಧವಾದ ದ್ವೀಪದಲ್ಲಿ, ಭರತವರ್ಷೇ—ಋಷಭದೇವರ ಮಕ್ಕಳಾದ ಭರತರೆಂಬ ರಾಜರ್ಷಿಗಳು ಆಳಿದ್ದರಿಂದ ಭರತವರ್ಷವೆಂತ ಪ್ರಸಿದ್ಧಿ ಪಡೆದ ಖಂಡದಲ್ಲಿ, ಭರತ-ಖಂಡೇ—ಶ್ರೀ ದುಷ್ಯಂತರಾಜನ ಮಕ್ಕಳಾದ ಭರತರೆಂಬುವರು ರಾಜ್ಯವಾಳಿ ಸರ್ವತ್ರ ಯಜ್ಞಗಳನ್ನು ಮಾಡಿ ಭೂಮಿಯನ್ನು ಪವಿತ್ರಮಾಡಿದ ಕಾರಣ ಭರತಖಂಡ ಎಂತ ಹೆಸರನ್ನು ಹೊಂದಿರುವ ಕರ್ಮಭೂಮಿ ಎಂದು ಖ್ಯಾತ-ವಾದ ಭರತಖಂಡದಲ್ಲಿ, ದಂಡಕಾರಣ್ಯೇ*—ದಂಡಕ ಎಂಬ ಹೆಸರಿನ ಅರಣ್ಯದಲ್ಲಿ, ಗೋದಾವರ್ಯಾಃ ದಕ್ಷಿಣೇತೀರೇ—ಗೌತಮಋಷಿಗಳಿಗೆ ಪ್ರಾಪ್ತವಾಗಿದ್ದ ಗೋ-

---

* ನೂರು ಯೋಜನ ವಿಸ್ತೀರ್ಣವುಳ್ಳ ದಂಡಕ ಎಂಬ ರಾಜ್ಯವು ಇಕ್ಷ್ವಾಕುರಾಜನ ಪುತ್ರನಾದ ದಂಡಕ ಎಂಬುವನ ಆಳ್ವಿಕೆಗೆ ಸೇರಿತ್ತು. ಒಂದಾನೊಂದು ದಿವಸ ಈ ದಂಡಕ (ರಾಜ)ನು ಬೇಟೆಯಾಡುವುದಕ್ಕಾಗಿ ತನ್ನ ರಾಜ್ಯದಲ್ಲಿರತಕ್ಕ ವಿಂಧ್ಯಪರ್ವತದ ದಕ್ಷಿಣ ದಿಗ್ಭಾಗದ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಅಲ್ಲಿ ತಪಸ್ಸು ಮಾಡುತ್ತಿದ್ದ ಅರಜಾನಾಮಕಳಾದ ಶುಕ್ರಾಚಾರ್ಯರ ಪುತ್ರಿಯನ್ನು ನೋಡಿ ಅನಂಗಪೀಡಿತನಾಗಿ ಆಕೆಯಲ್ಲಿ ರಮಿಸಲು ಇಚ್ಛಿಸಿದನು. ಆ ಕನ್ಯೆಯು ದುರ್ಬುದ್ಧಿಯುಳ್ಳವನಾದ ಈ ರಾಜನಿಗೆ "ಅವಿವಾಹಿತಳಾದ ನನ್ನಲ್ಲಿ ಮನಸ್ಸು ಮಾಡುವುದು ಬಹಳ ಅಧರ್ಮವೆಂತಲೂ, ನಮ್ಮ ತಂದೆಗೆ ಈ ವಿಷಯ ತಿಳಿದರೆ ನಿನ್ನನ್ನು ಸುಟ್ಟುಬಿಡುವನೆಂತಲೂ" ಹೇಳಿದಳು. ಆದಾಗ್ಯೂ ಆ ರಾಜನು ಬಲಾತ್ಕರಿಸಿ ಆಕೆಯನ್ನು ಕ್ರೀಡಿಸಿ ತನ್ನ ರಾಜಧಾನಿಗೆ ಹಿಂದಿರುಗಿದನು. ಅನಂತರ ಆ

ಹತ್ಯಾದಿ ದೋಷವನ್ನು ಪರಿಹರಿಸಿದ ಮತ್ತು ವೃದ್ಧಗಂಗಾ ಎಂದು ಪ್ರಸಿದ್ಧವಾದ ಗೋದಾವರೀ ಎಂಬ ಮಹಾನದಿಯ ದಕ್ಷಿಣದಿಗ್ಭಾಗದ ತೀರದಲ್ಲಿ, ಶಾಲೀವಾಹನಶಕೇ-ಶಾಲೀವಾಹನನೆಂಬ ಶಕಪುರುಷನ ಹೆಸರಿನಿಂದ ಎಣಿಸಲ್ಪಡುವ ಶಕೆಯುಳ್ಳ, ಬೌದ್ಧಾವತಾರೇ-ಅಸುರರ ಮೋಹನಾರ್ಥವಾಗಿ ಮಾಡಿದ ಬೌದ್ಧಾವತಾರವೆಂಬ ವಿಷ್ಣುವಿನ ಅವತಾರವುಳ್ಳ, ರಾಮಕ್ಷೇತ್ರೇ-ತ್ರೇತಾಯುಗದಲ್ಲಿ ತಂದೆಯ ಆಜ್ಞಾನುಸಾರ ವನವಾಸ ಮಾಡಿದ ಶ್ರೀರಾಮದೇವರು ಸಂಚಾರ ಮಾಡಿದ್ದರಿಂದ ರಾಮಕ್ಷೇತ್ರವೆಂದು ಪ್ರಖ್ಯಾತವಾದ ಭೂಮಿಯಲ್ಲಿ, ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ-ಈ ದೇಶದಲ್ಲಿ ಆಚರಿಸುತ್ತಿರುವ ಚಂದ್ರನ ಸಂಚಾರಗತಿಯನ್ನು ಅನುಸರಿಸಿರುವ ಚಾಂದ್ರಮಾನದಿಂದ ಆಗುವ ವರ್ಷದಲ್ಲಿ, ಅಯನದಲ್ಲಿ, ಋತುವಿನಲ್ಲಿ, ತಿಂಗಳಲ್ಲಿ, ಪಕ್ಷದಲ್ಲಿ, ಪ್ರತಿಪದಾದಿ ತಿಥಿಗಳಲ್ಲಿ, ಆದಿತ್ಯಾದಿ ವಾರವಿಂದ ಕೂಡಿದ, ಶುಭಕರಗಳಾದ ನಕ್ಷತ್ರ, ಯೋಗ, ಕರಣಗಳಿಂದ ಯುಕ್ತವಾದ ಶುಭದಿನದಲ್ಲಿ, ಸೂರ್ಯಾಂತರ್ಗತ-ಸೂರ್ಯದೇವತಾ ಅಥವಾ ಸೂರ್ಯಮಂಡಲಮಧ್ಯದಲ್ಲಿಗುವ, ಮನುನಾಮಕ-ಮಂತ್ರಪ್ರತಿಪಾದ್ಯನಾದ ಪ್ರಯುಕ್ತ 'ಮನು' ಎಂತ ಹೆಸರುಳ್ಳ, ಭಾರತೀರಮಣ ಮುಖ್ಯಪ್ರಾಣಾಂತರ್ಗತ-ಶ್ರೀ ಭಾರತೀದೇವಿಗೆ ಗಂಡನಾದ ಮುಖ್ಯವಾಯುವಿನ ವಳಗೆ ನಿಯಾಮಕನಾಗಿ ಇರುವ, ಸವಿತೃನಾಮಕ-ಸಮಸ್ತ ಜಗತ್ತನ್ನು ಪ್ರಸವಿಸುವವನಾದ್ದರಿಂದ 'ಸವಿತೃ'

---

ಕನ್ಯೆಯು ತನಗೆ ಪ್ರಾಪ್ತವಾದ ದುರವಸ್ಥೆಗಾಗಿ ದುಃಖಿಸುತ್ತಾ ಪ್ರಲಾಪ ಮಾಡತೊಡಗಿದಳು. ಆ ಕಾಲದಲ್ಲಿ ತಂದೆಯಾದ ಶುಕ್ರಾಚಾರ್ಯರು ಅಲ್ಲಿಗೆ ಬಂದು ನಂತರ ಸಖಿಯಿಂದ ನಡೆದ ವೃತ್ತಾಂತವನ್ನು ತಿಳಿದು ಕುಪಿತರಾಗಿ 'ನನ್ನ ಪುತ್ರಿಯನ್ನು ಕೆಡಿಸಿದ ಈ ದಂಡಕನ ರಾಜ್ಯವು ಏಳು ದಿವಸಗಳೊಳಗಾಗಿ ಸುಟ್ಟು ಭಸ್ಮವಾಗಲಿ' ಎಂದು ಶಪಿಸಿದರು. ಈ ವೃತ್ತಾಂತವನ್ನು ತಿಳಿದ ಪ್ರಜೆಗಳು ಆ ದೇಶವನ್ನು ಬಿಟ್ಟು ಬೇರೆ ಪ್ರದೇಶಗಳಿಗೆ ಶೀಘ್ರವಾಗಿ ಹೊರಟರು. ನಂತರ ಇಂದ್ರದೇವರಿಂದ ಸುರಿಸಲ್ಪಟ್ಟ ಧೂಳಿನ ಮಳೆಯಿಂದ ಸಮಸ್ತ ರಾಜ್ಯವೂ ಭಸ್ಮವಾಯಿತು. ಬಹುಕಾಲ ಅನೇಕ ಋಷಿಗಳು ಈ ಪ್ರದೇಶದಲ್ಲಿ ತಪಸ್ಸು ಮಾಡಿ ಸಿದ್ಧಿಯನ್ನು ಪಡೆದರು. ಆದ್ದರಿಂದ ಈ ಪ್ರದೇಶಕ್ಕೆ 'ದಂಡಕಾರಣ್ಯ' ಎಂಬ ಹೆಸರು ಬಂದಿತು

ಎಂತ ಹೆಸರುಳ್ಳ ಶ್ರೀ ಲಕ್ಷ್ಮೀನಾರಾಯಣನ ಪ್ರೇರಣೆಯಿಂದ ಶ್ರೀ ಲಕ್ಷ್ಮೀನಾರಾಯಣನ ಸಂತೋಷಕ್ಕಾಗಿ (ಅನುಗ್ರಹ ಪಡೆಯುವುದಕ್ಕಾಗಿ) ಪ್ರಾತಃ-ಪ್ರಾತರ್ನಾಮಕ ಕಾಲವಿಶೇಷದಲ್ಲಿ, ಸಂಧ್ಯಾ-ಸಂಧ್ಯಾವನ್ನು ಅಂದರೆ ಸಂಧ್ಯಾಕಾಲನಿಯಾಮಕನಾದ ಪರಬ್ರಹ್ಮನನ್ನು, ಉಪಾಸಿಷ್ಯೇ-ಉಪಾಸನೆ (ಧ್ಯಾನ) ಮಾಡುತ್ತೇನೆ ಎಂತ ಅರ್ಥ.

ಹೀಗೆ ಅರ್ಥಾನುಸಂಧಾನಪೂರ್ವಕ ಸಂಕಲ್ಪ ಮಾಡಿ ನಂತರ ಮಾರ್ಜನ ಆರಂಭಿಸಬೇಕು. ಮೇಲ್ಕಂಡ ಸಂಕಲ್ಪವಿಧಾನದಲ್ಲಿ ಶ್ರೀಮದ್ಭಾಗವತದ ಪಂಚಮಸ್ಕಂಧದಲ್ಲಿ ವರ್ಣಿತಗಳಾಗಿರುವ ಭೂಗೋಳ, ಖಗೋಳ ಮತ್ತು ಮಹಾಪುರುಷರ ಚರಿತ್ರೆಗಳು ಅಡಕವಾಗಿರುತ್ತವೆ. ಭಾಗವತವನ್ನು ಓದಿರತಕ್ಕವರಿಗೆ ಆ ಇತಿಹಾಸಗಳನ್ನು ಸ್ಮರಣೆಗೆ ತಂದುಕೊಡುತ್ತವೆ. ಆದ್ದರಿಂದ ಈ ಸಂಕಲ್ಪವು ಮನಸ್ಸನ್ನು ಪರಿಶುದ್ಧವನ್ನಾಗಿ ಮಾಡಿ ಮುಂದಿನ ಬ್ರಹ್ಮೋಪಾಸನಾರೂಪವಾದ ಸಂಧ್ಯಾವಂದನೆಯನ್ನು ಮಾಡುವುದಕ್ಕೆ ಅನುಕೂಲವಾಗುವುದು. ಆದ್ದರಿಂದ ಆದಿಯಲ್ಲಿ ಸಂಕಲ್ಪ ಕರ್ತವ್ಯಕರ್ಮವಾಗಿರುತ್ತೆ.

ಮೇಲ್ಕಂಡ ಸಂಕಲ್ಪದಲ್ಲಿ "ಭರತಖಂಡೇ" ಎಂಬ ಶಬ್ದಪ್ರಯೋಗವಿರುವುದು ಮಹತ್ತರವಾದ ಪ್ರಮೇಯವನ್ನು ಸೂಚಿಸುತ್ತದೆ. ಅದೇನೆಂದರೆ ಪರಮಾತ್ಮನಿಂದ ಸೃಷ್ಟವಾದ ಬ್ರಹ್ಮಾಂಡದಲ್ಲಿ ಮುಕ್ತಿಗಾಗಿ ಸಾಧನಮಾಡಲು ಯೋಗ್ಯವಾದ ಸ್ಥಾನ ಯಾವುದು? ಎಂತ ಶಂಕಾ ಬಂದರೆ ಅದಕ್ಕೆ ಉತ್ತರ ಕರ್ಮಭೂಮಿಯಾದ 'ಭರತಖಂಡ' ಒಂದೇ ಸ್ಥಳವೆಂದು ಅನೇಕ ಪುರಾಣಗಳಲ್ಲಿ ಸ್ಪಷ್ಟವಾಗಿ ಉಕ್ತವಾಗಿದೆ.

"ಯತ್ರ ಕೃತಾನಿ ಶುಭಾಶುಭಕರ್ಮಾಣಿ ಸ್ವರ್ಗನರಕ ಸಾಧನಾನಿ ಭವಂತಿ ಸಾ ಕರ್ಮಭೂಮಿರಿತ್ಯುಚ್ಯತೇ" ಎಂಬ ವಿಗ್ರಹಾನುಸಾರ ಯಾವ ದೇಶದಲ್ಲಿ ಮಾಡಲ್ಪಟ್ಟ ಶುಭಗಳಾದ ಮತ್ತು ಅಶುಭಗಳಾದ ಕರ್ಮಗಳು ಸ್ವರ್ಗನರಕಗಳಿಗೆ ಸಾಧನಗಳಾಗುತ್ತವೆಯೋ ಆ ಪ್ರದೇಶವು "ಕರ್ಮಭೂಮಿ" ಎಂದೆನಿಸುತ್ತದೆ. ಭಾಗವತ, ವಿಷ್ಣುರಹಸ್ಯ, ಭಾರತಾದಿಗಳಲ್ಲಿ "ಭರತಖಂಡ"ವನ್ನು ಮಾತ್ರ ಕರ್ಮಭೂಮಿ ಎಂದು ವ್ಯವಹರಿಸಿರುತ್ತಾರೆ. ವ್ಯತಿರಿಕ್ತ ದೇಶಗಳು ಭೋಗಭೂಮಿಗಳೇ ಹೊರತು ಸಾಧನಯೋಗ್ಯವಾದವುಗಳಲ್ಲ.

ಆದ್ದರಿಂದ ವೈದಿಕಕರ್ಮಾಚರಣೆ ಮಾಡುವವರೂ, ಮುಮುಕ್ಷುಗಳಾದವರೂ ಅನ್ಯದೇಶಗಳಲ್ಲಿ ವಾಸ ಮಾಡಬಾರದು ಎಂಬ ಪ್ರಮೇಯವನ್ನು ಸೂಚಿಸುತ್ತದೆ. ಗಮನಕ್ಕೂ ಮತ್ತು ವಾಸಕ್ಕೂ ಅನರ್ಹಗಳಾದ ದೇಶಗಳು ಯಾವುವೆಂಬುದನ್ನು ಸ್ಮೃತಿಮುಕ್ತಾವಳೀ, ಧರ್ಮಸಿಂಧು ಮುಂತಾದ ಧರ್ಮಶಾಸ್ತ್ರಗಳಲ್ಲಿ ಸಪ್ರಮಾಣವಾಗಿ ವಿವರಿಸಿರುತ್ತಾರೆ. ಅದನ್ನು ನೋಡಿ ತಿಳಿದುಕೊಳ್ಳಬಹುದು. ಪ್ರಕೃತ ಭರತಖಂಡದ ಪ್ರಶಂಸೆಯನ್ನು ಮಾಡಿರುವ ಭಾಗವತದ ಶ್ಲೋಕವನ್ನು ಮಾತ್ರ ಇಲ್ಲಿ ಅರ್ಥಸಹಿತ ಕೊಡಲಾಗಿದೆ :

ಅಹೋಬತೈಷಾಂ ಕಿಮಕಾರಿ ಶೋಭನಂ
ಪ್ರಸನ್ನ ಏಷಾಂ ಸ್ವಿದುತ ಸ್ವಯಂ ಹರಿಃ ।
ಯೈರ್ಜನ್ಮ ಲಬ್ಧಂ ನೃಪ! ಭಾರತಾಜಿರೇ
ಮುಕುಂದಸೇವೌ ಪಯಿಕಸ್ಪೃಹಾತ್ಮಭಿಃ ॥ ೧ ॥
ಕಲ್ಪಾಯುಷಾಂ ಸ್ಥಾನಜಯಾತ್ಪುನರ್ಭವಾತ್
ಕ್ಷಣಾಯುಷಾಂ ಭಾರತಭೂಜಯೋವರಃ ।
ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ
ಸಂನ್ಯಸ್ಯ ಸಂಯಾಂತ್ಯ ಭಯಂ ಪದಂ ಹರೇಃ ॥ ೨ ॥

(೧) ಮೋಕ್ಷಪ್ರದನಾದ್ದರಿಂದ ಮುಕುಂದನೆಂದು ಪ್ರಸಿದ್ಧನಾದ ಪರಮಾತ್ಮನ ಸೇವಾಕ್ಕೆ ಉಪಯೋಗವಾಗತಕ್ಕ ಮನಸ್ಸುಳ್ಳ ಯಾವ ಜನಗಳಿಂದ ಈ ಭರತಖಂಡಾಖ್ಯ ದೇಶದಲ್ಲಿ ಮನುಷ್ಯಯೋನಿಗಳಲ್ಲಿ ಜನ್ಮ ಹೊಂದಲ್ಪಟ್ಟಿರುತ್ತೋ ಅಂಥವರುಗಳಿಂದ ಏನು ಪುಣ್ಯವು ಮಾಡಲ್ಪಟ್ಟಿರುತ್ತೋ ತಿಳಿಯದು! ಆಶ್ಚರ್ಯವು. ಶ್ರೀಹರಿಯು ಅವರುಗಳಿಗೆ ಅವರ ಪುಣ್ಯಾದಿಗಳನ್ನು ಅಪೇಕ್ಷೆ ಮಾಡದೇನೆ ಪ್ರಸನ್ನನಾಗಿದ್ದಾನೋ ಏನೋ! ಇಲ್ಲದಿದ್ದರೆ ಭರತಖಂಡದಲ್ಲಿ ಜನ್ಮ ಹೇಗೆ ಬರುತ್ತಿತ್ತು? ಎಂದು ದೇವತೆಗಳು ಪ್ರಶಂಸಾ ಮಾಡಿದ್ದಾರೆ.

(೨) ಯಾವ ಕಾರಣದಿಂದ ಸರ್ವದಾ ಭಗವಂತನಲ್ಲಿ ಮನಸ್ಸನ್ನು ನಿಲ್ಲಿಸಲು ಆಗದಿದ್ದರೂ ಜಿತಮನಸ್ಕರಾದವರು ಯಾವ ಭರತಖಂಡದಲ್ಲಿ ಉತ್ಪನ್ನವಾದ ಕ್ಷಣಮಾತ್ರದಲ್ಲಿ ನಾಶವಾಗತಕ್ಕ ಶರೀರದಿಂದಲೇ ಮಾಡಲ್ಪಡುವ

ಸತ್ಕರ್ಮವನ್ನು ಪರಮಾತ್ಮನಲ್ಲಿ ಚೆನ್ನಾಗಿ ಸಮರ್ಪಿಸಿ (ಅಂದರೆ ಶ್ರೀಹರಿಯಲ್ಲಿ ಒಂದು ಕ್ಷಣಕಾಲ ಮನಸ್ಸು ನಿಲ್ಲಿಸುವ ಮಾತ್ರದಿಂದಲೇ) ಶ್ರೀಹರಿಯ ಪುನ-ರಾವೃತ್ತಿರೂಪ ಭಯರಹಿತವಾದ ಸ್ಥಾನವನ್ನು ಹೊಂದುತ್ತಾರೆಯೋ ಆದ-ಕಾರಣದಿಂದ ಕಲ್ಪಪರ್ಯಂತ ಆಯುಷ್ಯವನ್ನು ಕೊಡತಕ್ಕ ಪುನರ್ಜನ್ಮಕ್ಕೆ ಕಾರಣೀಭೂತಗಳಾದ ಸ್ವರ್ಗಾದಿ ಸ್ಥಾನಗಳನ್ನು ಹೊಂದುವುದಕ್ಕಿಂತ ಕ್ಷಣಾ-ಯುಷ್ಯಪ್ರದವಾದ ಭರತಭೂಮಿಯಲ್ಲಿ ಮನುಷ್ಯಯೋನಿಯಲ್ಲಿ ಜನ್ಮವನ್ನು ಹೊಂದುವುದು ಶ್ರೇಷ್ಠವೆಂದು ನಾವು ತಿಳಿಯುತ್ತೇವೆಂದು ದೇವತೆಗಳು ಹೇಳು ತ್ತಾರೆ. ದೇವತೆಗಳಿಂದ ಸ್ತುತ್ಯವಾದ ಸುಲಭವಾಗಿ ಮೋಕ್ಷವನ್ನು ಸಾಧನೆ ಮಾಡಲು ಯೋಗ್ಯವಾದ ಈ ಭರತಖಂಡದಲ್ಲಿ, ಅದರಲ್ಲೂ ಮನುಷ್ಯಯೋನಿ ಯಲ್ಲಿ, ಅದರಲ್ಲೂ ಸದ್ವೈಷ್ಣವಬ್ರಾಹ್ಮಣ ಯೋನಿಯಲ್ಲಿ ಜನ್ಮ ಬಂದಿರುವಾಗ್ಯೆ ಅಂತಹ ಜನ್ಮವನ್ನು ಪ್ರಾಪಂಚಿಕ ವಿಷಯಸುಖಕ್ಕೆ ಈಡುಮಾಡಿ ಹಣದಾಸ ಯಿಂದ ವಿದೇಶಗಳಿಗೆ ಅಂದರೆ ಭರತಖಂಡದಿಂದ ವ್ಯತಿರಿಕ್ತಗಳಾದ ಮ್ಲೇಂಛ-ದೇಶಗಳಿಗೆ ಹೋಗಿ ಹಾಳುಮಾಡಿಕೊಳ್ಳುವುದಕ್ಕಿಂತಲೂ ದಡ್ಡತನವು ಮತ್ತೊಂದು ಇಲ್ಲವೆಂಬ ಮಹಾಪ್ರಮೇಯವನ್ನು "ಭರತಖಂಡ" ಎಂಬ ಶಬ್ದವು ಜ್ಞಾಪಕಕ್ಕೆ ತಂದುಕೊಡುತ್ತದೆ. ಪ್ರಕೃತ ಸಂಕಲ್ಪದಲ್ಲಿ ಭರತ-ಖಂಡದಲ್ಲಿಯೇನೇ ದೇಶಭೇದದಿಂದ ಅನೇಕ ಪ್ರಕಾರಗಳುಂಟು. ಆಯಾದೇಶಕ್ಕೆ ಅನುಗುಣವಾದ ಸಂಕಲ್ಪ ಮಾಡಬೇಕಾದದ್ದು ಕರ್ತವ್ಯ. ಸಂಕಲ್ಪಾನಂತರ ಆಪೋಹಿಷ್ಠಾದಿ ಮಂತ್ರಗಳಿಂದ ಮಾರ್ಜನ ಮಾಡಿಕೊಳ್ಳಬೇಕು. ಅದರ ಕ್ರಮ ಮತ್ತು ನಿಯಮಗಳು ಮುಂದೆ ವಿವರಿಸಲ್ಪಟ್ಟಿವೆ :

ಆಪೋಹಿಷ್ಠ್ಯಾದ್ಯೃಚೌ ಕುರ್ಯಾತ್—ನ್ಮಾರ್ಜನಂ ಚ ಕುಶೋದಕೈಃ ।
ಪ್ರಣವೇನ ತು ಸಂಯುಕ್ತಂ ಕ್ಷಿಪೇದ್ವಾರಿ ಪದೇಪದೇ ॥ — ಇತಿ ವ್ಯಾಸಃ
ಮಾರ್ಜನಾರ್ಚನ ಬಲಿಕರ್ಮಭೋಜನಾನಿ ದೇವತೀರ್ಥೇನ ಕುರ್ಯಾತ್ ॥
ಪ್ರಾತರುತ್ಥಾಯ ಸತತಂ ಕುರ್ಯಾನ್ಮಾರ್ಜನಮಾತ್ಮನಃ ।
ಸಾಯಂ ಚ ನಿತ್ಯಮೇತಾಭಿಃ ಕುರ್ಯಾನ್ಮಾರ್ಜನಮಾತ್ಮನಃ ।
ಸಂವತ್ಸರಕೃತಂ ಪಾಪಂ ಮಾರ್ಜನಾಂತೇ ವಿನಶ್ಯತಿ ॥

— ಇತಿ ಋಗ್ವಿಧಾನೇ

ವಿನಾ ಯಸ್ತುಲಸೀಂ ಕುರ್ಯಾತ್ ಸಂಧ್ಯಾಕಾಲೇ ತು ಮಾರ್ಜನಮ್
ತತ್ಸರ್ವಂ ರಾಕ್ಷಸಹೃತಂ ನರಕಂ ಚ ಪ್ರಯಚ್ಛತಿ ।
ತುಲಸೀಪತ್ರಗಲಿತಂ ಯತ್ತೋಯಂ ಶಿರಸಾ ವಹೇತ್ ।
ಗಂಗಾಪುಣ್ಯಮವಾಪ್ನೋತಿ ಶತಧೇನು ಫಲಂ ಭವೇತ್॥ —ಇತಿ ಃ
ಭೂಮೌ ಶಿರಸಿ ಚಾಕಾಶೇ ಆಕಾಶೇ ಭುವಿಮಸ್ತಕೇ ।
ಮಸ್ತಕೇ ಚ ತಥಾಕಾಶೇ ಭೂಮೌ ಚ ನವಧಾ ಕ್ಷಿಪೇತ್ ॥
ರಜಸ್ತಮೋ ಮೋಹಜಾತಾನ್ ಜಾಗ್ರತ್ಸ್ವಪ್ನಸುಷುಪ್ತಿಜಾನ್ ।
ಮನೋವಾಕ್ಕಾಯಜಾನ್ದೋಷಾನ್ ನವೈತಾನ್ನವಭಿರ್ದಹೇತ್ ॥
ಪಾದೇ ಪಾದೇ ಕ್ಷಿಪೇದ್ವಾರಿ ಬ್ರಹ್ಮಹತ್ಯಾಂ ವ್ಯಪೋಹತಿ ।
ಧರಾಚ್ಯುತೇನ ತೋಯೇನ ಸಂಧ್ಯೋಪಾಸ್ತಿರ್ವಿಗರ್ಹಿತಾ ।
ಪಿತರೋ ನ ಪ್ರಶಂಸಂತಿ ನ ಪ್ರಶಂಸಂತಿ ದೇವತಾಃ ॥
ಮಂತ್ರಪೂತಂ ಜಲಂ ಯಸ್ಮಾತ್ ಆಪೋಹಿಷ್ಠೇತಿ ಮಂತ್ರಿತಮ್ ।
ಪತತ್ಯ ಶುಚಿದೇಹೇಷು ತಸ್ಮಾತ್ತಂ ಪರಿವರ್ಜಯೇತ್ ॥

ಇತ್ಯಾದಿ ಪ್ರಮಾಣಗಳು ಮಾರ್ಜನ ನಿಯಮ ಮತ್ತು ಅದರ ಫಲಗಳನ್ನು ವಿವರಿಸುತ್ತವೆ.

ಅದೇನೆಂದರೆ, ದರ್ಭೆಯಿಂದ ಸ್ವೀಕೃತಗಳಾದ ಉದಕಗಳಿಂದ ಓಂಕಾರ ಸಹಿತವಾಗಿ ಆಪೋಹಿಷ್ಠಾದಿ ವೇದಋಕ್ಕುಗಳನ್ನು ಉಚ್ಚಾರ ಮಾಡುತ್ತಾ ಪಾದಪಾದಕ್ಕೂ (ಅಂದರೆ ಆಪೋಹಿಷ್ಠಾದಿ ಮಂತ್ರಪಾದಗಳಿಂದ) ಮುಂದೆ ಹೇಳಿರುವ ರೀತ್ಯಾ ಸ್ಥಾನವಿಶೇಷಗಳನ್ನು ಪ್ರೋಕ್ಷಣ ಮಾಡಿಕೊಳ್ಳಬೇಕು.

ಮಾರ್ಜನ, ಪೂಜಾ, ಬಲಿಹರಣ ರೂಪಗಳಾದ ಕರ್ಮಗಳನ್ನು ಮತ್ತು ಭೋಜನವನ್ನು ದೇವತೀರ್ಥದಿಂದ, ಅಂದರೆ ಅಂಗುಲಿಗಳ ಅಗ್ರದಿಂದ ಮಾಡಬೇಕು.

ಪ್ರತಿನಿತ್ಯ ಪ್ರಾತಃಕಾಲದಲ್ಲಿ ಎದ್ದು ತನ್ನ ದೇಹವನ್ನು ಮಾರ್ಜನ ಮಾಡಿಕೊಳ್ಳಬೇಕು. ಹಾಗೇನೇ ನಿತ್ಯವೂ ಸಾಯಂಕಾಲದಲ್ಲಿಯೂ ಮೇಲ್ಕಂಡ ಋಕ್ಕುಗಳಿಂದ ಮಾರ್ಜನ ಮಾಡಿಕೊಳ್ಳಬೇಕು. ಹೀಗೆ ಮಾರ್ಜನ ಮಾಡಿಕೊಳ್ಳುವುದರಿಂದ ಒಂದು ವರ್ಷದಲ್ಲಿ ಮಾಡಲ್ಪಟ್ಟ ಪಾಪಗಳು ನಾಶವಾಗುತ್ತವೆ.

ಇನ್ನು ನಿರ್ಮಾಲ್ಯತುಲಸಿಯಿಂದ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು. ಇಲ್ಲದಿದ್ದರೆ ಅನರ್ಥವಾಗುತ್ತದೆ ಎಂತ ಮುಂದಿನ ಪ್ರಮಾಣಗಳು ಸೂಚಿಸುತ್ತವೆ. ಯಾವಾತನು ತುಲಸೀ ಇಲ್ಲದೆ ಸಂಧ್ಯಾಕಾಲಗಳಲ್ಲಿ ಮಾರ್ಜನೆ ಮಾಡಿಕೊಳ್ಳುತ್ತಾನೋ ಅವನಿಂದ ಮಾಡಲ್ಪಟ್ಟ ಕರ್ಮಫಲವು ರಾಕ್ಷಸರಿಂದ ಅಪಹರಿಸಲ್ಪಡುತ್ತದೆ ಮತ್ತು ನರಕವನ್ನೂ ಉಂಟುಮಾಡುತ್ತದೆ. ತುಲಸೀಸಹಿತವಾದ ಮಾರ್ಜನವು ಉತ್ತಮಫಲವನ್ನುಂಟುಮಾಡುತ್ತದೆಂತ ಮುಂದಿನ ವಾಕ್ಯ ಹೇಳುತ್ತದೆ. ತುಲಸೀಪತ್ರದಿಂದ ಸ್ವೀಕೃತವಾದ ಯಾವ ಉದಕವನ್ನು ಶಿರಸ್ಸಿನಿಂದ ಯಾರು ಧರಿಸುತ್ತಾರೋ ಅವರು ಗಂಗಾಸ್ನಾನ ಮಾಡಿದ ಫಲವನ್ನೂ ನೂರಾರು ಗೋದಾನ ಮಾಡಿದ ಫಲವನ್ನೂ ಹೊಂದುತ್ತಾರೆ. ಇನ್ನು ಮಾರ್ಜನ ಮಾಡಬೇಕಾದ ಸ್ಥಳವಿಶೇಷಗಳನ್ನು ಹೇಳುತ್ತೇವೆ. ಪ್ರಮಾಣಶ್ಲೋಕದಲ್ಲಿ ಕಂಡುಬರುವ ಭೂಮಿ ಎಂಬ ಪದಕ್ಕೆ ಪಾದ ಎಂತಲೂ, ಆಕಾಶ ಎಂಬ ಪದಕ್ಕೆ ಹೃದಯ ಎಂತಲೂ ಅರ್ಥ ಮಾಡಬೇಕು. ಆಪೋಹಿಷ್ಠಾದಿ ಮೂರು ಋಕ್ಕುಗಳಲ್ಲಿ ಒಂಭತ್ತು ಪಾದಗಳುಂಟು. ಒಂದೊಂದು ಪಾದದಿಂದ ಮೂರು ಸ್ಥಳಗಳನ್ನು ಪ್ರೋಕ್ಷಿಸಬೇಕು. ಹೇಗೆಂದರೆ ಮೊದಲು ಪಾದ, ಶಿರಸ್ಸು, ಹೃದಯ ; ಎರಡನೇ ಸಲ ಹೃದಯ, ಪಾದ, ಶಿರಸ್ಸು; ಮೂರನೇ ಸಲ ಶಿರಸ್ಸು, ಹೃದಯ, ಪಾದಗಳನ್ನು ಪ್ರೋಕ್ಷಣೆ ಮಾಡಬೇಕು. ಹೀಗೆ ಮೂರು ಋಕ್ಕುಗಳಿಂದ ಒಂಭತ್ತು ಸಲ ಮಾರ್ಜನ ಮಾಡಿಕೊಳ್ಳಬೇಕು. ಹೀಗೆ ಒಂಭತ್ತು ಪಾದಗಳಿಂದ ಕೃತವಾದ ಮಾರ್ಜನವು ರಜೋಗುಣ, ತಮೋಗುಣಗಳಿಂದಲೂ, ಭ್ರಾಂತಿಯಿಂದಲೂ ಉಂಟಾದ ಮತ್ತು ಜಾಗ್ರತ್, ಸ್ವಪ್ನ, ನಿದ್ರಾದಿಗಳಿಂದಲೂ ಉಂಟಾದ ಪಾಪಗಳನ್ನೂ ಮತ್ತು ಮನಸ್ಸು ವಾಗಿಂದ್ರಿಯ, ದೇಹಾದಿಗಳಿಂದ ಉತ್ಪನ್ನಗಳಾದ ಪಾಪಗಳನ್ನೂ ಸುಟ್ಟುಬಿಡುತ್ತದೆ. ಅಷ್ಟೇ ಅಲ್ಲ, ವೇದದ ಪಾದಗಳಿಂದ ನೀರು ಹಾಕೋಣವು ಬ್ರಹ್ಮಹತ್ಯಾವನ್ನೂ ಪರಿಹರಿಸುತ್ತದೆ. ಅಂತರಿಕ್ಷದಿಂದ ಧಾರಾಕಾರವಾಗಿ ಧುಮುಕುತ್ತಿರುವ ನೀರಿನಿಂದ ಸಂಧ್ಯಾವಂದನಕರ್ಮ ಮಾಡುವುದು ನಿಂದಿತವಾದದ್ದು.

ಧಾರಾಚ್ಯುತವಾದ ಉದಕದಲ್ಲಿ ಕರ್ಮ ಮಾಡುವುದನ್ನು ಪಿತೃಗಳೂ ಮತ್ತು ದೇವತೆಗಳೂ ಪ್ರಶಂಸೆ ಮಾಡುವುದಿಲ್ಲ. ಆದ್ದರಿಂದ ಪಧ್ಯುಕ್ತಗಳಾದ ಪಾತ್ರೆಗಳಲ್ಲಿ ಉದಕವನ್ನು ಸ್ವೀಕರಿಸಿಕೊಂಡು ಅದರಿಂದ ಸತ್ಕರ್ಮಾನುಷ್ಠಾನ ಮಾಡಬೇಕೆಂತ ಅಭಿಪ್ರಾಯ. ಮಾರ್ಜನಾದಿ ಕರ್ಮಗಳಿಗೆ ಯೋಗ್ಯಗಳಾದ ಪಾತ್ರವಿಶೇಷಗಳನ್ನು ಪ್ರಮಾಣಾಂತರದಿಂದ ಮುಂದೆ ತಿಳಿಸಲ್ಪಡುತ್ತದೆ. ಪ್ರಕೃತದಲ್ಲಿ ಆಪೋಹಿಷ್ಠಾದಿ ಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟು ಪವಿತ್ರವಾದ ಉದಕವು ಯಾವ ಕಾರಣದಿಂದ ನಮ್ಮ ದೇಹದ ಅಶುಚಿ ಭಾಗಗಳಲ್ಲಿ ಪ್ರೋಕ್ಷಿಸಲ್ಪಟ್ಟಿರುತ್ತದೆಯೋ ಆದ್ದರಿಂದ ಆ ಉದಕವನ್ನು ಚೆಲ್ಲಬೇಕು. ಬೇರೆ ಉದಕವನ್ನು ಹಸ್ತದಲ್ಲಿ ಹಾಕಿಕೊಂಡು ಸೂರ್ಯಶ್ಚೇತ್ಯಾದಿ ಮಂತ್ರಗಳಿಂದ ಅಭಿಮಂತ್ರಿಸಿ ಪ್ರಾಶನ ಮಾಡಬೇಕು.

ಮಾರ್ಜನಪಾತ್ರಗಳು ಯಾವುವು, ಅಂದರೆ

ನಸ್ಯಾಂ ತೀರ್ಥೇ ಹ್ರದೇವಾಪಿ ಭಾಜನೇ ಮೃಣ್ಮಯೇಽಪಿ ವಾ ।
ಔದುಂಬರೇಥಸೌವರ್ಣೇ ರಾಜತೇ ದಾರುಸಂಭವೇ ॥
ಕೃತ್ವಾಥ ವಾಮಹಸ್ತೇ ವಾ ಸಂಧ್ಯೋಪಾಸ್ತಿಂ ಸಮಾಚರೇತ್ ।
ವಾಮಹಸ್ತೇ ಜಲಂ ಕೃತ್ವಾ ಯೋ ತು ಸಂಧ್ಯಾಮುಪಾಸತೇ ॥
ಸಾ ಸಂಧ್ಯಾ ವೃಷಲೀ ಜ್ಞೇಯಾ ಹ್ಯಾಸುರಾಸ್ತ್ರೈಸ್ತು ತರ್ಪಿತಾಃ ॥

—ಬ್ರಹ್ಮವಚನ

ನದಿಯಲ್ಲಾಗಲೀ ಪುಷ್ಕರಾದಿ ತೀರ್ಥಗಳಲ್ಲಾಗಲೀ ಅಥವಾ ಮಡುವಿನಲ್ಲಾಗಲೀ ಮಣ್ಣಿನ ಪಾತ್ರೆಯಲ್ಲಿ ಅಥವಾ ಅತ್ತಿಯಮರದ ಸಂಬಂಧಿಯಾದ ಪಾತ್ರೆಯಲ್ಲಾಗಲೀ, ಭಂಗಾರ, ಬೆಳ್ಳಿ ಅಥವಾ ಮರದ ಪಾತ್ರೆಗಳಲ್ಲಾಗಲೀ ಎಡದ ಹಸ್ತದಲ್ಲಾಗಲೀ ನೀರನ್ನು ಹಾಕಿಕೊಂಡು ಸಂಧ್ಯೋಪಾಸನೆಯನ್ನು (ಅಂದರೆ ಸಂಧ್ಯಾಂಗ ಮಾರ್ಜನವನ್ನು) ಮಾಡಿಕೊಳ್ಳಬೇಕು. ವಾಮಹಸ್ತದಲ್ಲಿ ನೀರನ್ನು ಇಟ್ಟುಕೊಂಡು ಸಂಧ್ಯೋಪಾಸನೆಯನ್ನು ಯಾರು ಮಾಡುತ್ತಾರೋ ಆ ಸಂಧ್ಯೆಯು ವೃಷಲೀ (ಶೂದ್ರಿಯು) ಎಂದೆನಿಸುತ್ತದೆ. ಆ ಸಂಧ್ಯೋಪಾಸನೆಯಿಂದ ಅಸುರರು ತೃಪ್ತರಾಗುತ್ತಾರೆ. ಸಾತ್ವಿಕವಾಗುವುದಿಲ್ಲ ಎಂತ ಅಭಿಪ್ರಾಯ. ಹಾಗಾದರೆ ಮೇಲಿನ ಪ್ರಮಾಣದಲ್ಲಿ ವಾಮಹಸ್ತದಲ್ಲಿ

ನೀರು ಹಾಕಿಕೊಂಡು ಮಾರ್ಜನ ಮಾಡಬಹುದೆಂತ ಹೇಳಿರುವುದು ತಪ್ಪೇನು? ಎಂದರೆ ವಿಧ್ಯುಕ್ತಗಳಾದ ತಾಮ್ರಾದಿ ಪಾತ್ರೆಗಳು ಇಲ್ಲದಿದ್ದಾಗ ವಾಮಹಸ್ತದಲ್ಲಿ ಜಲವನ್ನು ಹಾಕಿಕೊಂಡು ಮಾರ್ಜನ ಮಾಡಬಹುದು. ಪಾತ್ರೆಗಳು ಇದ್ದಾಗ ವಾಮಹಸ್ತವನ್ನು ಉಪಯೋಗಿಸಬಾರದೆಂತ ಅಭಿಪ್ರಾಯ.

ಅಥ ಮಾರ್ಜನ ಮಂತ್ರಃ—

ಆಪೋಹಿಷ್ಠೇತಿ ತ್ರ್ಯೃರ್ಚಸ್ಯ ಸೂಕ್ತಸ್ಯ ಅಂಬರೀಷೋ ವಾ ಸಿಂಧುದ್ವೀಪ ಋಷಿಃ, ಆಪೋ ದೇವತಾ, ಗಾಯತ್ರೀ ಛಂದಃ ಮಾರ್ಜನೇ ವಿನಿಯೋಗಃ ||

(೧) ಓಂ ಆಪೋ ಹಿ ಷ್ಠಾ ಮಯೋ ಭುವಃ, ತಾನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ||

(೨) ಯೋವಶ್ಶಿವತಮೋರಸಃ, ತಸ್ಯ ಭಾಜಯತೇಹನಃ ಉಶತೀರಿವ ಮಾತರಃ ||

(೩) ತಸ್ಮಾ ಅರಂಗ ಮಾಮವೋ, ಯಸ್ಯಕ್ಷಯಾಯ ಜಿನ್ವಥ ಆಪೋ ಜನಯಥಾ ಚ ನಃ ||

ಈ ಮಂತ್ರದಿಂದ ಪ್ರೋಕ್ಷಣೆಯನ್ನು ಮಾಡಿಕೊಂಡು ಆ ನೀರನ್ನು ಚೆಲ್ಲಿ ಪುನಃ ಶುದ್ಧವಾದ ನೀರನ್ನು ಬಲಹಸ್ತದಲ್ಲಿ ಹಾಕಿಕೊಂಡು ಸೂರ್ಯಶ್ಚೇತ್ಯಸ್ಯ ಎಂಬ ಮಂತ್ರದಿಂದ ಅಭಿಮಂತ್ರಿಸಿ ಪ್ರಾಶನ ಮಾಡಬೇಕು.

## ಜಲಾಭಿಮಂತ್ರಣ

ಸೂರ್ಯಶ್ಚೇತ್ಯಸ್ಯ ಮಂತ್ರಸ್ಯ, ನಾರಾಯಣ ಋಷಿಃ*, ಸೂರ್ಯಮಾಮನ್ಯು ಮನ್ಯುಪತಯೋ ರಾತ್ರಿರ್ದೇವತಾ ಪ್ರಕೃತಿಶ್ಛಂದಃ ಜಲಾಭಿಮಂತ್ರಣೇ ವಿನಿಯೋಗಃ ||

ಹರಿಃ ಓಂ ಸೂರ್ಯಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ । ಪಾಪೇಭ್ಯೋ ರಕ್ಷಂತಾಂ ಯದ್ರಾತ್ರ್ಯಾ ಪಾಪ-

---

* ಯಾಜ್ಞವಲ್ಕ್ಯ ಋಷಿಃ ಎಂತಲೂ ಪಾಠಾಂತರ ಉಂಟು.

ಪಂಕಾರ್ಷವಸ್ । ಮನಸಾ ವಾಚಾ ಹಸ್ತಾಭ್ಯಾಂ, ಪದ್ಭ್ಯಾಮುದರೇಣ
ಶಿಶ್ನಾ, ರಾತ್ರಿಸ್ತದವಲಂಪತು, ಯತ್ಕಿಂಚ ದುರಿತಂ ಮಯಿ, ಇದ-
ಮಹಂ ಮಾಮಮೃತಯೋನೌ ಸೂರ್ಯೇಜ್ಯೋತಿಷಿ ಜುಹೋಮಿಸ್ವಾಹಾ
(ಎಂತ ಹಸ್ತದಲ್ಲಿ ಹಾಕಿಕೊಂಡಿದ್ದ ನೀರನ್ನು ಕುಡಿಯಬೇಕು. ನಂತ
ಆಚಮನ ಮಾಡಬೇಕು.)

## ಮಾರ್ಜನಾದಿ ಮಂತ್ರಗಳ ಅರ್ಥ

ಆಪೋಹಿಷ್ಠಾ ಎಂಬುವ ಮೂರು ಋಕ್ಕುಗಳುಳ್ಳ ಸೂಕ್ತಕ್ಕೆ ಸಿಂಧು
ದ್ವೀಪರೆಂಬುವರು ಅಥವಾ ಅಂಬರೀಷರೆಂಬುವರು ಋಷಿಗಳು (ದ್ರಷ್ಟೃಗಳು)
ಅಪ್ ಶಬ್ದವಾಚ್ಯನಾದ ಪರಮಾತ್ಮಾ ಅಥವಾ ಉದಕಾಭಿಮಾನಿದೇವತಾ
ಪ್ರತಿಪಾದ್ಯದೇವತಾ, ಗಾಯಿತ್ರೀ ಛಂದಸ್ಸು ಈ ಮಂತ್ರವು ದೇಹವನ್ನು
ಪ್ರೋಕ್ಷಣ ಮಾಡುವ ಕರ್ಮದಲ್ಲಿ ವಿನಿಯೋಗಿಸಲ್ಪಡಬೇಕು.

(೧) ಭೋ ಆಪಃ-ಎಲೈ ಉದಕಾಭಿಮಾನಿ ದೇವತೆಗಳಿರಾ, ಅಥವಾ
ಉದಕಾಭಿಮಾನಿ ದೇವತಾಂತರ್ಯಾಮಿ ನಾರಾಯಣಮೂರ್ತಿಗಳಿರಾ, ಆ
ಪಾಲನಾತ್ ಆಪಃ ಎಂಬ ವಚನದಂತೆ ಚೆನ್ನಾಗಿ ಸರ್ವತ್ರ ಕಾಪಾಡತಕ್ಕವ
ರಾದ್ದರಿಂದ ಅಪ್ ಶಬ್ದವಾಚ್ಯರಾದ, ಯಾಃ-ಯಾವ, ಯೂಯಂ-ನೀವುಗಳು
ಹಿ-ಯಾವ ಕಾರಣದಿಂದ, ನಃ-ನಮ್ಮಗಳಿಗೆ; ಮಯೋಭುವಃ-ಸುಖವನ್ನು
ಉಂಟುಮಾಡತಕ್ಕವರಾಗಿ, ಷ್ಠಾ-ಭೂಮಿಯಲ್ಲಿ ವ್ಯಾಪ್ತರಾಗಿ ಇರುತ್ತೀರೋ
(ತಸ್ಮಾತ್-ಆದಕಾರಣದಿಂದ, ತಾಃ ಯೂಯಂ-ಅಂಥಾ ನೀವುಗಳು)
ನಃ-ನಮ್ಮಗಳನ್ನು, ಊರ್ಜೇ-ಉತ್ಕೃಷ್ಟನಾದ್ದರಿಂದ ಊರ್ಜಪದವಾಚ
ನಾದ ಪರಮಾತ್ಮನಿಗೋಸ್ಕರ (ಅಂದರೆ ಶ್ರೀಹರಿಸೇವಾದಿಗಳನ್ನು ಮಾಡುವು
ದಕ್ಕೋಸ್ಕರ) ದಧಾತನ-ಅನ್ನ ಬಲಾದಿಗಳನ್ನು ಕೊಟ್ಟು ಸ್ಥಾಪನೆ ಮಾಡಿ
ಅಂದರೆ ಸಂರಕ್ಷಣೆ ಮಾಡಿರಿ. ಯಾವ ಪ್ರಯೋಜನಕ್ಕೋಸ್ಕರವಾಗಿ ಅಂದರೆ
ಮಹೇ-ಮಹತ್ತರವಾದ, ರಣಾಯ-ರಮಣೀಯವಾದ ಮೋಕ್ಷಸಾಧನೀ
ಭೂತವಾದ, ಚಕ್ಷಸೇ-ಪರಮಾತ್ಮನ ಅಪರೋಕ್ಷಜ್ಞಾನವನ್ನು ಹೊಂದುವು
ದಕ್ಕೋಸ್ಕರ ನಮ್ಮನ್ನು ಸಂರಕ್ಷಣೆ ಮಾಡಿರಿ ಎಂದು ಮುಖ್ಯಾರ್ಥವು

(೨) ಭೋ ಆಪಃ-ಎಲೈ ಉದಕಾಭಿಮಾನಿ ದೇವತೆಗಳಿರಾ ( ಅಥವಾ ತದಂತರ್ಗತ ಪರಮಾತ್ಮನೇ), ವಃ-ನಿಮ್ಮ ಸಂಬಂಧಿಯಾದ, ಯಃ-ಯಾವ, ರಸಃ-ಉಪಕರ್ವೋ, ಅದು, ಶಿವತವಃ-ಅತ್ಯಂತ ಮಂಗಳಕರವಾದದ್ದು (ಪರಮಾತ್ಮನ ಪರವಾಗಿ ಹೇಳುವಾಗ "ರಸೋವೈಸಃ" ಎಂಬ ಶ್ರುತ್ಯನುಸಾರವಾಗಿ ರಸ ಶಬ್ದಕ್ಕೆ ಪರಮಾತ್ಮನ ಸ್ವರೂಪವೆಂತ ಅರ್ಥ ಮಾಡಬೇಕು.) ಆಗ, ವಃ-ನಿಮ್ಮ, ಯಃ-ಯಾವ, ರಸಃ-ಸ್ವರೂಪಭೂತವಾದ ಅನಂತ ಅವತಾರರೂಪವು, ಶಿವತಮಃ-" ಯತ್ತೇರೂಪಂ-ಕಲ್ಯಾಣತಮಂ " ಎಂಬ ಈಶಾವಾಸ್ಯ ಉಪನಿಷತ್ತಿನ ವಾಕ್ಯದಂತೆ ಅತ್ಯಂತ ಮಂಗಳಕರವಾದದ್ದು. ಆದ್ದರಿಂದ-ಯೂಯಂ-ನೀವುಗಳು, ತಸ್ಯ-ಆ ಪರಮಾತ್ಮನ ಅನಂತವಾದ ರೂಪವನ್ನು ( ಕರ್ಮಣಿ ಷಷ್ಠೀ ಪ್ರಯೋಗವಾಗಿರುತ್ತೆ ), ಇಹ-ಈ ಲೋಕದಲ್ಲಿ, ಉಶತೀಃ-ತನ್ನ ಮಕ್ಕಳಿಗೆ ಸ್ತನ್ಯಾದಿಗಳನ್ನು ಕೊಡಬೇಕೆಂಬ ಅಪೇಕ್ಷೆಯುಳ್ಳ, ಮಾತರಃ ಇವ-ಆಗತಾನೇ ಪ್ರಸವಿಸಿರುವ ತಾಯಿಗಳಾದ ಗೋವುಗಳು ಹೇಗೆ ತಮ್ಮ ಕರುಗಳಿಗೆ ಸ್ತನಸಂಬಂಧಿಯಾದ ಕ್ಷೀರವನ್ನು ಆದರಸಹಿತವಾಗಿ ಭಾಜಯಂತಿ-ಹೊಂದಿಸುತ್ತವೆಯೋ ಅಂದರೆ ಕೊಡುತ್ತವೆಯೋ ಹಾಗೆಯೇ, ಇಹ-ಈ ಲೋಕದಲ್ಲಿ, ನಃ-ನಮ್ಮಗಳನ್ನು, ಭಾಜಯಂತ-ಹೊಂದಿಸಿರಿ, ಅಂದರೆ ನಮಗೆ ಪರಮಾತ್ಮನು ದೊರಕುವಂತೆ ಮಾಡಿರಿ.

(೩) ಹೇ ಆಪಃ-ಯಸ್ಯ ರಸಸ್ಯ-ರಸಶಬ್ದವಾಚ್ಯನಾದ ಯಾವ ಪರಮಾತ್ಮನ, ಕ್ಷಯಾಯ-ಕ್ಷಿ-ನಿವಾಸಗತ್ಯೋಃ ಎಂಬ ಧಾತುವಿನ ಪ್ರಕಾರ ನಿವಾಸಕ್ಕೋಸ್ಕರವಾಗಿ ಅಂದರೆ ತಮ್ಮಲ್ಲಿ ಶ್ರೀಹರಿಯು ವಾಸಮಾಡುವುದಕ್ಕೋಸ್ಕರ ಅಥವಾ ಕ್ಷಯಃ ಅಂದರೆ ಮೋಕ್ಷರೂಪವಾದ ಆಶ್ರಯಃ ಎಂತ ಅರ್ಥ. ಆದ್ದರಿಂದ ಮೋಕ್ಷಕ್ಕೋಸ್ಕರವಾಗಿ, ಯೂಯಂ-ನೀವುಗಳು, ಕಂ-ಯಾರನ್ನು, ಜಿನ್ವಥ-ಪ್ರೀಣನ ಮಾಡುತ್ತೀರೋ, ಅಥವಾ ಯಾವ ಪಾಪದ, ಕ್ಷಯಾಯ-ನಾಶಕ್ಕೋಸ್ಕರವಾಗಿ ಯಾರನ್ನು ಪ್ರೀಣನ ಮಾಡುತ್ತೀರೋ, ತಸ್ಮೈ-ಅಂಥ ಪೂರ್ವಪ್ರಸಿದ್ಧನಾದ, ರಸಂ-ಪರಮಾತ್ಮನನ್ನು, ನಾವು, ಅರಂ-ಅತ್ಯರ್ಥವಾಗಿ, ಅಂದರೆ ವಿಶೇಷವಾಗಿ, ಗಮಾಮ-ಹೊಂದುತ್ತೇವೆ. ಹೇ ಆಪಃ-ಎಲೈ ದೇವತೆಗಳಿರಾ! ಚ ಮತ್ತು ತಸ್ಮಿನ್ ನಿವಾಸೇ-ಆ

ಪರಮಾತ್ಮನಲ್ಲಿ ವಾಸಮಾಡುವುದಕ್ಕೋಸ್ಕರವಾಗಿ ಅಂದರೆ ಮನಸ್ಸನ್ನು ದೇವರಲ್ಲಿ ಸ್ಥಾಪನೆ ಮಾಡುವುದಕ್ಕೋಸ್ಕರ ಅಥವಾ ಪೂರ್ವೋಕ್ತವಾದ ಆಶ್ರಯವನ್ನು ಹೊಂದುವುದಕ್ಕೋಸ್ಕರ, ನಃ-ನಮ್ಮಗಳನ್ನು, ಜನಯಥ-ಉತ್ಪಾದನ ಮಾಡಿರಿ, ಅಂದರೆ ಸೃಷ್ಟಿಗೆ ತರುವವರಾಗಿರಿ. ಮೋಕ್ಷಸಾಧನೆಗಾಗಿ ನಮ್ಮನ್ನು ಸೃಷ್ಟಿಮಾಡಿರಿ ಎಂತ ತಾತ್ಪರ್ಯ.

ಜೀವರು ಭೂಮಿಯಲ್ಲಿ ಹುಟ್ಟಬೇಕಾದರೆ ಉದಕದ್ವಾರ ಬರಲೇಬೇಕಾದ್ದರಿಂದ ಅಬಭಿಮಾನಿದೇವತಾಂತರ್ಯಾಮಿ ಶ್ರೀಹರಿಯನ್ನು ಸಾಧನಶರೀರವನ್ನು ಕೊಡು ಎಂತ ಪ್ರಾರ್ಥನೆ ಮಾಡತಕ್ಕದ್ದು ಯುಕ್ತವೆಂದು ಶೃತಿಯ ಅಭಿಪ್ರಾಯವು. (ಇನ್ನು ತಸ್ಮಿನ್ ನಿವಾಸೇ) ಎಂದವೇಲೆ ಸಪ್ತಮೀವಿಭಕ್ತಿಪ್ರಯೋಗವು ನಿಮಿತ್ತಸಪ್ತಮಿಯಾಗಿರುತ್ತೆ. ಯಾಕೆಂದರೆ "ನಿಮಿತ್ತಾತ್ ಕರ್ಮಯೋಗೇ" ಎಂತ ಸಿದ್ಧಾಂತಕೌಮುದಿಯಲ್ಲಿ

ಚರ್ಮಣಿ ದ್ವೀಪಿನಂ ಹಂತಿ ದಂತಯೋರ್ಹಂತಿ ಕುಂಜರಮ್ ।
ಕೇಶೇಷು ಚಮರೀಂ ಹಂತಿ ಸೀಮ್ನಿ ಪುಷ್ಕಲಕೋ ಹತಃ ॥

ಎಂತ ಪ್ರಯೋಗವು ತೋರಿಸಲ್ಪಟ್ಟಿರುತ್ತದೆ. (ಭಾಷ್ಯವಚನ) ಇದರ ಅರ್ಥ: ಚರ್ಮಕ್ಕೋಸ್ಕರ ಹುಲಿಯನ್ನೂ, ದಂತಕ್ಕೋಸ್ಕರ ಆನೆಯನ್ನೂ, ಕೇಶಕ್ಕೋಸ್ಕರ ಚಮರೀಮೃಗವನ್ನೂ ಕೊಲ್ಲುತ್ತಾರೆ. ಗಂಧವುಳ್ಳ ಕಸ್ತೂರೀ ಮೃಗವು ಅಂಡಕೋಶಕ್ಕೋಸ್ಕರವಾಗಿ ಸಂಹರಿಸಲ್ಪಡುತ್ತದೆ. ಈ ಪ್ರಯೋಗದಲ್ಲಿ ಸಪ್ತಮೀಗೆ ಚತುರ್ಥೀವಿಭಕ್ತ್ಯರ್ಥವು ಹೇಳಿರುತ್ತದೆ. ಹಾಗೆಯೇನೇ "ನಿವಾಸೇ" ಎನ್ನುವ ಕಡೆಯೂ ವಾಸಕ್ಕೋಸ್ಕರ ಎಂತ ಅರ್ಥ ಹೇಳಬೇಕು.

"ಸೂರ್ಯಶ್ಚ" ಎಂಬ ಈ ಮಂತ್ರಕ್ಕೆ ನಾರಾಯಣದೇವರು ಅನಂತರ ಯಾಜ್ಞವಲ್ಕ್ಯರು ಋಷಿಗಳು. ಸೂರ್ಯಾಂತರ್ಗತನಾದ ಸೂರ್ಯಶಬ್ದವಾಚ್ಯನಾದ ಲಕ್ಷ್ಮೀಸಮೇತನಾದ ನರಸಿಂಹದೇವನೂ, ಕ್ರೋಧಾಭಿಮಾನಿ ರುದ್ರ, ಇಂದ್ರ ಮತ್ತು ಇಂದ್ರಪಾಲಿತರಾದ ಕ್ರೋಧಾಭಿಮಾನಿ ದೇವತೆಗಳೂ, ತನ್ನಿಯಾಮಕರಾದ ಬ್ರಹ್ಮಾದಿಗಳೂ, ರಾತ್ರಿಗೆ ಅಭಿಮಾನಿಯಾದ ದುರ್ಗಾದೇವಿಯೂ ಪ್ರತಿಪಾದ್ಯದೇವತೆಗಳು ಆಗಿರುತ್ತಾರೆ. (ಕೆಲವರು ಮುಖ್ಯಪ್ರತಿಪಾದ್ಯರು, ಕೆಲವರು ಅಮುಖ್ಯಪ್ರತಿಪಾದ್ಯರು ಎಂತ ತಿಳಿಯಬೇಕು.) ೨೧

ಅಕ್ಷರಾತ್ಮಕ ಪ್ರಕೃತಿ ಛಂದಸ್ಸುಳ್ಳದ್ದು. ನೀರನ್ನು ಅಭಿಮಂತ್ರಣ ಮಾಡುವುದ ರಲ್ಲಿ ವಿನಿಯೋಗವು ಹೇಳಲ್ಪಟ್ಟಿರುತ್ತೆ.

ಮಂತ್ರಾರ್ಥ: ಸೂರ್ಯಶ್ಚ–ಸೂರಿಗಳಿಂದ, ಅಂದರೆ ಜ್ಞಾನಿಗಳಿಂದ ಹೊಂದಲ್ಪಡತಕ್ಕವನಾದ್ದರಿಂದ ಸೂರ್ಯಶಬ್ದವಾಚ್ಯನಾದ (ಸಮೀಚೀನವಾಗಿ ಕರ್ಮಗಳಲ್ಲಿ ಪ್ರಾಣಿಗಳನ್ನು ಪ್ರೇರಣೆ ಮಾಡುವುದರಿಂದ ಸೂರ್ಯಶಬ್ದವಾಚ್ಯ ನಾದ) ಪರಮಾತ್ಮನು ಅಥವಾ ಸೂರ್ಯದೇವನು ಮತ್ತು, ಮಾ–ಲಕ್ಷ್ಮೀ-ದೇವಿಯು, ಮನ್ಯುಃ–ಕ್ರೋಧಾಭಿಮಾನಿಗಳಾದ ರುದ್ರದೇವರ ಅಂತರ್ಯಾಮಿ ಯಾದ ತಮ್ಮ ರಕ್ಷಣೆಗೋಸ್ಕರ ಸರ್ವರ ಜ್ಞಾನಕ್ಕೂ ವಿಷಯನಾದ ಅಥವಾ ಮನಸ್ಸಿನಿಂದ ತಿಳಿಯಲ್ಪಡತಕ್ಕ ಮನ್ಯುಶಬ್ದವಾಚ್ಯನಾದ ನರಸಿಂಹದೇವನು, ಚ–ಮತ್ತು, ಮನ್ಯುಪತಯಃ–ಕ್ರೋಧಾಭಿಮಾನಿ ದೇವತೆಗಳಿಗೂ ನಿಯಾ-ಮಕರಾದ ಬ್ರಹ್ಮಾದಿಗಳೂ, ('ರುದ್ರೋ ಬ್ರಹ್ಮಾಣಮಾಶ್ರಿತಃ' ಎಂಬ ಭಾರತವಾಕ್ಯದಂತೆ ರುದ್ರನಿಯಾಮಕತ್ವವು ಬ್ರಹ್ಮದೇವರಿಗೆ ಯುಕ್ತವಾಗಿರು-ತ್ತದೆ.) ಅಥವಾ ರುದ್ರದೇವರೇ ಪತಿಯಾಗಿ ಉಳ್ಳ ಇಂದ್ರದೇವರೂ, ಮನ್ಯು-ಶಬ್ದವಾಚ್ಯನಾದ ಇಂದ್ರನೇ ಪತಿಯಾಗಿ ಉಳ್ಳವರು, ಅಂದರೆ ದೇವರಾಜನಿಂದ ಪಾಲಿತರಾದ ಸೂರ್ಯ, ಚಂದ್ರ, ಅಗ್ನಿ, ಯಮ ಮುಂತಾದ ಸಮಸ್ತ ದೇವತೆಗಳು. "ಮನ್ಯುರಿಂದ್ರೋ ಮನ್ಯುರೇವಾಸ ದೇವ" ಎಂಬ ಮನ್ಯು-ಸೂಕ್ತದಲ್ಲಿ ಇಂದ್ರದೇವರು ಮನ್ಯುಶಬ್ದವಾಚ್ಯರೆಂದು ಸ್ಪಷ್ಟವಾಗಿರುತ್ತದೆ.

ಮನ್ಯುಕೃತೇಭ್ಯಃ–ಕೋಪದಿಂದ ಮಾಡಲ್ಪಟ್ಟ, ಪಾಪೇಭ್ಯಃ–ಅಭಕ್ಷ್ಯ ಭಕ್ಷಣಾದಿ ನಿಮಿತ್ತಗಳಾದ ನನ್ನಿಂದ ಮಾಡಲ್ಪಟ್ಟ ಪಾಪಗಳ ದೆಸೆಯಿಂದ, ಮಾ–ನನ್ನನ್ನು, ರಕ್ಷಂತಾಂ–ರಕ್ಷಣ ಮಾಡತಕ್ಕವರಾಗಲಿ, ಅಂದರೆ ಕ್ರೋಧ-ನಿಮಿತ್ತ ಮಾಡಲ್ಪಟ್ಟ ಪರನಿಂದಾ, ಪರಪೀಡನಾ, ತಾಡನಾದಿ ಪಾಪಕರ್ಮ-ಗಳಿಂದ ನಮಗೆ ನರಕಾದ್ಯನರ್ಥಗಳು ಹೇಗೆ ಆಗಬಾರದೋ ಹಾಗೆ ನಮ್ಮನ್ನು ಲಕ್ಷ್ಮೀನರಸಿಂಹ ಮತ್ತು ರುದ್ರೇಂದ್ರರೇ ಮೊದಲಾದ ದೇವತೆಗಳು ಕಾಪಾಡ-ತಕ್ಕವರಾಗಲಿ.

ರಾತ್ರ್ಯಾ–ರಾತ್ರೀಕಾಲದಲ್ಲಿ, ಮನಸಾ–ಮನಸ್ಸಿನಿಂದಲೂ, ವಾಚಾ–ವಾಗಿಂದ್ರಿಯದಿಂದಲೂ, ಹಸ್ತಾಭ್ಯಾಂ–ಕರಗಳಿಂದಲೂ, ಪದ್ಭ್ಯಾಂ–ಪಾದ

ಗಳಿಂದಲೂ, ಉದರೇಣ–ಹೊಟ್ಟೆಯಿಂದಲೂ, ಶಿಶ್ನಾ–ಗುಹ್ಯೇಂದ್ರಿಯ ದಿಂದಲೂ, ಯತ್–ಯಾವ, ಪಾಪಂ–ಪಾಪಕರ್ಮವನ್ನು, ಅಕಾರ್ಷಂ–ಮಾಡಿದವನು ಆಗಿರುತ್ತೇನೋ, ತತ್ಸರ್ವಂ–ಆ ಸಮಸ್ತ ದುರಿತಕರ್ಮಫಲ ವನ್ನು, ರಾತ್ರಿಃ–ಭಕ್ತರ ಅಭೀಷ್ಟಗಳನ್ನು ಕೊಟ್ಟು ರಕ್ಷಿಸುವನಾದ್ದರಿಂದ ರಾತ್ರಿಶಬ್ದವಾಚ್ಯನಾದ, ಭಕ್ತರಲ್ಲಿರತಕ್ಕ ಅಜ್ಞಾನವನ್ನು ಕಳೆದು ಭಗವತ್-ವಿಷಯಕ ಜ್ಞಾನವನ್ನು ಕೊಟ್ಟು ಕಾಪಾಡುವಳಾದಕಾರಣ ರಾತ್ರೀಶಬ್ದ ವಾಚ್ಯಳಾಗಿ ರಾತ್ರಿಗೆ ಅಭಿಮಾನಿಯಾದ ಶ್ರೀ ದುರ್ಗಾದೇವಿಯು ಪತಿಯಾದ ನರಸಿಂಹದೇವನು ನನ್ನ ಪ್ರಾರ್ಥನೆಯಂತೆ, ಅವಲುಂಪತ್–ನಾಶಮಾಡ ತಕ್ಕವನಾಗಲಿ. ಯತ್ಕಿಂಚ–ನಮಗೆ ಅಜ್ಞಾತವಾಗಿರತಕ್ಕ ಬೇರೆ ಪಾಪಗಳು ಯಾವುವು ಉಂಟೋ ಅಂದರೆ ಜನ್ಮಾಂತರಕೃತವಾದವು ಮತ್ತು ಈ ಜನ್ಮ ದಲ್ಲಿಯೇ ಕೌಮಾರಾವಸ್ಥೆಯಲ್ಲಿಯಾಗಲೀ, ಪ್ರಮಾದದಿಂದ ಆಕಸ್ಮಿಕವಾಗಿ ಯಾಗಲೀ ಮಾಡಲ್ಪಟ್ಟ ಯಾವ ದುಷ್ಕರ್ಮಫಲಗಳು, ಮಯಿ–ನನ್ನಲ್ಲಿ, (ಲಗ್ನಂ ವರ್ತತೇ–ಸಂಬಂಧಿಸಿಕೊಂಡು) ಇರುತ್ತದೆಯೋ, ತದಪೀದಂ ಪಾಪಂ–ಅಂಥಾ ಈ ಪಾಪವನ್ನೂ ಕೂಡ, ರಾತ್ರಿರೇವ–ದುರ್ಗಾದೇವಿ ಅಥವಾ ರಾತ್ರಿ-ನಿಯಾಮಕ ಪರಮಾತ್ಮನು, ಅವಲುಂಪತ್–ಪರಿಹಾರ ಮಾಡಲಿ. ಈ ಪ್ರಕಾರ ಭಗವದನುಗ್ರಹದಿಂದ ನಾಶಮಾಡಲ್ಪಟ್ಟ ಸಕಲ ದೋಷವುಳ್ಳ, ಅಹಂ ಏವ–ನಾನೇನೆ ಶ್ರುತಿ ಸ್ಮೃತ್ಯುದಿತ ನಿತ್ಯನೈಮಿತ್ತಿಕಾದಿ ಕರ್ಮಾನು-ಷ್ಠಾನದಿಂದ ನಾರಾಯಣನ ಆರಾಧನೆಯನ್ನು ಮಾಡಲು ಇಚ್ಛೆಯುಳ್ಳವನಾಗಿ ಅಮೃತಯೋನೌ–ಮೋಕ್ಷಕ್ಕೆ ಉತ್ಪತ್ತಿಸ್ಥಾನವಾದ ಅಂದರೆ ಮೋಕ್ಷಪ್ರದವಾದ ಸೂರ್ಯೇ–ಜ್ಞಾನಿಗಮ್ಯವಾದ, ಜ್ಯೋತಿಷಿ–ಪ್ರಕಾಶಸ್ವರೂಪವಾದ ಪರ-ಬ್ರಹ್ಮನಲ್ಲಿ, ಮಾ–ನನ್ನನ್ನು, ಜುಹೋಮಿ–ಹೋಮಿಸುತ್ತೇನೆ. ಅಂದರೆ ನನ್ನನ್ನು ಸಮರ್ಪಣೆ ಮಾಡುತ್ತೇನೆ, ಸ್ವಾಹಾ–ಸುಹುತವಾಗಲಿ ಅಂದರೆ ಆತನಲ್ಲಿ ಆತ್ಮನಿವೇದನ ಮಾಡಿದ ನನ್ನನ್ನು ಶ್ರೀಹರಿಯು ಭಕ್ತನೆಂದು ಸ್ವೀಕರಿಸತಕ್ಕವನು ಆಗಲಿ ಎಂಬ ಅಭಿಪ್ರಾಯವು. ಈ ರೀತಿ ನಮ್ಮ ಅಂತರ್ಯಾಮಿಯ ಉಪಾಸನಾರೂಪವಾದದ್ದು ಸಂಧ್ಯಾಕರ್ಮ. ಆದ್ದರಿಂದ ಮುಕ್ತಿಗೆ ಸಾಧನವೆಂತ ಸಿದ್ಧವಾಗುತ್ತದೆ.

ಈ ಮೇಲ್ಕಂಡ ಮಂತ್ರದಲ್ಲಿ ಮನಸ್ಸು, ವಾಕ್, ಹಸ್ತ, ಕಾಲುಗಳು, ಉದರ, ಶಿಶ್ನ, ಮುಂತಾದ ಇಂದ್ರಿಯಗಳಿಂದ ಮಾಡಲ್ಪಟ್ಟ ಪಾಪಗಳನ್ನು ಪರಿಹರಿಸೆಂದು ದೇವರನ್ನು ಪ್ರಾರ್ಥಿಸುತ್ತೇವೆಯಷ್ಟೆ. ಯಾವ ಯಾವ ಇಂದ್ರಿಯಗಳಿಂದ ಯಾವ ರೀತಿ ಪಾಪ ಸಾಧಿಸುತ್ತೇವೆಯೆಂಬುದನ್ನು ತಿಳಿದ ನಂತರ ನಿಷಿದ್ಧ ಪರಿತ್ಯಾಗ ಮಾಡಬೇಕಾಗುತ್ತೆ. ಆದುದರಿಂದ ಅದರ ವಿಷಯ ಸ್ವಲ್ಪ ವಿವರಿಸಿ ಮುಂದಿನ ಮಂತ್ರಾರ್ಥ ಬರೆಯುತ್ತೇನೆ.

ಮನಸ್ಸಿನಿಂದ ಮಾಡತಕ್ಕ ಪಾಪಗಳು ಯಾವುವು ಎಂದರೆ, ಈ ರೀತಿ ಯಾದದ್ದು: ಪ್ರಥಮತಃ ವಿಷ್ಣುಮಹಿಮಾಪ್ರತಿಪಾದಕಗಳಾದ ಋಗಾದಿ ಏಳು ಶಾಸ್ತ್ರಗಳ ಅರ್ಥವನ್ನು ಮನನ ಮಾಡಲು ಅನುಕೂಲವಾದ ಮನಸ್ಸೆಂಬ ಇಂದ್ರಿಯದಿಂದ ಶಾಸ್ತ್ರಾರ್ಥ ವಿಚಾರ ಮಾಡದಿರುವುದೂ, ದುಷ್ಟವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳನ್ನು ಚಿಂತನ ಮಾಡೋಣವೂ, ಪರದ್ರವ್ಯ, ಪರಸ್ತ್ರೀಯರನ್ನು ಅಪಹಾರ ಮಾಡಬೇಕೆಂಬ ಆಲೋಚನೆಯೂ, ಪರರಿಗೆ ಮೋಸ ಮತ್ತು ಪೀಡಾ ಮಾಡಬೇಕೆಂಬ ಚಿಂತನವೂ ಮತ್ತು ಯಾವಾಗಲಾದರೂ ಒಂದಾವರ್ತಿಯೂ ಕೂಡ ಶ್ರೀಹರಿಯಲ್ಲಿ ಮನಸ್ಸನ್ನು ಎರಗಿಸದೇ ಇರುವುದೂ ಮನಸ್ಸಿನ ಪಾಪಗಳೆಂದು ತಿಳಿಯತಕ್ಕದ್ದು. ಇನ್ನು ವಾಗಿಂದ್ರಿಯದಿಂದ ಸಂಭವಿಸುವ ಪಾಪಗಳು ಕೆಳಗೆ ವಿವರಿಸಲ್ಪಡುತ್ತದೆ.

ಸಂಕೀರ್ತಯೇಜ್ಜಗನ್ನಾಥಂ ದೇವಂ ವಾಪಿ ಸಮೀರಯೇತ್ ।
ಸತ್ಯಂ ಭೂತಹಿತಂ ಯತ್ರ ಚಾನ್ಯಥಾವಾಚಮುತ್ಸೃಜೇತ್ ॥

ಎಂಬ ವಚನದಲ್ಲಿ ಹೇಳಿರುವಂತೆ ಜಗತ್ಪತಿಯಾದ ನಾರಾಯಣನನ್ನು ಚೆನ್ನಾಗಿ ಕೀರ್ತನ ಮಾಡು ಅಥವಾ ಕ್ರೀಡಾದಿ ಗುಣವಿಶಿಷ್ಟನಾದ ನಾರಾಯಣ-ದೇವರನ್ನು ಸಜ್ಜನರಿಗೆ ಉಪದೇಶ ಮಾಡು. ಎಲ್ಲಿ ಯಾವ ಸಂದರ್ಭದಲ್ಲಿ ಪ್ರಾಣಿಗಳಿಗೆ ಹಿತವಾಗುತ್ತದೋ ಅಂಥ ಸತ್ಯವಾದ ಮಾತನ್ನು ಆಡು ಇತರ್ ವಿರುದ್ಧವಾದ ವ್ಯರ್ಥವಾದ ಭಾಷಣಗಳನ್ನು ಆಡಬಾರದು ಎಂಬ ವಿಧಿಯನ್ನು ಅತಿಕ್ರಮಿಸಿ ಶ್ರವಣ ಮಾಡಲಿಕ್ಕೂ, ಅನರ್ಹವಾದ, ಅಸತ್ಯವಾದ, ಅನೃತವಾದ ಪರಕೀಯರಿಗೆ ಅಂದರೆ ಸಜ್ಜನರಿಗೆ ಅನಿಷ್ಟವಾದ ಕ್ರೂರವಾದ ಮಾತುಗಳನ್ನು ಆಡುವುದೂ, ಶ್ರೀಹರಿಸಂಕೀರ್ತನವನ್ನು ಮಾಡದಿರುವುದೂ, ವಾಗಿಂದ್ರಿಯ ದಿಂದ ಸಂಭವಿಸುವ ಪಾಪಗಳು.

ಹಸ್ತಗಳಿಂದ ಆಗತಕ್ಕ ಪಾಪಗಳು ಹೀಗೆ ತಿಳಿಯಲ್ಪಡಬೇಕು ಏನೆಂದರೆ "ತವ ಮಂದಿರ ಮಾರ್ಜನಾದಿ ಸೇವಾಂ ನ ಕರೌ ಮೇ ಕುರುತಃ ಕದಾಪಿ ಭಕ್ತ್ಯಾ। ಅಪಿತೂರುಗುಣಾರ್ಣದುಷ್ಟವಸ್ತು ಗ್ರಹಣಾಯೈವ ಯತೇತ ಇಂದಿರೇಶ॥" ಎಂಬುದಾಗಿ ಶ್ರೀ ವಿಜಯೀಂದ್ರತೀರ್ಥ ಶ್ರೀಪಾದಂಗಳವರು ಹೇಳಿರುವಂತೆ 'ಹೇ ಉತ್ಕೃಷ್ಟಗಳಾದ ಬಹಳಗಳಾದ ಗುಣಗಳಿಂದ ಸಮುದ್ರಸ್ಥಾನೀಯನಾದ ಪರಮಾತ್ಮನೇ! ನಿನ್ನ ಮಂದಿರವನ್ನು ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸುವ ಸೇವೆಯನ್ನಾಗಲೀ, ಆದಿಶಬ್ದದಿಂದ ಸೂಚಿತವಾಗತಕ್ಕ ಗುರುಹಿರಿಯರ ಪಾದವನ್ನು ಒತ್ತುವ ಸೇವೆಯನ್ನಾಗಲೀ, ನಿನ್ನನ್ನು ತುಲಸೀ ಪುಷ್ಪಾದಿಗಳಿಂದ ಪೂಜಿಸುವ ಕರ್ಮವನ್ನಾಗಲೀ, ನನ್ನ ಕೈಗಳು ಯಾವ ಕಾಲಕ್ಕೂ ಭಕ್ತಿಯಿಂದ ಮಾಡಿರುವುದಿಲ್ಲ. ಹೇ ಇಂದಿರೇಶ! ಮತ್ತೂ ನನ್ನ ಕರಗಳು ದುಷ್ಟವಸ್ತುಗಳ ಸ್ಪರ್ಶ ಮತ್ತು ಗ್ರಹಣಗಳಲ್ಲಿ ಆದರದಿಂದ ಪ್ರಯತ್ನಪಡುತ್ತವೆ.' ಅಂದರೆ "ಸ್ಪೃಶವೈಕುಂಠವಲ್ಲಭಂ" ವೈಕುಂಠಾದಿಪತಿಯಾದ ಶ್ರೀಹರಿಯ ಸನ್ನಿಧಾನಯುಕ್ತವಾದ ಪ್ರತಿಮಾ, ಸಾಲಿಗ್ರಾಮ, ಗೋವುಗಳೂ, ತುಲಸೀ, ಅಶ್ವತ್ಥ, ವೈಷ್ಣವರ ಪಾದ ಇವುಗಳನ್ನು ಮುಟ್ಟುವುದನ್ನು ಬಿಟ್ಟು ಸ್ಪರ್ಶಕ್ಕೆ ಅಯೋಗ್ಯಗಳಾದ ಮಹಾಪಾಪಸಾಧನಗಳಾದ ಬ್ರಾಹ್ಮಣ್ಯಹಾನಿಕರಗಳಾದ ಪತಿತರ, ಪಾಷಂಡಿಗಳ, ವಾರಾಂಗನೆಯರ ದೇಹಾದಿಗಳ ಮತ್ತು ನಾಯಿ ಮುಂತಾದ ಪ್ರಾಣಿಗಳ ಸ್ಪರ್ಶಮಾಡುವುದರಲ್ಲಿ ಆದರದಿಂದ ಪ್ರಯತ್ನಪಡುತ್ತವೆಂತ ಸೂಚಿತವಾಗುತ್ತದೆ. ಇದರಿಂದ ವಿಧ್ಯುಕ್ತವಾದ ಹರಿಗುರುಗಳ ಸೇವೆ ಮಾಡದೇ ಅಕಾರ್ಯಗಳನ್ನು ಮಾಡುವುದೂ, ಬ್ರಾಹ್ಮಣ, ಗೋವು ಮುಂತಾದವುಗಳನ್ನು ತಾಡನ ಮಾಡೋಣವೂ, ಕರಗಳ ನಿಮಿತ್ತ ಪ್ರಾಪ್ತಗಳಾಗತಕ್ಕ ಪಾಪಗಳು ಎಂತ ಹೇಳಿದಂತಾಯಿತು.

ಪಾದಗಳಿಂದ ಉಂಟಾಗುವ ಪಾಪಕೃತ್ಯಗಳು ಯಾವುವೆಂದರೆ, ನಾವು ಸಂಚಾರ ಮಾಡುವಾಗ ಪದವಿನ್ಯಾಸದಿಂದ ಉಂಟಾಗತಕ್ಕ ಕ್ರಿಮಿಕೀಟಾದಿಗಳ ಹಿಂಸಯೂ, ಸ್ಮಶಾನ, ಚಂಡಾಲರ ಶ್ರೇಣಿಗಳು ಮತ್ತು ಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟ ಕಳಿಂಗವಂಗಾದಿ ದೇಶಗಳ ನಗರಪ್ರವೇಶವೂ, ಮಧ್ಯಕೇರಳದಲ್ಲಿ ಸಂಚರಿಸೋಣವೂ, ತೀರ್ಥಯಾತ್ರಾ ಮಾಡದೇ ಇರೋಣವೂ, ದೇವರಿಗೆ ಪ್ರದಕ್ಷಿಣೆ ಹಾಕದಿರೋಣವೂ ಪಾದಗಳಿಂದಾಗುವ ಪಾಪಕೃತ್ಯಗಳು.

ಇನ್ನು ಉದರಕೃತವಾದ ದೋಷಗಳು ಯಾವುವೆಂದರೆ,

" ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮಸನಾತನಮ್ ॥ "

ಎಂಬ ಉಕ್ತಿಯಂತೆ ಯಜ್ಞಗಳಲ್ಲಿ ಶ್ರೀಹರಿಯನ್ನು ಉದ್ದೇಶಿಸಿ ಹವಿರ್ದಾನವನ್ನು ಮಾಡಿದಮೇಲೆ ಉಳಿದ ಅನ್ನವನ್ನು ತಿನ್ನತಕ್ಕವರು ಸಮಸ್ತ ಪಾಪಗಳಿಂದ ಮುಕ್ತರಾಗುತ್ತಾರೆ. ಯಜ್ಞಶೇಷವೆಂಬ ಅಮೃತವನ್ನು ಭೋಜನ ಮಾಡತಕ್ಕವರು ಸನಾತನನಾದ ಗುಣಪೂರ್ಣನಾದ ಪರಮಾತ್ಮನನ್ನು ಹೊಂದುತ್ತಾರೆ. ಇದರಿಂದ ವೈಶ್ವದೇವಾದಿ ಹೋಮಗಳನ್ನೂ ಬ್ರಾಹ್ಮಣರ ಭೋಜನವನ್ನೂ ಮಾಡಿಸಿ ನಂತರ ನಾವುಗಳು ಭೋಜನ ಮಾಡಬೇಕು ಎಂಬ ವಿಧಿಯು ಸೂಚಿತವಾಗುತ್ತದೆ ಅವನ್ನು ಮಾಡದೆ ಶ್ರೀಹರಿಗೆ ನೈವೇದ್ಯವನ್ನೂ ಮಾಡದೆ ನಮ್ಮ ಜಿಹ್ವಾಚಾಪಲ್ಯಕ್ಕೋಸ್ಕರ ರುಚಿಕರವಾದ ಪದಾರ್ಥಗಳನ್ನು ಮಾಡಿಸಿ ತಿನ್ನುವುದೂ, ಶಾಸ್ತ್ರನಿಷಿದ್ಧವಾದ ಈರುಳ್ಳಿ, ಮೂಲಂಗಿ, ಬದನೇಕಾಯಿ, ನುಗ್ಗೇಕಾಯಿ, ಕೋಸು, ಅವರೇ, ಬೆಳ್ಳುಳ್ಳಿ ಮತ್ತು ಬಿಂಬಫಲಾದಿ ಪದಾರ್ಥಗಳನ್ನು ತಿನ್ನುವುದೂ, ಅಪೇಯವಾದ ಮಾದಕಪಾನೀಯಗಳನ್ನು ಸೇವಿಸುವುದೂ, ಭೋಜನಕಾಲದಲ್ಲಿ ತುತ್ತುತುತ್ತಿಗೂ ಗೋವಿಂದನಾಮ ಕೀರ್ತನೆ ಮಾಡದೆ ಲೋಕವಾರ್ತೆಗಳನ್ನು ಹರಟುತ್ತಾ ಉದರಪೂರಣ ಮಾಡುವುದೂ ಉದರನಿಮಿತ್ತ ಪಾಪಗಳು.

ಪುನಃ ಶಿಶ್ನಾ ಎಂದರೆ ಗುಹ್ಯೇಂದ್ರಿಯದಿಂದ ಸಂಭವಿಸುವ ಪಾಪವು ಯಾವುವೆಂದರೆ, ಅಗಮ್ಯರಾದ ಸ್ತ್ರೀಯರಲ್ಲಿ ಅಂದರೆ ಪರಪತ್ನೀ, ವಿವಾಹವಾಗದಿರುವ ಕನ್ಯೆಯರು, ವಾರಾಂಗನೆಯರು ಮತ್ತು ನೀಚಜಾತೀಯರು, ಸಗೋತ್ರದವಳಾದ ಕನ್ಯೆ, ವೃಷಲೀ (ಅಂದರೆ ವಿವಾಹವಾಗುವ ಮೊದಲೇ ಪಿತೃಗೃಹದಲ್ಲಿ ಋತುಮತಿಯಾದಂತಹ ಕನ್ಯೆ) ಮುಂತಾದವರ ಸಂಗವನ್ನು ಮಾಡುವುದೂ, ಧರ್ಮಪತ್ನಿಯಲ್ಲಿಯೂ ಕೂಡ ನಿಷಿದ್ಧವಾದ ಪರ್ವಕಾಲಗಳಲ್ಲಿಯೂ, ದಶಮ್ಯಾದಿ ದಿನತ್ರಯಗಳಲ್ಲಿಯೂ, ಹಗಲಿನಲ್ಲಿಯೂ, ದೀಕ್ಷಾಕಾಲಗಳಲ್ಲಿಯೂ, ತೀರ್ಥಯಾತ್ರಾ ಮಾಡುತ್ತಿರುವಾಗಲೂ, ಕ್ರೀಡಿಸೋಣವು ಮಹಾಪಾಪಕೃತ್ಯಗಳು. ಈಗ ಪರ್ವಕಾಲಗಳಾವುವು ಎಂಬುದನ್ನು ಗಮನಿಸಿ.

ವಾರಗಳಲ್ಲಿ ಭಾನುವಾರವೂ, ಸೂರ್ಯ ಮತ್ತು ಚಂದ್ರಗ್ರಹಣಕಾಲಗಳೂ ಮತ್ತು ಮಾತಾಪಿತೃಗಳ ಸಾಂವತ್ಸರೀಕ ಶ್ರಾದ್ಧದ ಹಿಂದೆ ಮೂರು ದಿನಗಳೂ ಮುಂದೆ ಒಂದು ದಿನವೂ ಪರ್ವಕಾಲಗಳೆಂತ ತಿಳಿಯತಕ್ಕದ್ದು. ಅಲ್ಲದೆ,

"ಅಮಾ ಮನು ಯುಗ ಕ್ರಾಂತ ಧೃತಿಃ ಪಾತ ಮಹಾಲಯಾಃ ।
ತಿಸ್ರೋಽಷ್ಟಕಾ ಇಮೇ ಪ್ರೋಕ್ತಾಃ ಷಣ್ಣವತ್ಯಃ ಪ್ರಕೀರ್ತಿತಾಃ ।"

ಎಂಬ ಪ್ರಮಾಣದಲ್ಲಿ ಕಂಡಂತೆ, ೧೨ ಅಮಾವಾಸ್ಯೆಗಳೂ, ೧೪ ಮನ್ವಾದಿಗಳೂ ೪ ಯುಗಾದಿಗಳು (ಕೃತಾದಿ ಯುಗಗಳ ಆದಿ ಎಂತ ಅರ್ಥ), ೧೨ ಸಂಕ್ರಮಣಗಳೂ, ೧೨ ವೈಧೃತಿಗಳೂ, ೧೨ ವ್ಯತೀಪಾತಗಳೂ, ೧೫ ಮಹಾಲಯಗಳೂ, ಮತ್ತು ೧೫ ತಿಸ್ರೋಽಷ್ಟಕಗಳೂ—ಅಂದರೆ ಭಾದ್ರಪದ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣಮಾಸಗಳ ಕೃಷ್ಣಪಕ್ಷದ ಸಪ್ತಮೀ, ಅಷ್ಟಮೀ, ನವಮೀ ತಿಥಿಗಳಿಗೆ ತಿಸ್ರೋಽಷ್ಟಕಗಳೆಂದು ಹೆಸರು — ಎಂಬ ೯೬ ಪರ್ವಕಾಲಗಳು ಪಿತೃಗಳ ಉದ್ದಿಶ್ಯ ಶ್ರಾದ್ಧ ಮಾಡತಕ್ಕ ಅಥವಾ ತರ್ಪಣ ಕೊಡತಕ್ಕ ದಿನಗಳು. ಮಹೋದಯ, ಅರ್ಧೋದಯವೂ ಪರ್ವಕಾಲಗಳು.

"ಅಮಾರ್ಕಪಾತಶ್ರವಣೈ—ರ್ಯುಕ್ತಾ ಚೇತ್ಪೌಷಮಾಘಯೋಃ ।
ಅರ್ಧೋದಯ ಸವಿಜ್ಞೇಯಃ ಕಿಂಚಿನ್ನ್ಯೂನಃ ಮಹೋದಯ ॥"

— ಇತಿ ಧರ್ಮಸಿಂಧೌ

ಪೌರ್ಣಿಮಾಂತ ಮಾಘಮಾಸದ ಅಮಾವಾಸ್ಯೆ, ಭಾನುವಾರ, ಶ್ರವಣನಕ್ಷತ್ರ, ವ್ಯತೀಪಾತ ಸೇರಿದರೆ ಅರ್ಧೋದಯವೂ, ಯಾವುದೊಂದು ಕಡಿಮೆಯಾದರೆ ಮಹೋದಯವೂ ಆಗುತ್ತದೆ. ಈ ದಿನಗಳಲ್ಲಿ ಸ್ತ್ರ್ಯಾದಿ ವಿಷಯಗಳನ್ನು ಬಿಡಬೇಕು. ಬಿಡದಿರುವುದು ಪಾಪಕೃತ್ಯ.

ಮನ್ವಾದಿಗಳೂ ಮತ್ತು ಯುಗಾದಿಗಳೂ ಯಾವ ಯಾವ ದಿನವೆಂತ ತಿಳಿಯತಕ್ಕದ್ದು ಆವಶ್ಯಕವಾದ್ದರಿಂದ ಈ ಕೆಳಗೆ ಪ್ರಮಾಣ ಕೊಡಲಾಗಿದೆ:

ತಿಥ್ಯಗ್ನೀನ ತಿಥಿಸ್ತಿಥ್ಯಾ—ಶೇಕ್ಷ್ಣೋಭೋಽನಲೋಗ್ರಹಃ ।
ತಿಥ್ಯರ್ಕಾ ನ ಶಿವೋಽಶ್ವೋಮಾ ತಿಥಿರ್ಮನ್ವಾದಯೋ ಮಧೋಃ॥
ಶುಕ್ಲ ತೃತೀಯಾ ವೈಶಾಖೇ ಪ್ರೇತಪಕ್ಷೇ ತ್ರಯೋದಶೀ ।
ಕಾರ್ತೀಕೇ ನವಮೀ ಶುಕ್ಲಾ ಮಾಘೇ ಮಾಸೇ ಚ ಪೌರ್ಣಿಮಾ॥

ಚೈತ್ರಮಾಸದಿಂದ ಹನ್ನೆರಡು ತಿಂಗಳಲ್ಲಿಯೂ ಕ್ರಮವಾಗಿ ಹೀಗೆ ತಿಳಿಯಬೇಕು : ಸುಘೋಃ—ಚೈತ್ರಮಾಸದ, ತಿಥಿಃ-ಪೌರ್ಣಿಮಾ, ಅಗ್ನಿ-ಶುಕ್ಲಪಕ್ಷದ ತದಿಗೆ, ವೈಶಾಖದಲ್ಲಿ ನ-ಮನ್ವಾದಿ ಇಲ್ಲ. ಜ್ಯೇಷ್ಠದಲ್ಲಿ ತಿಥಿಃ-ಹುಣ್ಣಿಮೆ, ಆಷಾಢದಲ್ಲಿ ತಿಥ್ಯಾಶೀ-ಪೌರ್ಣಿಮಾ, ಶುದ್ಧ ದಶಮೀ, ಶ್ರಾವಣದಲ್ಲಿ ಕೃಷ್ಣೇಘೋ-ಕೃಷ್ಣಪಕ್ಷದ ಅಷ್ಟಮೀ, ಭಾದ್ರಪದದಲ್ಲಿ ಅನಲಃ-ತದಿಗೆ (ಗೌರೀತದಿಗೆ ದಿನ), ಆಶ್ವೀಜದಲ್ಲಿ ಗ್ರಹಃ-ಮಹಾನವಮೀ, ಕಾರ್ತೀಕದಲ್ಲಿ ತಿಥ್ಯರ್ಕೌ ಪೌರ್ಣಿಮಾ ಮತ್ತು ಉತ್ಥಾನದ್ವಾದಶೀ, ಮಾರ್ಗಶಿರಮಾಸದಲ್ಲಿ ನ-ಮನ್ವಾದಿ ಇಲ್ಲ. ಪುಷ್ಯದಲ್ಲಿ ಶಿವೋ-ಶುದ್ಧ ಏಕಾದಶೀ, ಮಾಘದಲ್ಲಿ ಅಶ್ವೋ-ಮಾ-ರಥಸಪ್ತಮೀ ಮತ್ತು ಅಮಾವಾಸ್ಯಾ, ಫಾಲ್ಗುಣಮಾಸದಲ್ಲಿ ತಿಥಿಃ-ಪೂರ್ಣಿಮಾ — ಈ ತಿಥಿಗಳು ಮನ್ವಾದಿಗಳು.

ಧರ್ಮಶಾಸ್ತ್ರವಚನದಂತೆ ವೈಶಾಖ ಶುದ್ಧ ತದಿಗೆ (ಅಕ್ಷಯ್ಯ ತೃತೀಯಾ) ದಿನ ತ್ರೇತಾಯುಗಾದಿ. ಪಿತೃಪಕ್ಷದಲ್ಲಿ ಭಾದ್ರಪದ ಕೃಷ್ಣ ತ್ರಯೋದಶೀ ಕಲಿಯುಗಾದಿ. ಕಾರ್ತೀಕ ಶುದ್ಧ ನವಮೀ ಕೃತಯುಗಾದಿ. ಮಾಘ ಶುದ್ಧ ಪೂರ್ಣಿಮಾ ದ್ವಾಪರಯುಗಾದಿ—ಹೀಗೆ ನಾಲ್ಕು ಯುಗಾದಿಗಳೆಂತ ಉಕ್ತವಾಗಿದೆ. ಈ ರೀತಿಯಾದ ಮನಸ್ಸು, ವಾಕ್, ಹಸ್ತ, ಪಾದ, ಉದರ ಮತ್ತು ಉಪಸ್ಥೇಂದ್ರಿಯಸಂಬಂಧಗಳಾದ ಪಾಪಗಳನ್ನು ಅಸ್ವತಂತ್ರರಾದ ಜೀವರುಗಳು ಕರ್ಮಾನುಗುಣವಾದ ಶ್ರೀಹರಿಪ್ರೇರಣೆಯಿಂದ ಮಾಡುತ್ತಾರಾದ್ದರಿಂದ ಸೂರ್ಯಶ್ಚೇತ್ಯಾದಿ ಮಂತ್ರಗಳಿಂದ ದೇವತಾಪ್ರಾರ್ಥನೆಯನ್ನು ಮಾಡಿ ನಮ್ಮ ಪಾಪಗಳನ್ನು ಕ್ಷಮಾಸಮುದ್ರನಾದ ಪರಮಾತ್ಮನು ಪರಿಹಾರ ಮಾಡಲಿ ಎಂತ ವಿನಯದಿಂದ ಕೇಳಿಕೊಳ್ಳುವುದು ಭೃತ್ಯರಾದ ಜೀವರ ಕರ್ತವ್ಯವಾಗಿರುತ್ತೆ ಎಂಬುದನ್ನು ಮೇಲಿನ ಮಂತ್ರವು ಅಧಿಕಾರಿ ಚೇತನರಿಗೆ ತಿಳಿವಳಿಕೆಯನ್ನು ಉಂಟುಮಾಡುತ್ತದೆ. ನಂತರ ಪುನರ್ಮಾರ್ಜನವನ್ನು ಮಾಡಿಕೊಳ್ಳಬೇಕು.

## ಪುನರ್ಮಾರ್ಜನ

ಆಪೋಹಿಷ್ಠೇತಿ ನವರ್ಚಸ್ಯ ಸೂಕ್ತಸ್ಯ ಸಿಂಧುದ್ವೀಪೋ ಅಂಬರೀಷೋವಾ ಆಪೋ ಗಾಯತ್ರೀ, ಪಂಚಮೀ ವರ್ಧಮಾನಾ ಸಪ್ತಮೀ ಪ್ರತಿಷ್ಠಾ ಅಂತೇ ದ್ವೇ ಅನುಷ್ಟುಭೌ ಪುನರ್ಮಾರ್ಜನೇ ವಿನಿಯೋಗಃ ||

ಆಪೋ ಹಿ ಷ್ಠಾ ಎಂಬುವ ಒಂಭತ್ತು ಋಕ್ಕುಗಳ ಸೂಕ್ತಕ್ಕೆ ಸಿಂಧು-ದ್ವೀಪರೆಂಬುವರು ಅಥವಾ ಅಂಬರೀಷರೆಂಬುವರು ಋಷಿಗಳು (ದ್ರಷ್ಟ್ರುಗಳು). ಆಪೋ ಗಾಯಿತ್ರೀ-ಅಬ್ದೇವತಾ ಎಂದರೆ ಆಪಶ್ಶಬ್ದವಾಚ್ಯನಾದ ಉದಕಾಭಿಮಾನಿ ನಿಯಾಮಕ ಪರಮಾತ್ಮನು ಪ್ರತಿಪಾದ್ಯದೇವತೆಯು. ಮೊದಲಿನ ನಾಲ್ಕು ಋಕ್ಕುಗಳು ಮತ್ತು ಆರನೆಯ ಋಕ್ಕು ಗಾಯಿತ್ರೀ ಛಂದಸ್ಸುಳ್ಳದ್ದು. ಐದನೇ ಋಕ್ಕು ವರ್ಧಮಾನ (ಪಾದಪಾದಕ್ಕೂ ಅಕ್ಷರ ಹೆಚ್ಚುವ) ಛಂದಸ್ಸು, ಏಳನೇ ಋಕ್ಕು ಪ್ರತಿಷ್ಠಾ—ಅಂದರೆ ಮೊದಲನೇ ಪಾದ ಎಂಟು ಅಕ್ಷರಗಳೂ, ಎರಡನೇ ಪಾದ ಏಳು ಅಕ್ಷರಗಳೂ, ಮೂರನೇ ಪಾದ ಆರು ಅಕ್ಷರಗಳೂ—ಛಂದಸ್ಸು, ಅಂತೇ ದ್ವೇ ಅನುಷ್ಟುಭೌ—ಅಂದರೆ ಕೊನೆಯದಾದ ಎಂಟು ಮತ್ತು ಒಂಭತ್ತನೇ ಋಕ್ಕುಗಳು ಎಂಟು ಅಕ್ಷರದ ನಾಲ್ಕು ಪಾದಗಳುಳ್ಳ ಅನುಷ್ಟುಪ್ ಛಂದಸ್ಸು. ಇಂಥಾ ಮಂತ್ರವು ಪುನಃ ಮಾರ್ಜನ ಮಾಡುವ ಕರ್ಮದಲ್ಲಿ ಉಪಯೋಗಿಸಲ್ಪಡಬೇಕು.

ಓಂ ಆಪೋ ಹಿ ಷ್ಠಾ............ಜನಯಥಾ ಚ ನಃ ॥ ೩ ॥

೪) ಓಂ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ। ಶಂ ಯೋರಭಿ ಸ್ರವಂತು ನಃ ॥ ೫) ಈಶಾನಾ ವಾರ್ಯಾಣಾಂ ಕ್ಷಯಂತೀಶ್ಚರ್ಷಣೀನಾಮ್। ಅಪೋ ಯಾಚಾಮಿ ಭೇಷಜಮ್ ॥ ೬) ಅಪ್ಸು ಮೇ ಸೋಮೋ ಅಬ್ರವೀ—ದಂತರ್ವಿಶ್ವಾನಿ ಭೇಷಜಾ। ಅಗ್ನಿಂ ಚ ವಿಶ್ವಶಂಭುವಮ್ ॥ ೭) ಆಪಃ ಪೃಣೀತ ಭೇಷಜಂ ವರೂಥಂ ತನ್ವೇ ಮಮ। ಜ್ಯೋಕ್ ಚ ಸೂರ್ಯಂ ದೃಶೇ ॥ ೮) ಇದಮಾಪಃ ಪ್ರವಹತ ಯತ್ ಕಿಂಚ ದುರಿತಂ ಮಯಿ। ಯದ್ವಾಹಮಭಿದುದ್ರೋಹ ಯದ್ವಾಶೇಪ ಉತಾನೃತಮ್ ॥ ೯) ಆಪೋ ಅದ್ಯಾನ್ವಚಾರಿಷಂ ರಸೇನ ಸಮಗಸ್ಮಹಿ। ಪಯಸ್ವಾನಗ್ನ ಆ ಗಹಿ ತಂ ಮಾ ಸಂ ಸೃಜ ವರ್ಚಸಾ॥ ಸಸ್ರುಷೀಸ್ತದಪಸೋ ದಿವಾ ನಕ್ತಂ ಚ ಸಸ್ರುಷೀಃ। ವರೇಣ್ಯಕ್ರತೂ ರಹಮಾ ದೇವೀ ರವಸೇ ಹುವೇ ॥ ಎಂಬ ಮಂತ್ರಗಳಿಂದ ನೀರನ್ನು ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಚೆಲ್ಲಿ ಪುನಃ ಬೇರೆ ಉದಕವನ್ನು ಬಲಹಸ್ತದಲ್ಲಿ ಹಾಕಿಕೊಂಡು ಈ ಮುಂದಿನ ಮಂತ್ರದಿಂದ ಅಭಿಮಂತ್ರಿಸಬೇಕು.

## ಪಾಪಪುರುಷವಿಸರ್ಜನ

ಋತಂ ಚ ಸತ್ಯಂಚೇತ್ಯಸ್ಯ ಮಂತ್ರಸ್ಯ ಅಘಮರ್ಷಣಋಷಿಃ ಭಾವವೃತ್ತೋ ದೇವತಾ ಅನುಷ್ಟುಪ್ ಛಂದಃ ಪಾಪಪುರುಷವಿಸರ್ಜನೇ ವಿನಿಯೋಗಃ ||

೧) ಓಂ ಋತಂ ಚ ಸತ್ಯಂ ಚಾಭೀದ್ಧಾತ್ ತಪಸೋಽಧ್ಯಜಾಯತ | ತತೋ ರಾತ್ರ್ಯಜಾಯತ ತತಃ ಸಮುದ್ರೋ ಅರ್ಣವಃ ||

೨) ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ | ಅಹೋರಾತ್ರಾಣಿ ವಿದಧ—ದ್ವಿಶ್ವಸ್ಯ ಮಿಶತೋ ವಶೀ ||

೩) ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ | ದಿವಂ ಚ ಪೃಥಿವೀಂ ಚಾ—ಽಂತರಿಕ್ಷಮಥೋ ಸ್ವಃ ||

ಎಂಬ ಮಂತ್ರದಿಂದ ಮಂತ್ರಿಸಿ ನಾಸಿಕಾಗ್ರದಲ್ಲಿ ಹಸ್ತವನ್ನು ಇಟ್ಟುಕೊಂಡು ಮೂಸಿ ನೋಡಿ ಎಡ ಮೂಗಿನಿಂದ ರೇಚಕ ಮಾಡಿ (ಅಂದರೆ ಉಸಿರನ್ನು ಬಿಟ್ಟು) ತನ್ನ ಎಡಭಾಗದಲ್ಲಿ ಭೂಮಿಯ ಮೇಲೆ ನೀರನ್ನು ಹಾಕಬೇಕು. ಅದನ್ನು ನೋಡಬಾರದು. ನಂತರ ಆಚಮನವನ್ನು ಮಾಡಬೇಕು. ಆಪೋಹಿ ಷ್ಠಾದಿ ಮೂರು ಮಂತ್ರಗಳ ಅರ್ಥವನ್ನು ಹಿಂದೆ ಬರೆದಿರುತ್ತದೆ. ಈಗ ಶಂನೋ ದೇವೀತ್ಯಾದಿ ಮಂತ್ರದ ಅರ್ಥವನ್ನು ಕೆಳಗೆ ಕೊಟ್ಟಿರುತ್ತದೆ.

೧) ದೇವೀಃ-ಕ್ರೀಡಾದಿ ಗುಣವಿಶಿಷ್ಟನಾದ, ಹೇ ಆಪಃ-ಎಲೈ ಅಬಭಿಮಾನಿ ದೇವತಾಂತರ್ಯಾಮಿಯಾದ ಆಪಶ್ಶಬ್ದವಾಚ್ಯನಾದ ಪರಮಾತ್ಮನೇ, ನಃ-ನಮ್ಮಗಳಿಗೆ, ಶಂ-ಸುಖಗಳು, ಭವಂತು-ಆಗಲಿ. ಎಲೈ ಪರಮಾತ್ಮನೇ ! ನೀವು ಅಭಿಷ್ಟಯೇ-ಐಹಿಕ ಮತ್ತು ಆಮುಷ್ಮಿಕ ಸ್ವರ್ಗಸುಖ ಪ್ರಾಪ್ತಿಗೆ ಮಾತ್ರವಲ್ಲ, ಮೋಕ್ಷಪ್ರಾಪ್ತಿಯಾಗಬೇಕೆಂಬ ಇಷ್ಟಸಿದ್ಧಿಗೋಸ್ಕರವೂ, ಅನುಗ್ರಹ ಮಾಡತಕ್ಕವರು, ಭವಂತು-ಆಗಿರಿ. ನೀವುಗಳು ಶಂ-ಸುಖದ, ಯೋಃ-ಪ್ರಾಪ್ತಿಗೋಸ್ಕರ, ನಃ-ನಮ್ಮಗಳ, ಉಪರಿ-ಮೇಲೆ, ಅಭಿಸ್ರವಂತು-ಸುಖದಾಯಕವಾದ ಉದಕವನ್ನು ಸುರಿಸಿರಿ. ಅಂದರೆ, ಹೇ ವರುಣಾಂತರ್ಗತ ವಾಸುದೇವ, ನಿನ್ನ ಕರುಣಾಮೃತದಿಂದ ನನ್ನನ್ನು ಅಭಿಷೇಕ ಮಾಡಿ ಶಾಶ್ವತ ಸುಖವನ್ನು ಕೊಡು ಎಂತ ತಾತ್ಪರ್ಯವು.

೨) ವಾರ್ಯಾಣಾಂ-ಸಜ್ಜೀವರುಗಳಿಗೆ ಅಪೇಕ್ಷಣೀಯವಾದ ಜ್ಞಾನ ಭಕ್ತಿ ವೈರಾಗ್ಯಾದಿ ಸಾಧನಗಳಿಗೂ ಅಥವಾ ಪ್ರಸಿದ್ಧಗಳಾದ ಧನಾದಿಗಳಿಗೂ ಅಥವಾ ವಾರಿಯಲ್ಲಿ ಅಂದರೆ ಉದಕದಲ್ಲಿ ಹುಟ್ಟಿದ ವ್ರೀಹಿ, ಯವಾದಿ ಧಾನ್ಯಗಳಿಗೂ, ಈಶಾನಾಃ-ನಿಯಾಮಕರಾದ ಅಂದರೆ ಸ್ವಾಮಿಗಳಾದ, ಚರ್ಷಣೀನಾಂ-ಪ್ರಜೆಗಳಿಗೆ, ಕ್ಷಯಂತೀಃ-ನಿವಾಸಭೂತಗಳಾದ, ಹೇ ಅಪಃ-ಎಲೈ ಅಬ್ದೇವತೆಗಳಿರಾ, ವಃ-ನಿಮ್ಮುಗಳನ್ನು, ಭೇಷಜಂ-ಸಂಸಾರಾಖ್ಯ ಬಂಧ ನಿವೃತ್ತಿ ಮಾಡುವಂಥ ಔಷಧವನ್ನು, ಯಾಚಾಮಿ-ಯಾಚನೆಮಾಡುತ್ತೇನೆ

೩) ಔಷಧವಿದ್ದರೆ ಅದನ್ನು ಬೇಡುವುದು ನ್ಯಾಯಸಮ್ಮತವಾದದ್ದು. ಇಲ್ಲವಾದರೆ ಅಯುಕ್ತವಾಗುವುದು. ಆದ್ದರಿಂದ ಉದಕದಲ್ಲಿ ಔಷಧವಿದೆ ಎಂದು ಯಾರು ಹೇಳಿರುತ್ತಾರೆ ಅಂದರೆ ಅದಕ್ಕೆ ಉತ್ತರವಾಗಿ ಈ ಮೂರನೇ ಋಕ್ಕು ಉಕ್ತವಾಗಿರುತ್ತೆ. ಸೋಮಃ-ವನಸ್ಪತಿಗಳಿಗೆ ಅಭಿಮಾನಿಯಾದ ಚಂದ್ರನೂ ಮತ್ತು ಉಮಾ ಅಂದರೆ ಪಾರ್ವತೀ, ಆಕೆಯಿಂದ ಸಹಿತನಾದ್ದರಿಂದ ಸೋಮಶಬ್ದವಾಚ್ಯನಾದ ಚಂದ್ರನಿಗೂ ನಿಯಾಮಕನಾದ ಚಂದ್ರಶೇಖರನಾದ ರುದ್ರದೇವರೂ, ಮತ್ತು ಉಮಾಃ-ಉತ್ಕೃಷ್ಟವಾದ ಪ್ರಮಾಣಗಳೂ ಅವುಗಳಿಂದ ಸಹಿತರಾದವರು, ಸೋಮಃ-ವಾಯುದೇವರು. ವಾಯುದೇವರಾದರೋ ಚಂದ್ರರುದ್ರಾದಿ ತತ್ವೇಶರಿಗೂ ನಿಯಾಮಕರಾದವರು. ಇಂಥ ಮುಖ್ಯಪ್ರಾಣದೇವರೂ, ಮತ್ತು ಇವರ ಅಂತರ್ಯಾಮಿಯಾದ, ಸೋಮಃ-ಸೌಮ್ಯಸ್ವಭಾವದವನೂ ಅಂದರೆ ಅಕ್ರೂರಿಯಾದವನೂ, ಉತ್ಕೃಷ್ಟ ಜ್ಞಾನ ಸಹಿತನೂ (ಜ್ಞಾನಸ್ವರೂಪಿಯಾದವನೂ), ಅಥವಾ ಉಃ-ರುದ್ರಃ, ಮಾ-ಲಕ್ಷ್ಮೀದೇವಿ ಇವರುಗಳಿಂದ ಸಹಿತನಾದವನೂ, ಸಾರರೂಪಿಯೂ, ಸರ್ವೋತ್ತಮನೂ, ಜ್ಞಾನಸ್ವರೂಪಿಯೂ ಅಂದರೆ ಉತ್ಕೃಷ್ಟ ಪೂರ್ಣಜ್ಞಾನವುಳ್ಳನನೂ ಆದ್ದರಿಂದ ಸೋಮಶಬ್ದವಾಚ್ಯನಾದ ಪರಮಾತ್ಮನೂ ಕೂಡ, ಅಪ್ಸು-ಉದಕಗಳಲ್ಲಿ, ಅಂತಃ-ಮಧ್ಯೇ, ವಿಶ್ವಾನಿ-ಸಮಸ್ತಗಳಾದ, ಭೇಷಜಾಃ-ಔಷಧಗಳು, ಸಂತೀತಿ-ಇರುತ್ತವೆ ಎಂತಲೂ, ಅಥವಾ ಅಪ್ಸು ಅಂತಃ-ಸಮುದ್ರಮಧ್ಯದಲ್ಲಿ ಅವತರಿಸಿದ ಧನ್ವಂತರೀನಾಮಕ ಭಗವಂತನಲ್ಲಿ, ವಿಶ್ವಾನಿ ಭೇಷಜಾ-ಸಮಸ್ತ ರೋಗನಿವಾರಕಗಳಾದ ಔಷಧಗಳೂ

ಮೋಕ್ಷಪ್ರದವಾದ ಅಮೃತವೂ, ಸಂತೀತಿ–ಇರುತ್ತವೆ ಎಂತ, ಮೇ–ನನ್ನನ್ನು ಕುರಿತು, ಅಬ್ರುವೀತ್–ಹೇಳಿದರು ಮತ್ತು ವಿಶ್ವಶಂಭುವಂ ಪೂರ್ಣಸುಖಾಧಾರನಾದ ಸರ್ವಸುಖಕರನಾದ, ಅಗ್ನಿಂ–ಶ್ರೇಷ್ಠನೂ, ಜಗತ್ತನ್ನು ಪ್ರವರ್ತನ ಮಾಡತಕ್ಕವನೂ ಆದ್ದರಿಂದ ಅಗ್ನಿಶಬ್ದವಾಚ್ಯನಾದ ನಾರಾಯಣನನ್ನೂ ಮತ್ತು ಪ್ರಸಿದ್ಧನಾದ ಅಗ್ನಿಯನ್ನೂ ಉದಕದಲ್ಲಿ ಇರುವವನನ್ನಾಗಿ ನನ್ನನ್ನು ಕುರಿತು, ಅಬ್ರುವೀತ್–ಹೇಳಿದರು. ಸಂಸಾರತಾರಕವಾದ ಭಗವದಾಖ್ಯ ಔಷಧವು ಉದಕದಲ್ಲಿ ಇರುವುದರಿಂದ ಔಷಧವನ್ನು ಯಾಚಿಸಿದ್ದು ನ್ಯಾಯವಾದದ್ದೇ ಸರಿ.

೪) ಹೇ ಆಪಃ–ಎಲೈ ಉದಕಾಭಿಮಾನಿದೇವತೆಗಳಿರಾ, ಯೂಯಂ–ನೀವುಗಳು, ಮಮ–ನನ್ನ, ತನ್ವೇ–ಶರೀರಕ್ಕೋಸ್ಕರ, ಭೇಷಜಂ–ರೋಗ ನಿವಾರಕವಾದ ಔಷಧವನ್ನು, ಚ–ಮತ್ತು, ವರೂಥಂ–ಗುಪ್ತಿಯನ್ನು ಅಂದರೆ ಸಂರಕ್ಷಣೆಯನ್ನು, ಪೃಣೀತ–ಕೊಡುವರಾಗಿರಿ. ಸೂರ್ಯಂ–ಜ್ಞಾನಿಗಮ್ಯನಾದ ವಿಷ್ಣುವನ್ನು, ದೃಶೇ–ನೋಡುವುದಕ್ಕೋಸ್ಕರವಾಗಿ, ಜ್ಯೋಕ್–ಜ್ಞಾನವನ್ನು, ಪೃಣೀತ–ಪೂರ್ಣಮಾಡಿರಿ. ಎಲೈ ಅಬಭಿಮಾನಿ ದೇವತೆಗಳಿರಾ, ಸಂಸಾರನಿವೃತ್ತಿಗೆ ಔಷಧಭೂತನಾದ ಪೂರ್ವೋಕ್ತನಾದ ಭಗವಂತನನ್ನು ಅವನ ಅನುಗ್ರಹವನ್ನೂ ನೀವುಗಳು ನನಗೆ ಸಂಪಾದನೆ ಮಾಡಿಕೊಡುವವರಾಗಿರಿ ಎಂಬ ಮುಖ್ಯತಾತ್ಪರ್ಯ.

ವರೂಥಂ ಗುಪ್ತಿರುದ್ದಿಷ್ಟಾ ಜ್ಯೋತಿರ್ವಿಷ್ಣುದೃಶಸ್ತಥಾ ।
ಸೂರಿಪ್ರಾಪ್ಯೋಯತೋವಿಷ್ಣುಃ ಸೂರ್ಯ ಇತ್ಯಭಿಧೀಯತೇ ॥

ಎಂಬ ಪ್ರಮಾಣವಚನದಂತೆ ಮೇಲಿನ ಋಕ್ಕಿನಲ್ಲಿರುವ ವರೂಥಂ ಎಂಬ ಶಬ್ದಕ್ಕೆ ಗುಪ್ತಿ ಎಂತಲೂ, ಜ್ಯೋಕ್ ಶಬ್ದಕ್ಕೆ ಜ್ಞಾನ ಎಂತಲೂ, ಸೂರ್ಯ ಶಬ್ದಕ್ಕೆ ವಿಷ್ಣು ಎಂತಲೂ ಅರ್ಥ ಮಾಡಲ್ಪಟ್ಟಿದೆ. ದೇಹವು ಆರೋಗ್ಯದಿಂದ ಇದ್ದರೆ ಶ್ರೀಹರಿಯ ದರ್ಶನಾದಿಗಳಿಗೆ ಅನುಕೂಲಗಳಾದ ಶ್ರವಣ, ಮನನಾದಿ ಸಾಧನಾನುಷ್ಠಾನಗಳು ನಡೆಯುತ್ತವೆ. ಇಲ್ಲವಾದರೆ ಇಲ್ಲ. ಆದ್ದರಿಂದ ಈ ಮಂತ್ರದಿಂದ ದೇಹಾರೋಗ್ಯವು ಕೇಳಿಕೊಂಡಿರಲ್ಪಟ್ಟಿದೆ.

೫) ಹೇ ಆಪಃ-ಎಲೈ ಅಪ್‌ಶಬ್ದವಾಚ್ಯನಾದ ಪರಮಾತ್ಮನೇ, ಮಯಿ-ನನ್ನಲ್ಲಿ, ಯತ್ಕಿಂಚ ದುರಿತಂ-ಯಾವ ಅಜ್ಞಾನಾದಿ ದುರಿತವು ಅಂದರೆ ಪಾಪವು ವಿಶೇಷವಾಗಿ, ಅಸ್ತಿ-ಇರುತ್ತದೆಯೋ, ಇದಂ-ಇದನ್ನು, ಪ್ರವಹತ-ಓಡಿಸ ತಕ್ಕವನಾಗು. ಅಂದರೆ ನನ್ನನ್ನು ಪಾಪಮುಕ್ತನನ್ನಾಗಿ ಮಾಡು ಎಂತ ಅರ್ಥ. ಯದ್ವಾ-ಅಥವಾ, ಅಹಂ-ನಾನು, ಅಭಿ-ಸರ್ವತೋಮುಖವಾಗಿ, ದುದ್ರೋಹ-ಬುದ್ಧಿಪೂರ್ವಕವಾಗಿ ವಂಚನಾದಿಗಳನ್ನು ಮತ್ತು ಪರಪೀಡಾರೂಪಗಳಾದ ಪಾಪಗಳನ್ನು, ಕೃತವಾನಸ್ಮಿ-ಮಾಡಿದವನಾಗಿದ್ದೇನೆಯೋ, ಅಥವಾ ಶೇಪೇ-ಉತ್ತಮರನ್ನು ಶಪಿಸಿದ್ದೇನೋ, ಉತ-ಮತ್ತು, ಅನೃತಂ-ಸಜ್ಜನರಿಗೆ ಹಿಂಸೆಯಾಗುವ ಸುಳ್ಳುಮಾತನ್ನು ನುಡಿದಿರುತ್ತೇನೋ ಆ ಎಲ್ಲ ಅಪರಾಧಗಳನ್ನೂ, ಪ್ರವಹತ-ಬೇರೆ ಕಡೆಗೆ ಒಯ್ಯುವನಾಗು. ಅಂದರೆ ಕಲ್ಯಾದಿ ದೈತ್ಯರ ಆವೇಶದಿಂದ ನಡೆಯುತಕ್ಕ ಪಾಪಕೃತ್ಯಗಳಿಂದಾಗುವ ಪಾಪಗಳನ್ನು ನನ್ನಿಂದ ಭಿನ್ನ-ರಾದ ಆ ದೈತ್ಯರಲ್ಲಿ ಒಯ್ದು ಇಟ್ಟು ಅವರಿಗೆ ಆ ಫಲವನ್ನು ಉಣಿಸಿ ನಿನ್ನ ದಾಸನಾದ ನನ್ನನ್ನು ಉದ್ಧಾರ ಮಾಡು.

೬) ಹೇ ಆಪಃ-ಎಲೈ ಅಬಭಿಮಾನಿ ದೇವತೆಗಳಿರಾ! ತದಂತರ್ಗತ ಶ್ರೀ-ಹರಿಯೇ, ಅಹಂ-ನಾನು, ಅದ್ಯ-ಈಗ, ವಃ-ನಿಮ್ಮಗಳನ್ನು, ಅನ್ವಚಾರಿಷಂ-ಅನುಸರಣೆ ಮಾಡುವವನಾಗಿದ್ದೇನೆ. ಅಂದರೆ ಈ ಮಾರ್ಜನಕಾಲದಲ್ಲಿ ನಿಮ್ಮಲ್ಲೇ ಮನಸ್ಸನ್ನು ನಿಲ್ಲಿಸಿ ಧ್ಯಾನಮಾಡುತ್ತೇನೆ. ತೇನ-ಆ ಕಾರಣದಿಂದ, ಅಹಂ-ನಾನು, ನಿಮ್ಮಗಳ ಮತ್ತು ನಿಮ್ಮಂತರ್ನಿಯಾಮಕನಾದ ಪರಮಾತ್ಮನಿಂದ ಕೊಡಲ್ಪಟ್ಟ ಪ್ರಸಿದ್ಧವಾದ ರಸದಿಂದಲೂ ಪರಮಾನಂದರೂಪವಾದ ರಸದಿಂದಲೂ, ಸಮಗಸ್ಮಹಿ-ಕೂಡಿಕೊಂಡಿರುತ್ತೇನೆ ಪಯಸ್ವಾನ್-ಉದಕಾಂತರ್ಗತನಾದ, ಹೇ ಅಗ್ನೇ-ಅಗ್ನಿಶಬ್ದವಾಚ್ಯನಾದ ಶ್ರೀಹರಿಯೇ, ಆಗಹಿ-ನನ್ನ ಹೃದಯವನ್ನು ಕುರಿತು ಬಾ, ಅಂದರೆ ನನ್ನ ಹೃದಯದಲ್ಲಿ ಸನ್ನಿಹಿತನಾಗು, ನನಗೆ ಗೋಚರನಾಗೆಂದು ಮುಖ್ಯತಾತ್ಪರ್ಯ. ಈ ರೀತಿ ಸ್ತುತಿಯನ್ನು ಮಾಡುತ್ತಿರುವ ತಂ-ಅಂಥ ನಿನ್ನ ಭಕ್ತನಾದ, ಮಾ-ನನ್ನನ್ನು, ವರ್ಚಸಾ-ಬ್ರಹ್ಮತೇಜಸ್ಸಿನಿಂದ, ಸಂಸೃಜ-ಸಂಯೋಜನೆ ಮಾಡುವವನಾಗು.

೭) ಈ ರೀತಿಯಾಗಿ ಋಕ್‌ಸಂಹಿತಾಂತರ್ಗತಗಳಾದ ಆಪೋ ಹಿ ಷ್ಠಾದಿ ಮಾರ್ಜನಮಂತ್ರಗಳನ್ನು ಹೇಳಿ, ಈಗ "ಸಸೃಷೀಃತದಪಸೋ" ಎಂಬ ಋಗ್ವೇದಖಿಲಸಂಹಿತಾಮಂತ್ರವನ್ನು ಮಾರ್ಜನಮಂತ್ರದಲ್ಲಿ ಸೇರಿಸಿ ತಚ್ಛಬ್ದ-ವಾಚ್ಯನಾದ ಗಾಯತ್ರೀಪ್ರತಿಪಾದ್ಯನಾದ ಗುಣಪೂರ್ಣನಾದ ಬ್ರಹ್ಮನನ್ನು ಬ್ರಹ್ಮೋಪಾಸಕನಾದ ಅಧಿಕಾರಿಯು ಪ್ರಾರ್ಥಿಸುತ್ತಾನೆ.

ತದಪಸಃ—ತಸ್ಯ-ಗಾಯತ್ರೀಪ್ರತಿಪಾದ್ಯ ನಾರಾಯಣನ ಸಂಬಂಧಿ-ಯಾದ, ಅಪಸಃ-ಉದಕಗಳು ಅಂದರೆ ನಾರಾಯಣನಿಂದ ಸೃಷ್ಟಗಳಾದ ಉದಕಗಳು, ಅವಸೇ-ಆತ್ಮಸಂರಕ್ಷಣಾರ್ಥಕ್ಕಾಗಿ, ಭವಂತಿ-ಆಗುತ್ತವೆ. ಸಸೃಷೀಃ-ಮೋಕ್ಷಾಖ್ಯ ಅಮೃತವನ್ನು ಸುರಿಸುತ್ತಿರುವ, ಅಪಃ-ಉದಕಗಳನ್ನು, ಅವಸೇ-ನಮ್ಮ ರಕ್ಷಣೆಗೋಸ್ಕರ, ಸಸ್ರುಷೀಃ-ಸೃಷ್ಟಿಮಾಡಿದನು. ದಿವಾ ನಕ್ತಂ ಚ-ಹಗಲು ರಾತ್ರಿಗಳಲ್ಲಿ, ತದಭಿಮಾನಿ ದೇವತೆಗಳ ನಿಯಾಮಕನಾಗಿಯೂ, ಹಗಲು ರಾತ್ರಿ ಎಂಬ ಕಾಲನಿಯಾಮಕನಾಗಿಯೂ, ಆಯಾ ವಸ್ತುವಿಷಯಕ ಬುದ್ಧಿಯನ್ನು ಹುಟ್ಟಿಸತಕ್ಕವನಾಗಿಯೂ, ಸಸ್ರುಷೀಃ-ಪ್ರವೃತ್ತಗಳಾದ, ದೇವೀಃ-ಕ್ರೀಡಾದಿ ಗುಣವಿಶಿಷ್ಟಗಳಾದ, ವಃ-ನಿಮ್ಮ ರೂಪಗಳನ್ನು, ಅಂದರೆ ಉದಕದಲ್ಲಿ ಅವತರಿಸಿದ ಮತ್ಸ್ಯ, ಕೂರ್ಮ, ಹಯ-ಗ್ರೀವ, ವರಾಹಾದಿ ರೂಪಗಳನ್ನು ಉಪಲಕ್ಷಣತಯಾ ಅನೇಕ ಅವತಾರ-ರೂಪಗಳನ್ನು, ಯತಃ-ಯಾವ ಕಾರಣದಿಂದ, ಅಹಂ-ನಾನು, ವರೇಣ್ಯ-ಕ್ರತುಃ-ಯೋಗ್ಯವಾದ, ಪ್ರಾರ್ಥನೀಯವಾದ ಅಂದರೆ ಅಪೇಕ್ಷಣೀಯವಾದ ಜ್ಞಾನಸಂಪಾದನೆ ಮಾಡಲು ಅಪೇಕ್ಷೆಯುಳ್ಳವನಾಗಿದ್ದೇನೋ, ಅತಃ-ಅದುದರಿಂದ ಜ್ಞಾನಪ್ರಾಪ್ತಿಗಾಗಿಯೂ, ಅವಸೇ-ಶರೀರೇಂದ್ರಿಯಗಳ ಸಂರಕ್ಷಣೆ-ಗೋಸ್ಕರವೂ, ಆಹುವೆ-ಆಹ್ವಾನ ಮಾಡುತ್ತೇನೆ. ನನ್ನ ಹೃದಯದಲ್ಲಿ ಬಿಂಬರೂಪಿಯಾದ ನೀನು ಗೋಚರನಾಗಬೇಕೆಂಬ ಬಯಕೆಯಿಂದ ಪ್ರಾರ್ಥನೆಯನ್ನು ಮಾಡುತ್ತೇನೆಂದು ತಾತ್ಪರ್ಯ.

'ಋತಂ ಚ ಸತ್ಯಂ ಚ' ಎಂಬ ಮಂತ್ರಕ್ಕೆ ಅಘಮರ್ಷಣ ಎಂಬುವರು ಋಷಿಗಳು. ಭಾವವೃತ್ತಾಃ-ಭಾವಪದಾರ್ಥಗಳ ಅಂದರೆ ಸತ್ಯಭೂತಗಳಾದ ಪದಾರ್ಥಗಳ, ವೃತ್ತಂ-ಸತ್ತಾ ಅಂದರೆ ಇರುವಿಕೆಯು ಯಾವನ ಅಧೀನವೋ

೫) ಹೇ ಆಪಃ-ಎಲೈ ಅಪ್‌ಶಬ್ದವಾಚ್ಯನಾದ ಪರಮಾತ್ಮನೇ, ಮಯಿ-ನನ್ನಲ್ಲಿ, ಯತ್ಕಿಂಚ ದುರಿತಂ-ಯಾವ ಅಜ್ಞಾನಾದಿ ದುರಿತವು ಅಂದರೆ ಪಾಪವು ವಿಶೇಷವಾಗಿ, ಅಸ್ತಿ-ಇರುತ್ತದೆಯೋ, ಇದಂ-ಇದನ್ನು, ಪ್ರವಹತ-ಓಡಿಸ-ತಕ್ಕವನಾಗು. ಅಂದರೆ ನನ್ನನ್ನು ಪಾಪಮುಕ್ತನನ್ನಾಗಿ ಮಾಡು ಎಂತ ಅರ್ಥ. ಯದ್ವಾ-ಅಥವಾ, ಅಹಂ-ನಾನು, ಅಭಿ-ಸರ್ವತೋಮುಖವಾಗಿ, ದುದ್ರೋಹ-ಬುದ್ಧಿಪೂರ್ವಕವಾಗಿ ವಂಚನಾದಿಗಳನ್ನು ಮತ್ತು ಪರಪೀಡಾರೂಪಗಳಾದ ಪಾಪಗಳನ್ನು, ಕೃತವಾನಸ್ಮಿ-ಮಾಡಿದವನಾಗಿದ್ದೇನೆಯೋ, ಅಥವಾ ಶೇಪೇ-ಉತ್ತಮರನ್ನು ಶಪಿಸಿದ್ದೇನೋ, ಉತ-ಮತ್ತು, ಅನೃತಂ-ಸಜ್ಜನರಿಗೆ ಹಿಂಸೆಯಾಗುವ ಸುಳ್ಳುಮಾತನ್ನು ನುಡಿದಿರುತ್ತೇನೋ ಆ ಎಲ್ಲ ಅಪರಾಧಗಳನ್ನೂ, ಪ್ರವಹತ-ಬೇರೆ ಕಡೆಗೆ ಒಯ್ಯುವನಾಗು. ಅಂದರೆ ಕಲ್ಯಾದಿ ದೈತ್ಯರ ಆವೇಶದಿಂದ ನಡೆಯತಕ್ಕ ಪಾಪಕೃತ್ಯಗಳಿಂದಾಗುವ ಪಾಪಗಳನ್ನು ನನ್ನಿಂದ ಭಿನ್ನ-ರಾದ ಆ ದೈತ್ಯರಲ್ಲಿ ಒಯ್ದು ಇಟ್ಟು ಅವರಿಗೆ ಆ ಫಲವನ್ನು ಉಣಿಸಿ ನಿನ್ನ ದಾಸನಾದ ನನ್ನನ್ನು ಉದ್ಧಾರ ಮಾಡು.

೬) ಹೇ ಆಪಃ-ಎಲೈ ಜಲಾಭಿಮಾನಿ ದೇವತೆಗಳಿರಾ! ತದಂತರ್ಗತ ಶ್ರೀ-ಹರಿಯೇ, ಅಹಂ-ನಾನು, ಅದ್ಯ-ಈಗ, ವಃ-ನಿಮ್ಮಗಳನ್ನು, ಅನ್ವಚಾರಿಷಂ-ಅನುಸರಣೆ ಮಾಡುವವನಾಗಿದ್ದೇನೆ. ಅಂದರೆ ಈ ಮಾರ್ಜನಕಾಲದಲ್ಲಿ ನಿಮ್ಮಲ್ಲೇ ಮನಸ್ಸನ್ನು ನಿಲ್ಲಿಸಿ ಧ್ಯಾನಮಾಡುತ್ತೇನೆ. ತೇನ-ಆ ಕಾರಣದಿಂದ, ಅಹಂ-ನಾನು, ನಿಮ್ಮಗಳ ಮತ್ತು ನಿಮ್ಮಂತರ್ನಿಯಾಮಕನಾದ ಪರಮಾತ್ಮ-ನಿಂದ ಕೊಡಲ್ಪಟ್ಟ ಪ್ರಸಿದ್ಧವಾದ ರಸದಿಂದಲೂ ಪರಮಾನಂದರೂಪವಾದ ರಸದಿಂದಲೂ, ಸಮಗಸ್ಮ ಹಿ-ಕೂಡಿಕೊಂಡಿರುತ್ತೇನೆ ಪಯಸ್ವಾನ್-ಉದ-ಕಾಂತರ್ಗತನಾದ, ಹೇ ಅಗ್ನೇ-ಅಗ್ನಿಶಬ್ದವಾಚ್ಯನಾದ ಶ್ರೀಹರಿಯೇ, ಆಗಹಿ-ನನ್ನ ಹೃದಯವನ್ನು ಕುರಿತು ಬಾ, ಅಂದರೆ ನನ್ನ ಹೃದಯದಲ್ಲಿ ಸನ್ನಿಹಿತನಾಗು, ನನಗೆ ಗೋಚರನಾಗೆಂದು ಮುಖ್ಯತಾತ್ಪರ್ಯ. ಈ ರೀತಿ ಸ್ತುತಿಯನ್ನು ಮಾಡುತ್ತಿರುವ ತಂ-ಅಂಥ ನಿನ್ನ ಭಕ್ತನಾದ, ಮಾ-ನನ್ನನ್ನು, ವರ್ಚಸಾ-ಬ್ರಹ್ಮತೇಜಸ್ಸಿನಿಂದ, ಸಂಸೃಜ-ಸಂಯೋಜನೆ ಮಾಡುವವನಾಗು.

೭) ಈ ರೀತಿಯಾಗಿ ಋಕ್‌ಸಂಹಿತಾಂತರ್ಗತಗಳಾದ ಆಪೋ ಹಿ ಷ್ಠಾದಿ ಮಾರ್ಜನಮಂತ್ರಗಳನ್ನು ಹೇಳಿ, ಈಗ "ಸಸ್ರುಷೀಃತದಪಸೋ" ಎಂಬ ಋಗ್ವೇದಖಿಲಸಂಹಿತಾಮಂತ್ರವನ್ನು ಮಾರ್ಜನಮಂತ್ರದಲ್ಲಿ ಸೇರಿಸಿ ತಚ್ಛಬ್ದ-ವಾಚ್ಯನಾದ ಗಾಯತ್ರೀಪ್ರತಿಪಾದ್ಯನಾದ ಗುಣಪೂರ್ಣನಾದ ಬ್ರಹ್ಮನನ್ನು ಬ್ರಹ್ಮೋಪಾಸಕನಾದ ಅಧಿಕಾರಿಯು ಪ್ರಾರ್ಥಿಸುತ್ತಾನೆ.

ತದಪಸಃ—ತಸ್ಯ-ಗಾಯತ್ರೀಪ್ರತಿಪಾದ್ಯ ನಾರಾಯಣನ ಸಂಬಂಧಿ-ಯಾದ, ಅಪಸಃ-ಉದಕಗಳು ಅಂದರೆ ನಾರಾಯಣನಿಂದ ಸೃಷ್ಟಗಳಾದ ಉದಕಗಳು, ಅವಸೇ-ಆತ್ಮಸಂರಕ್ಷಣಾರ್ಥಕ್ಕಾಗಿ, ಭವಂತಿ-ಆಗುತ್ತವೆ. ಸಸ್ರುಷೀಃ—ಮೋಕ್ಷಾಖ್ಯ ಅಮೃತವನ್ನು ಸುರಿಸುತ್ತಿರುವ, ಅಪಃ-ಉದಕ ಗಳನ್ನು, ಅವಸೇ—ನಮ್ಮ ರಕ್ಷಣೆಗೋಸ್ಕರ, ಸಸ್ರುಷೀಃ-ಸೃಷ್ಟಿಮಾಡಿದನು. ದಿವಾ ನಕ್ತಂ ಚ—ಹಗಲು ರಾತ್ರಿಗಳಲ್ಲಿ, ತದಭಿಮಾನಿ ದೇವತೆಗಳ ನಿಯಾಮಕ ನಾಗಿಯೂ, ಹಗಲು ರಾತ್ರಿ ಎಂಬ ಕಾಲನಿಯಾಮಕನಾಗಿಯೂ, ಆಯಾ ವಸ್ತುವಿಷಯಕ ಬುದ್ಧಿಯನ್ನು ಹುಟ್ಟಿಸತಕ್ಕವನಾಗಿಯೂ, ಸಸ್ರುಷೀಃ—ಪ್ರವೃತ್ತಗಳಾದ, ದೇವೀಃ—ಕ್ರೀಡಾದಿ ಗುಣವಿಶಿಷ್ಟಗಳಾದ, ವಃ—ನಿಮ್ಮ ರೂಪಗಳನ್ನು, ಅಂದರೆ ಉದಕದಲ್ಲಿ ಅವತರಿಸಿದ ಮತ್ಸ್ಯ, ಕೂರ್ಮ, ಹಯ-ಗ್ರೀವ, ವರಾಹಾದಿ ರೂಪಗಳನ್ನು ಉಪಲಕ್ಷಣತಯಾ ಅನೇಕ ಅವತಾರ-ರೂಪಗಳನ್ನು, ಯತಃ—ಯಾವ ಕಾರಣದಿಂದ, ಅಹಂ-ನಾನು, ಪರೇಣ್ಯ-ಕ್ರತುಃ-ಯೋಗ್ಯವಾದ, ಪ್ರಾರ್ಥನೀಯವಾದ ಅಂದರೆ ಅಪೇಕ್ಷಣೀಯವಾದ ಜ್ಞಾನಸಂಪಾದನೆ ಮಾಡಲು ಅಪೇಕ್ಷೆಯುಳ್ಳವನಾಗಿದ್ದೇನೋ, ಅತಃ-ಅದುದ ರಿಂದ ಜ್ಞಾನಪ್ರಾಪ್ತಿಗಾಗಿಯೂ, ಅವಸೇ-ಶರೀರೇಂದ್ರಿಯಗಳ ಸಂರಕ್ಷಣೆ-ಗೋಸ್ಕರವೂ, ಆಹುವೇ-ಆಹ್ವಾನ ಮಾಡುತ್ತೇನೆ. ನನ್ನ ಹೃದಯದಲ್ಲಿ ಬಿಂಬರೂಪಿಯಾದ ನೀನು ಗೋಚರನಾಗಬೇಕೆಂಬ ಬಯಕೆಯಿಂದ ಪ್ರಾರ್ಥನ ಯನ್ನು ಮಾಡುತ್ತೇನೆಂದು ತಾತ್ಪರ್ಯ.

'ಋತಂ ಚ ಸತ್ಯಂ ಚ' ಎಂಬ ಮಂತ್ರಕ್ಕೆ ಅಘಮರ್ಷಣ ಎಂಬುವರು ಋಷಿಗಳು. ಭಾವವೃತ್ತಾಃ-ಭಾವಪದಾರ್ಥಗಳ ಅಂದರೆ ಸತ್ಯಭೂತಗಳಾದ ಪದಾರ್ಥಗಳ, ವೃತ್ತಂ-ಸತ್ತಾ ಅಂದರೆ ಇರುವಿಕೆಯು ಯಾವನ ಅಧೀನವೋ

ಅಂಥ ಭಾವವೃತ್ತಶಬ್ದವಾಚ್ಯನಾದ ಸಕಲ ಜಗತ್ಸೃಷ್ಟ್ಯಾದಿಕರ್ತನಾದ ಪರ-ಮಾತ್ಮನು ಮಂತ್ರಪ್ರತಿಪಾದ್ಯದೇವತೆಯು. ಅನುಷ್ಟುಪ್ ಛಂದಸ್ಸು. ಪಾಪ-ಪುರುಷರಿಂದ ಕೂಡಿದ ಜಲವನ್ನು ವಿಸರ್ಜನ ಮಾಡುವುದರಲ್ಲಿ ಈ ಮಂತ್ರವು ವಿನಿಯೋಗ ಮಾಡಲ್ಪಡಬೇಕು.

೧) ಮಂತ್ರಾರ್ಥ: ಋತಂ—ಯಥಾರ್ಥವಾದ ಪ್ರಕೃತ್ಯಾದಿ ಕಾರಣ-ಗಳೂ, ಸತ್ಯಂ—ಸದ್ಭಾವವನ್ನು, ಅಂದರೆ ಸತ್ಯವಾದ ಕಾರಣದಿಂದ ಹುಟ್ಟಿದ ಕಾರ್ಯರೂಪಜಗತ್ತೂ, ಚ—ಅಥವಾ, ಋತಂ-ಮನಸ್ಸಿನಲ್ಲಿ ಉಂಟಾಗುವ ಅರ್ಥವಿಷಯಕವಾದ ಸಂಕಲ್ಪವೂ, ಸತ್ಯಂ—ಮನಸ್ಸಿನಲ್ಲಿರುವ ಸಂಕಲ್ಪವನ್ನು ವ್ಯಕ್ತಗೊಳಿಸುವ ಯಥಾರ್ಥವಾದ ಭಾಷಣವೂ, ಚ—ಮತ್ತು, ಋತಂ—ವಿಕಾರರಹಿತವಾದ ಈಶ್ವರನ ಅವತಾರರೂಪವಾದ ಸೃಷ್ಟಿಯೂ, ಸತ್ಯಂ—ಬ್ರಹ್ಮಜ್ಞಾನದಿಂದ ಅಬಾಧ್ಯವಾದ ಅಂದರೆ ವ್ಯಾವಹಾರಿಕಸತ್ಯವಲ್ಲದೆ ಪಾರ-ಮಾರ್ಥಿಕಸತ್ಯವಾದ ಸಮಸ್ತ ಜಗತ್ತೂ ಕೂಡ, ತಪಸಃ—ಜಗತ್ಸರ್ಜನ ಮಾಡ-ಬೇಕೆಂದು ಇಚ್ಛೆಯನ್ನು ಮಾಡಿದ ನಂತರದಲ್ಲಿ, ಅಭೀದ್ಧಾತ್—ಸರ್ವತ್ರದಲ್ಲಿ ಪ್ರಕಾಶಮಾನನಾದ ಪರಮಾತ್ಮನ ದೆಸೆಯಿಂದ, ಅಧ್ಯಜಾಯತ—ಉತ್ಪನ್ನ-ವಾಯಿತು. ಅಥವಾ ಋತ ಮತ್ತು ಸತ್ಯ ಶಬ್ದಗಳಿಂದ ಜಗತ್ತೇ ಹೇಳಲ್ಪಡುತ್ತೆ. ಎರಡು ಶಬ್ದಗಳು ಏಕೆ ಪ್ರಯೋಗಿಸಬೇಕು ಎಂದರೆ ಸರ್ವಪ್ರಕಾರದಿಂದಲೂ ಜಗತ್ತು ಬಾಧ್ಯವಾಗತಕ್ಕದ್ದು ಅಲ್ಲ. ಸತ್ಯಭೂತವಾದದ್ದೇ ಜಗತ್ತು ಎಂಬ ಅರ್ಥವನ್ನು ದೃಢೀಕರಣ ಮಾಡಲಿಕ್ಕಾಗಿ ಎಂತ ತಿಳಿಯತಕ್ಕದ್ದು. ಜಗತ್ತು ಯಾವ ಪ್ರಕಾರ ಉತ್ಪತ್ತಿಯಾಯಿತು ಎಂದರೆ ಈ ಮಂತ್ರವು ಹೀಗೆ ವಿವರಿ-ಸುತ್ತದೆ. ತತಃ—ದೇಶತಃ ಕಾಲತಃ ಗುಣತಃ ವ್ಯಾಪ್ತನಾದ ನಾರಾಯಣದೇವ-ನಿಂದ, ರಾತ್ರಿಃ—ರಾತ್ರಿಗೆ ಅಭಿಮಾನಿಯಾದ ದುರ್ಗಾದೇವಿಯೂ, ರಾತ್ರಿ-ಶಬ್ದೋಪಲಕ್ಷಿತಕಾಲವೂ ಮತ್ತು ಗಾಯತ್ರೀ, ಸಾವಿತ್ರೀ, ಸರಸ್ವತೀದೇವಿ-ಯರೂ, ಅಜಾಯತ—ಹುಟ್ಟಿದರು. ತತಃ—ಆ ನಾರಾಯಣನ ದೆಶೆಯಿಂದ, ಸಮುದ್ರಃ—ಗುಣಗಳಿಗೆ ಆಶ್ರಯನಾದ ಸಮುದ್ರಶಬ್ದವಾಚ್ಯನಾದ, ಅರ್ಣವಃ ಅತಿಶಯಿತ ಜ್ಞಾನ ಸುಖ ಬಲ ರೂಪನಾದ ಪರಮಾತ್ಮನನ್ನು ಉಳ್ಳ, ಅಂದರೆ ನಿರಂತರದಲ್ಲಿ ಪರಮಾತ್ಮನ ಲಕ್ಷ್ಯವನ್ನು ಹೊಂದಿರತಕ್ಕ ಚತುರ್ಮುಖ-

ಬ್ರಹ್ಮದೇವರು ಮಹತ್ತತ್ತ್ವಾಭಿಮಾನಿಗಳಾಗಿ, ಅಜಾಯತ–ಹುಟ್ಟಿದರು. ಉಪ ಲಕ್ಷಣದಿಂದ ಇಪ್ಪತ್ತು ನಾಲ್ಕು ತತ್ತ್ವಾಭಿಮಾನಿಗಳೂ ಹುಟ್ಟಿದರೆಂದು ತಿಳಿಯ ತಕ್ಕದ್ದು.

೨) ಸಮುದ್ರಾತ್, ಅರ್ಣವಾತ್–ಮೇಲೆ ಹೇಳಿರುವ ಉತ್ಪತ್ತಿಯ ಪ್ರಕಾರ ಸಮುದ್ರ ಮತ್ತು ಅರ್ಣವಶಬ್ದವಾಚ್ಯನಾದ ಪರಮಾತ್ಮನ ದೆಸೆ ಯಿಂದ, ಸಂವತ್ಸರಃ–ಸಂವತ್ಸರೋ ವೈ ಪ್ರಜಾಪತಿಃ ಎಂಬ ಶ್ರುತ್ಯನುಸಾರ ವಾಗಿ ಸಂವತ್ಸರಶಬ್ದವಾಚ್ಯನಾದ ಚತುರ್ಮುಖಬ್ರಹ್ಮನು ಬ್ರಹ್ಮಾಂಡಕ್ಕೆ ಅಭಿಮಾನಿಯಾಗಿ, ಅಧ್ಯಜಾಯತ–ಹುಟ್ಟಿದನು. ಅಥವಾ ಕ್ಷಣ, ಲವ, ನಿಮಿಷಾದಿ ಅವಯವಗಳುಳ್ಳ ಕಾಲವು ಹುಟ್ಟಿತು. ಇನ್ನು ಮುಂದೆ ಬ್ರಹ್ಮಾಂಡದ ಒಳಗಿನ ಸೃಷ್ಟಿಯನ್ನು ಹೇಳುತ್ತದೆ. ಧಾತಾ-ಸರ್ವ ಜಗತ್ತನ್ನೂ ಧರಿಸಿರುವ ಪರಮಾತ್ಮನು, ಅಹೋರಾತ್ರಾಣಿ-ಹಗಲು ರಾತ್ರಿಗಳೆಂಬ ಕಾಲವಿಶೇಷಗಳನ್ನು ತದಭಿಮಾನಿದೇವತೆಗಳನ್ನೂ, ಮಿಷತಃ-ನಿಮೇಷಾದಿ ಚೇಷ್ಟಾಯುಕ್ತವಾದ, ವಿಶ್ವಸ್ಯ-ಜಗತ್ತಿಗೆ, ವಶೀ–ಸ್ವಾಮಿಯು ಅಂದರೆ ಈಶ್ವರನು, ವಿದಧತ್–ಸೃಷ್ಟಿಸಿದನು.

೩) ಇಂತಹ ಪರಮಾತ್ಮನು, ಸೂರ್ಯಾಚಂದ್ರಮಸೌ–ಸೂರ್ಯ-ಚಂದ್ರರುಗಳನ್ನು, ಚ-ಮತ್ತು, ದಿವಂ–ಸ್ವರ್ಗಲೋಕವನ್ನು, ಪೃಥಿವೀಂ-ಭೂಮಿಯನ್ನು, ಅಂತರಿಕ್ಷಂ-ಅಂತರಿಕ್ಷಲೋಕವನ್ನೂ, ಚ–ಮತ್ತು, ಸ್ವಃ–ಅತಿಶಯಸುಖದಿಂದ ಕೂಡಿರತಕ್ಕ ಮಹರಾದಿ ಊರ್ಧ್ವಲೋಕಗಳನ್ನೂ, ಉಪಲಕ್ಷಣತಯಾ ಅತಲಾದಿ ಅಧೋಲೋಕಗಳನ್ನೂ, ಯಥಾಪೂರ್ವಂ–ಹಿಂದಿನ ಬ್ರಹ್ಮಕಲ್ಪದಲ್ಲಿ ಹೇಗೆ ಇದ್ದಿತೋ, ತಥಾ–ಹಾಗೆ, ಅಕಲ್ಪಯತ್–ಸೃಷ್ಟಿಮಾಡಿದನು. ತ್ರೈಕಾಲಿಕನಿಷೇಧಪ್ರತಿಯೋಗಿತ್ವವು ಜಗತ್ತಿಗೆ ಕೂಡುವು ದಿಲ್ಲವಾದ್ದರಿಂದ ಜಗತ್ತು ಮಿಥ್ಯಾ ಅಲ್ಲ, ಸತ್ಯವಾದದ್ದು ಎಂದು ಸ್ಪಷ್ಟ ವಾಗುತ್ತದೆ. ನಿಯಮ್ಯ-ನಿಯಾಮಕಭಾವವು ವಶೀ ಎಂಬ ಶಬ್ದದಿಂದ ತಿಳಿ ಯುತ್ತದೆ ಇದರಿಂದ ಈಶನಿಂದ ಭಿನ್ನವಾದದ್ದು ಚೇತನಾಚೇತನಾತ್ಮಕವಾದ ಜಗತ್ತು ಎಂದು ಸಿದ್ಧವಾಗುತ್ತದೆ. ಅನಂತರ ಆಚಮನ ಮಾಡಬೇಕು. ಪುನಃ 'ಪ್ರಣವಸ್ಯ....ಭೂರ್ಭುವಸ್ಸ್ವರೋಂ' ಎಂತ ಪ್ರಾಣಾಯಾಮ ಮಾಡಬೇಕು.

ಪೂರ್ವೋಕ್ತ ಏವಂ ಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಸೂರ್ಯಾಂ.
ತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀ
ಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ
ಪ್ರಾತಸ್ಸಂಧ್ಯಾಂಗ ಅರ್ಘ್ಯಪ್ರದಾನಮಹಂ ಕರಿಷ್ಯೇ—ಎಂತ ಸಂಕಲ್ಪಿಸಿ
ಉದ್ಧರಣೆಯಿಂದ ನೀರನ್ನು ಕೈಯಲ್ಲಿ ಹಾಕಿಕೊಂಡು ಬಿಡಬೇಕು.

## ಅರ್ಘ್ಯಮಂತ್ರ

**ಗಾಯತ್ರ್ಯಾಃ ವಿಶ್ವಾಮಿತ್ರಋಷಿಃ ಸವಿತಾದೇವತಾ ಗಾಯತ್ರೀ ಛಂದಃ ಪ್ರಾತಃಸಂಧ್ಯಾರ್ಘ್ಯಪ್ರದಾನೇ ವಿನಿಯೋಗಃ ||** (ಎಂದು ಹೇಳಿ ಅಂಜಲಿಯಲ್ಲಿ ನೀರನ್ನು ತೆಗೆದುಕೊಂಡು) **"ಓಂ ಭೂರ್ಭುವಸ್ಸ್ವಃ ತತ್-ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್"** (ಎಂದು ಗಾಯತ್ರೀಮಂತ್ರ ಉಚ್ಚರಿಸಿ ನಾಸಿಕಾ-ಪರ್ಯಂತ ಹಸ್ತವನ್ನು ಎತ್ತಿ ಪೂರ್ವದಿಕ್ಕಿಗೆ ನೀರನ್ನು ಹಾಕಬೇಕು.) ಇದು ಒಂದು ಅರ್ಘ್ಯ. ಹೀಗೆ ಅರ್ಘ್ಯ ಕೊಟ್ಟಮೇಲೆ ಆತ್ಮಸಂರಕ್ಷಣೆಗೋಸ್ಕರವೂ ಪುನರರ್ಘ್ಯಾಧಿಕಾರ ಸಿದ್ಧಿಸುವುದಕ್ಕೂ ಮುಂದೆ ಬರೆದಿರುವ ಮಂತ್ರ ಜಪಿಸಿದ ನಂತರ ಗಾಯತ್ರೀಶಿರೋಮಂತ್ರದಿಂದ ಆಕರ್ಷಣಾರ್ಥವಾಗಿ ಒಂದು ಅರ್ಘ್ಯವನ್ನು ಕೊಡಬೇಕು.

**"ಪ್ರತಿಚಕ್ಷ್ವವಶಿಷ್ಟೇಂದ್ರಾಸೋಮಾವನುಷ್ಟುಪ್ ಆತ್ಮಸಂರಕ್ಷಣಾರ್ಥೇ ಪುನರರ್ಘ್ಯಾಧಿಕಾರಸಿದ್ಧ್ಯರ್ಥೇ ಜಪೇ ವಿನಿಯೋಗಃ || ಹರಿಃ ಓಮ್ || ಪ್ರತಿಚಕ್ಷ್ವ ವಿಚಕ್ಷ್ವೇಂದ್ರಶ್ಚ ಸೋಮ ಜಾಗೃತಮ್ | ರಕ್ಷೋಭ್ಯೋವಧಮಸ್ಯತ ಮಶನಿಯಾಂತುಮದ್ಭ್ಯಃ ||** (ಎಂತ ಜಪಿಸಿ ನಂತರ) **ಅಸ್ಯ ಶ್ರೀಗಾಯತ್ರಿಶಿರೋಮಂತ್ರಸ್ಯ ಬ್ರಹ್ಮಾಋಷಿಃ ಗಾಯತ್ರೀ ಛಂದಃ ಗಾಯತ್ರ್ಯಾಕರ್ಷಣೇ ವಿನಿಯೋಗಃ||" "ಓಮಾಪೋಜ್ಯೋತೀ-ರಸೋಽಮೃತಂಬ್ರಹ್ಮಭೂರ್ಭುವಸ್ಸ್ವರೋಮ್ ||"** ಎಂತ ಉಚ್ಚರಿಸಿ ನೀರನ್ನು ಬಿಡಬೇಕು. ಗಾಯತ್ರೀಯಿಂದ ಅರ್ಘ್ಯ ಕೊಟ್ಟು 'ಪ್ರತಿಚಕ್ಷ್ವ' ಎಂಬ ಮಂತ್ರ ಜಪಿಸಿ, ಗಾಯತ್ರೀಶಿರದಿಂದ ಆಕರ್ಷಣಾರ್ಥ ಒಂದು ಅರ್ಘ್ಯ

ಕೊಟ್ಟರೆ ಒಂದು ಸಲ ಅರ್ಘ್ಯ ಕೊಟ್ಟಂತಾಯಿತು. ಹೀಗೆ ಮೂರು ಸಲ ಅರ್ಘ್ಯಪ್ರದಾನ ಮಾಡಬೇಕು. ತರುವಾಯ **ಕಾಲಾತೀತವಾಗಿದ್ದರೆ** ತದ್ದೋಷ ಪ್ರಾಯಶ್ಚಿತ್ತಾರ್ಥವಾಗಿ ಮುಂದೆ ಹೇಳಿರುವ ಮಂತ್ರದಿಂದ ಅರ್ಘ್ಯ ಒಂದನ್ನು ಕೊಡತಕ್ಕದ್ದು. "ಹರಿಃ ಓಮ್ ॥ **ಯದದ್ಯಕಚ್ಚೇತಿಮಂತ್ರಸ್ಯ ಸುಕಾಕ್ಷ ಋಷಿಃ ಸೂರ್ಯೋದೇವತಾ ತ್ರಿಷ್ಟುಪ್ ಛಂದಃ ಕಾಲಾತೀತಪ್ರಾಯಶ್ಚಿತ್ತಾರ್ಘ್ಯಪ್ರದಾನೇ ವಿನಿಯೋಗಃ ॥ ಹರಿಃ ಓಮ್ ॥ ಯದದ್ಯಕಚ್ಚವೃತ್ರಹನ್ನುದಗಾ ಅಭಿಸೂರ್ಯ । ಸರ್ವಂ ತದಿಂದ್ರ ತೇ ವಶೇ ॥**" ಎಂತ ಅರ್ಘ್ಯ ಕೊಡಬೇಕು.

"**ಹೃದಯಸ್ಥಾತು ಗಾಯತ್ರೀ ಹೃದ್ಗುಹಾಮುಖನಿಸೃತಾ । ಹತ್ವಾ ಹ್ಯಾದಿತ್ಯಶತ್ರೂಂಶ್ಚ ವಿಶಸ್ವ ಹೃದಯಂ ಮಮ ॥**" (ಎಂತ ಹೇಳಿ ಕೈಯಲ್ಲಿ ನೀರು ಹಾಕಿಕೊಂಡು ಪ್ರದಕ್ಷಿಣಾ ತಿರುಗಿ 'ಓಂ ಅಸಾವಾದಿತ್ಯೋ ಬ್ರಹ್ಮ' ಎಂದು ನೀರನ್ನು ತನಗೆ ಸುತ್ತಲೂ ಹಾಕಿಕೊಳ್ಳತಕ್ಕದ್ದು.)

ಅರ್ಘ್ಯಪ್ರದಾನ ಮೂರಾವರ್ತಿ ಏತಕ್ಕಾಗಿ ಕೊಡಬೇಕು ಎಂದರೆ ಪ್ರಮಾಣ ಹೀಗೆ ನಿರೂಪಣೆ ಮಾಡುತ್ತದೆ.

ಏಕಂ ವಾಹನನಾಶಾಯ ದ್ವಿತೀಯಂ ಶಸ್ತ್ರನಾಶನೇ ।
ರಾಕ್ಷಸಾನಾಂ ವಧಾಯೈಕಂ ದದ್ಯಾದರ್ಘ್ಯತ್ರಯಂ ಬುಧಾಃ ॥

ಸೂರ್ಯನಿಗೆ ಶತ್ರುಗಳಾದ ಮಂದೇಹ ಅಥವಾ ಐರೇಯ ಎಂದು ಪ್ರಸಿದ್ಧರಾದ ರಾಕ್ಷಸರುಗಳ ವಾಹನನಾಶಕ್ಕಾಗಿ ಒಂದು, ಆಯುಧನಾಶಕ್ಕಾಗಿ ಒಂದು, ರಾಕ್ಷಸರುಗಳ ಸಂಹಾರಕ್ಕೋಸ್ಕರ ಒಂದು—ಹೀಗೆ ಮೂರು ಅರ್ಘ್ಯಗಳನ್ನು ಕೊಡಬೇಕು. ಮತ್ತು ಪ್ರಾತಃ ಸಾಯಂಸಂಧ್ಯಾ ಅರ್ಘ್ಯ ಪ್ರದಾನ ಮಾಡತಕ್ಕ ಉದಕದಲ್ಲಿ ಈ ಮುಂದೆ ತೋರಿಸಿರುವ ತ್ರಿಕೋಣಾಕೃತಿಯ ವ್ಯಾಹೃತಿಯಂತ್ರವನ್ನು ಬಲಗೈ ಕಿರುಬೆರಳಿನಿಂದ ಬರೆದು ನಂತರ ಅರ್ಘ್ಯವನ್ನು ಕೊಡಬೇಕು. ಇದಕ್ಕೆ ಪ್ರಮಾಣಗಳು ಹೀಗೆ ಇರುತ್ತವೆ—

ತ್ರಿಕೋಣಂ ದೀರ್ಘರಮ್ಯಂ ಚ ದೇವಾನಾಂ ಸಿದ್ಧಿದಾಯಕಮ್ ।
ಕೋಣಮಧ್ಯೇ ಚ ಹ್ರೀಂಕಾರಂ ಕೋಣಾಗ್ರೇ ಪ್ರಣವಂ ನ್ಯಸೇತ್ ॥




ದಂಡೇಷು ವ್ಯಾಹೃತಿಂ ಚೈವ ಮಧ್ಯೇ ವರುಣ ಬೀಜಕಮ್ । ಕನಿಷ್ಠಾಗ್ರೇಣ ವೈ ತತ್ರ ಉಲ್ಲಿ- ಖೇತ್ತು ಯಥಾಕ್ರಮಮ್ ॥ ಲಿಖಿತ್ವಾ ಮಂತ್ರ- ರಾಜಂ ತು ಪಶ್ಚಾದರ್ಘ್ಯಂ ಸಮಾಚರೇತ್ । ದೈತ್ಯಾನಾಂ ಚ ವಧಾರ್ಥಾಯ ಗಾಯತ್ರ್ಯಾ ಅಭಿಮಂತ್ರಯೇತ್ ॥ ದೈತ್ಯಾನಾಂ ರಕ್ಷಣಾ- ರ್ಥಾಯ ವೇತ್ರಪಾಖ್ಯೋ ಮಹಾಸುರಃ ॥ ಶುಕ್ರಸ್ಯ ಚಾಜ್ಞಯಾ ತತ್ರ ಜಲೇ ತಿಷ್ಠತಿ ಸರ್ವದಾ ॥ ಅತಸ್ತಸ್ಯಾಪ- ಕಾರಾರ್ಥಂ ಲಿಖೇದ್ವ್ಯಾಹೃತಿಯಂತ್ರಕಮ್ ॥ —ಇತಿ ಸಂಧ್ಯಾಭಾಷ್ಯೇ ॥

ದೀರ್ಘವಾಗಿಯೂ ರಮ್ಯವಾಗಿಯೂ ಇರುವ, ದೇವತೆಗಳಿಗೆ ಸಿದ್ಧಿದಾಯಕ ವಾದ ತ್ರಿಕೋಣವನ್ನು ಹಸ್ತದ ಕನಿಷ್ಠಾಗ್ರದಿಂದ ಬರೆದು ಕೋಣಮಧ್ಯದಲ್ಲಿ ಲಕ್ಷ್ಮೀಬೀಜವಾದ 'ಹ್ರೀಂ'ಕಾರವನ್ನೂ ಕೋಣಾಗ್ರದಲ್ಲಿ 'ಓಂ'ಕಾರವನ್ನೂ ದಂಡಗಳಲ್ಲಿ ಕ್ರಮವಾಗಿ ಭೂರಾದಿ ವ್ಯಾಹೃತಿಗಳನ್ನೂ ಪುನಃ ಮಧ್ಯದಲ್ಲಿ ವರುಣಬೀಜವಾದ 'ವಂ' ಎಂಬ ಅಕ್ಷರವನ್ನೂ ಬರೆದು ನಂತರ ಅರ್ಘ್ಯ ಕೊಡಬೇಕು. ನೀರಿನಲ್ಲಿ ಏತಕ್ಕೆ ಈ ಯಂತ್ರ ಬರೆಯಬೇಕೆಂದರೆ ಶುಕ್ರಾ- ಚಾರ್ಯರ ಆಜ್ಞೆಯಿಂದ ದೈತ್ಯರುಗಳನ್ನು ರಕ್ಷಣೆ ಮಾಡುವ ಸಲುವಾಗಿ ವೇತ್ರಪಾ ಎಂಬ ಅಸುರನು ನೀರಿನಲ್ಲಿ ಸದಾ ವಾಸಮಾಡುತ್ತಾನೆ. ಅವನಿಗೆ ಅಪಕಾರ ಮಾಡಿ ಅಲ್ಲಿಂದ ಓಡಿಸುವುದಕ್ಕಾಗಿ ಈ ವ್ಯಾಹೃತಿಯಂತ್ರವನ್ನು ಬರೆಯಲೇಬೇಕು. ಸೂರ್ಯಶತ್ರುಗಳಾದ ದೈತ್ಯರ ಹನನಕ್ಕಾಗಿ ಪ್ರಾತಃ- ಸಾಯಂ ಅರ್ಘ್ಯ ಕೊಡಬೇಕೆಂದು ನಿಶ್ಚಿತವಾಯಿತಷ್ಟೆ! ಆ ದೈತ್ಯರು ಯಾರು ಎಲ್ಲಿ ಇರುತ್ತಾರೆ, ಅವರಿಗೆ ಇರುವ ವರಗಳಾದರೂ ಯಾವ ರೀತಿಯಾದದ್ದು, ಎಂಬುದನ್ನು ಈ ಮುಂದೆ ಬರೆದಿರುವ ವಿಷ್ಣು ಪುರಾಣದ ಎಂಟನೆ ಅಧ್ಯಾಯದ ವಾಕ್ಯಗಳು ವಿವರಿಸುತ್ತವೆ—

ಮಂದೇಹಾನಾಂ ವಧಾರ್ಥಾಯ ಪ್ರಕ್ಷಿಪೇದುದಕಾಂಜಲಿಮ್ ।
ಪ್ರಾಯಶ್ಚಿತ್ತಾರ್ಥಮಾಚಮ್ಯ ಮುಚ್ಯತೇ ದೈತ್ಯಹತ್ಯಯಾ ೧

ಸಂಧ್ಯಾಕಾಲೇ ಚ ಸಂಪ್ರಾಪ್ತೇ ಘೋರೇ ಪರಮದಾರುಣೇ ।
ಮಂದೇಹಾ ರಾಕ್ಷಸಾ ಘೋರಾಃ ಸೂರ್ಯಮಿಚ್ಛಂತಿ ಖಾದಿತುಮ್ ॥ ೨ ॥
ಪ್ರಜಾಪತಿಕೃತಃ ಶಾಪಃ ತೇಷಾಮ್ಮೈರೇಯರಕ್ಷಸಾಮ್ ।
ಅಕ್ಷಯತ್ವಂ ಶರೀರಾಣಾಂ ಮರಣಂ ಚ ದಿನೇದಿನೇ ॥ ೩ ॥
ತತಃ ಸೂರ್ಯಸ್ಯತೈರ್ಯುದ್ಧಂ ಭವತ್ಯೇವ ಸುದಾರುಣಮ್ ।
ತತೋದ್ವಿಜೋತ್ತಮಸ್ತೋಯಂ ಪ್ರಕ್ಷಿಪೇತ ಮಹಾಮುನೇ ॥ ೪ ॥
ಓಂಕಾರಬ್ರಹ್ಮಸಂಯುಕ್ತಂ ಗಾಯತ್ರ್ಯಾ ಚಾಭಿಮಂತ್ರಿತಮ್ ।
ತೇನ ದಹ್ಯಂತಿ ಪಾಪಾಃ ವಜ್ರೀಭೂತೇನ ವಾರಿಣಾ ॥ ೫ ॥
ಅತಃ ಪ್ರಯಾತಿ ಭಗವಾನ್ ಬ್ರಾಹ್ಮಣೈರಭಿರಕ್ಷಿತಃ ।
ವಾಲಖಿಲ್ಯಾದಿಭಿಶ್ಚೈವ ಜಗತಃ ಪಾಲನೋದ್ಯತಃ ॥ ೬ ॥

1. ಮಂದೇಹರೆಂಬ ರಾಕ್ಷಸರುಗಳ ವಧೆಕ್ಕೋಸ್ಕರ ಉದಕಾಂಜಲಿ ಅಂದರೆ ಅರ್ಘ್ಯವನ್ನು ಕೊಟ್ಟು ದೈತ್ಯವಧೆ ಪ್ರಾಯಶ್ಚಿತ್ತಕ್ಕಾಗಿ ಆಚಮನ ಮಾಡಿ, ದೈತ್ಯಹತ್ಯದಿಂದ ಬಂತಕ್ಕ ದೋಷದಿಂದ ಮುಕ್ತರಾಗುತ್ತಾರೆ. 2. ಪರಮ ದಾರುಣವಾದ ಕ್ರೂರವಾದ ಸಂಧ್ಯಾಕಾಲವು ಪ್ರಾಪ್ತವಾದರೆ ಕ್ರೂರಿಗಳಾದ ಮಂದೇಹರಾಕ್ಷಸರು ಸೂರ್ಯನನ್ನು ತಿನ್ನಬೇಕೆಂದು ಅಪೇಕ್ಷಿಸುತ್ತಾರೆ. 3. ಅಂಥ ಐರೇಯರಾಕ್ಷಸರುಗಳಿಗೆ ಬ್ರಹ್ಮದೇವರು ಹೀಗೆ ಶಾಪ ಕೊಟ್ಟಿರುತ್ತಾರೆ: ಏನೆಂದರೆ, ಶರೀರಗಳಿಗೆ ಅಕ್ಷಯತ್ವವೂ ಪ್ರತಿದಿನದಲ್ಲಿ ಮರಣವೂ ಉಂಟಾಗಲೀ ಎಂದು. 4 5. ಅನಂತರದಲ್ಲಿ ಆ ರಾಕ್ಷಸರುಗಳಿಂದ ಸೂರ್ಯನಿಗೆ ಅತ್ಯಂತ ಭಯಂಕರವಾದ ಯುದ್ಧ ನಡೆಯುತ್ತದೆ ಆದ್ದರಿಂದ ಹೇ ಮಹಾಮುನಿಯೇ! ಬ್ರಾಹ್ಮಣಶ್ರೇಷ್ಠನಾದವನು ಓಂಕಾರಾಖ್ಯವೇದದಿಂದ ಸಹಿತವಾದ ಗಾಯತ್ರಿಯಿಂದ ಅಭಿಮಂತ್ರಿತವಾದ ಉದಕವನ್ನು ಎತ್ತಿಹಾಕಬೇಕು. ವಜ್ರಾಯುಧಕ್ಕೆ ಸದೃಶವಾದ ಆ ಉದಕದಿಂದ ಪಾಪಿಗಳಾದ ಆ ದೈತ್ಯರು ಸುಟ್ಟುಹೋಗುತ್ತಾರೆ. 6. ಅನಂತರದಲ್ಲಿ ಪೂಜ್ಯನಾದ ಸೂರ್ಯನು ವಾಲಖಿಲ್ಯಾದಿ ಬ್ರಾಹ್ಮಣರಿಂದ ರಕ್ಷಿತನಾಗಿ ಜಗತ್ಪಾಲನಾ ಕಾರ್ಯದಲ್ಲಿ ಆಸಕ್ತನಾಗಿ ಪ್ರಯಾಣ ಮಾಡುತ್ತಾನೆ.

ವಾಲಖಿಲ್ಯರು ಯಾರು ಎಂದರೆ,

ವಾಲಖಿಲ್ಯಾಸ್ಸಹಸ್ರಾಣಿ ಷಷ್ಟಿರ್ಬ್ರಹ್ಮರ್ಷಯೋಽಖಿಲಾಃ ।
ಪುರತೋಽಭಿಮುಖಂ ಯಾಂತಿ ಸ್ತುವಂತಿಸ್ತುತಿಭಿರ್ವಿಭುಮ್ ॥

ಎಂತ ವ್ಯಾಸಸ್ಮೃತಿಯಲ್ಲಿ ಹೇಳಿರುತ್ತಾರೆ.

ಇದರ ಅರ್ಥ : ಅರವತ್ತು ಸಹಸ್ರ ವಾಲಖಿಲ್ಯರೆಂಬುವರು ಬ್ರಹ್ಮರ್ಷಿಗಳು. ಇವರು ಸೂರ್ಯನಿಗೆ ಅಭಿಮುಖವಾಗಿ ಸ್ತೋತ್ರಗಳಿಂದ ಸ್ತುತಿಯನ್ನು ಮಾಡುತ್ತಾ ಮುಂಭಾಗದಲ್ಲಿ ಪ್ರಯಾಣ ಮಾಡುತ್ತಿರುತ್ತಾರೆ. ಇವರುಗಳ ಆಕೃತಿ ಅಂಗುಷ್ಟಪರಿಮಾಣವುಳ್ಳದ್ದೆಂದು ಪುರಾಣಗಳಲ್ಲಿ ಉಕ್ತಿ ಉಂಟು. ಕಾಲಕಾಲಕ್ಕೆ ಈ ಋಷಿಗಳು ಅರ್ಘ್ಯವನ್ನು ಕೊಟ್ಟು ಸೂರ್ಯನ ಶತ್ರುಭೂತ ರಾದ ದೈತ್ಯರುಗಳನ್ನು ನಿಗ್ರಹ ಮಾಡುತ್ತಾರೆಂತ ಹೇಳಿದಮೇಲೆ ನಾವುಗಳು ಏತಕ್ಕಾಗಿ ಅರ್ಘ್ಯ ಕೊಡಬೇಕು ಎಂದರೆ ಅದಕ್ಕೆ ಉತ್ತರ ಈ ಕೆಳಗೆ ವಿವರಿಸಲ್ಪಟ್ಟಿರುತ್ತದೆ.

ಒಂದು ಪುಣ್ಯಕ್ಷೇತ್ರದಲ್ಲಿ ಶ್ರೀದೇವರ ರಥೋತ್ಸವವು ನಡೆಯುತ್ತದಷ್ಟೆ. ಅಲ್ಲಿ ರಥವನ್ನು ಎಳೆಯಲು ನಿಯಮಿತರಾದವರು ಇದ್ದೇ ಇರುತ್ತಾರೆ. ಅಲ್ಲದೆ ಪಾರಮಾರ್ಥಿಕ ದೃಷ್ಟಿಯಿಂದ ಎಳೆಯುವವರೂ ಎಷ್ಟೋ ಮಂದಿ ಬಂದಿರುತ್ತಾರೆ. ನಾವು ರಥ ಎಳೆಯಲು ಹೋಗದಿದ್ದರೆ ರಥೋತ್ಸವವು ನಿಲ್ಲುವುದಿಲ್ಲ. ಆದರೂ ಅವರುಗಳ ಜೊತೆಯಲ್ಲಿ ನಾವು ಸಹಕರಿಸಿ ರಥ ಎಳೆಯುವುದರಿಂದ ಹೇಗೆ ಪುಣ್ಯವು ಬರುತ್ತದೋ ಸಹಕರಿಸದೆ ಅನ್ಯವ್ಯಾಪಾರಗಳಲ್ಲಿ ಆಸಕ್ತರಾದರೆ ದೈವದ್ರೋಹವು ಹೇಗೆ ಆಗುತ್ತದೋ ಅದರಂತೆಯೇ ಕಾಲಕಾಲಕ್ಕೆ ವಾಲ ಖಿಲ್ಯರು ಅರ್ಘ್ಯ ಕೊಡುವಾಗ ನಾವೂ ಸೋಮಾರಿಕೆಯನ್ನು ಬಿಟ್ಟು ಅರ್ಘ್ಯ ಕೊಡುವುದರಿಂದ ಪುಣ್ಯಪ್ರಾಪ್ತಿಯೂ, ಕೊಡದಿದ್ದರೆ ಪಾಪಘಟನೆಯೂ ಆಗುವುದರಲ್ಲಿ ಸಂದೇಹವಿಲ್ಲ. ನಮ್ಮ ಕೃತಜ್ಞತೆಯನ್ನು ಸೂರ್ಯಾಂತರ್ಯಾಮಿ ಪರಮಾತ್ಮನಿಗೆ ಸೂಚಿಸತಕ್ಕದ್ದು ಕರ್ತವ್ಯವು. ಶ್ರೀರಾಮದೇವರ ಆಜ್ಞಾ ಪ್ರಕಾರ ಕಪಿಗಳು ಸೇತುವೆಯನ್ನು ನಿರ್ಮಿಸಿದಾಗ ಅತಿ ಅಲ್ಪಪ್ರಾಣಿಯಾದ ಅಳಿಲು ಮರಳು ತಂದು ಸೇವೆ ಮಾಡಿದ್ದಕ್ಕೆ ಪರಮಾತ್ಮನು ಅದಕ್ಕೆ ಹೇಗೆ ಸದ್ಗತಿ ಕೊಟ್ಟನೋ ಹಾಗೆ ನಾವೂ ಕೂಡ ಬ್ರಹ್ಮರ್ಷಿಗಳು ಪರಮಾತ್ಮನ ಆಜ್ಞೆಯಂತೆ ಸೂರ್ಯನ ಸೇವಾ ಮಾಡುವ ಕಾಲಕ್ಕೆ ಜಾಗರೂಕತೆಯಿಂದ

ಸಂಧ್ಯಾರ್ಘ್ಯಪ್ರದಾನ ಮಾಡಿ ಅಲ್ಪ ಸೇವಾ ಸಲ್ಲಿಸಿದರೆ ಶ್ರೀಹರಿಯು ನಮಗೆ ಸದ್ಗತಿ ಕೊಡುವುದರಲ್ಲಿ ಸಂದೇಹವೇ ಇಲ್ಲ.

ಯಜುರ್ವೇದ ಸ್ವಾಧ್ಯಾಯಬ್ರಾಹ್ಮಣದಲ್ಲಿ "ರಕ್ಷಾಂಸಿಹವಾಪುರೋನು ವಾಕೇ ತಪೋಗ್ರಮತಿಷ್ಠಂತ.... ..........ಬ್ರಹ್ಮಾಪ್ಯೇತಿ ಯ ಏವಂ ವೇದ" ಎನ್ನುವ ಮಂತ್ರಗಳೂ ಕೂಡ ಮಂದೇಹದೈತ್ಯರು ಬ್ರಹ್ಮನ ವರಬಲದಿಂದ ಸೂರ್ಯನೊಡನೆ ಯುದ್ಧಕ್ಕೆ ಬರುವರೆಂತಲೂ, ಬ್ರಹ್ಮಜ್ಞಾನಿಗಳಾದ ಋಷಿಗಳು ಕೊಡುವ ಗಾಯತ್ರಿಯಿಂದ ಅಭಿಮಂತ್ರಿತಗಳಾದ ಉದಕಗಳು ವಜ್ರಾಯುಧಕ್ಕೆ ಸದೃಶಗಳಾಗಿ ಆ ದೈತ್ಯರನ್ನು ಕೊಂದು ಮಂದೇಹಾರುಣದ್ವೀಪದಲ್ಲಿ ಹಾಕುತ್ತದೆಯೆಂತಲೂ ಆದ್ದರಿಂದ ಯಾರು ದ್ವಿಸಂಧ್ಯೆಗಳಲ್ಲಿಯೂ ಅರ್ಘ್ಯವನ್ನು ಕೊಟ್ಟು ಸೂರ್ಯನನ್ನು ಉಪಾಸನಾ ಮಾಡುತ್ತಾರೋ ಅವರು ಪರಬ್ರಹ್ಮನನ್ನು ಹೊಂದುತ್ತಾರೆಂತಲೂ ಸ್ಪಷ್ಟವಾಗಿ ನಿರೂಪಣೆ ಮಾಡಿರುವುದರಿಂದ ದ್ವಿಜರು ಯಾರೂ ಕಾಲಕ್ಕೆ ಸಂಧ್ಯಾವಂದನ ಮಾಡುವುದರಲ್ಲಿ ಉದಾಸೀನರಾಗಬಾರದು.

ಸಂಧ್ಯಾರ್ಘ್ಯಪ್ರದಾನದಲ್ಲಿ ಬಂದಿರುವ ಮಂತ್ರಗಳ ಪೈಕಿ ಗಾಯತ್ರೀ ಅರ್ಥವು ಹಿಂದೆ ಪ್ರಾಣಾಯಾಮ ಮಂತ್ರ ಹೇಳಿರುವ ಕಡೆ ವಿವರಿಸಲಾಗಿದೆ. 'ಪ್ರತಿಚಕ್ಷ್ವ....' ಮತ್ತು 'ಯದದ್ಯಕಚ್ಚವೃತ್ರಹನ್....' ಎಂಬ ಮಂತ್ರಗಳ ಅರ್ಥವನ್ನು ಕ್ರಮವಾಗಿ ಕೆಳಗೆ ಕೊಡಲಾಗಿದೆ.

ಪದವಿಭಾಗ: ಪ್ರತಿ, ಚಕ್ಷ್ವ, ವಿ, ಚಕ್ಷ್ವ, ಇಂದ್ರ, ಚ, ಸೋಮ, ಜಾಗೃತಮ್ । ರಕ್ಷೋಭ್ಯಃ, ವಧಂ, ಅಸತ್ಯಂ ಅಶನಿಂ, ಯಾತುಮದ್ಭ್ಯಃ ॥

ಅರ್ಥ: ಹೇ ಸೋಮ-ಎಲೈ ಚಂದ್ರನೇ, ತ್ವಂ-ನೀನು, ಇಂದ್ರಶ್ಚ-ಇಂದ್ರನೂ ಕೂಡ, ರಾಕ್ಷಸಾನ್-ರಾಕ್ಷಸರುಗಳನ್ನು, ಪ್ರತಿಚಕ್ಷ್ವ-ಪ್ರತ್ಯೇಕವಾಗಿ ಅಂದರೆ ಒಬ್ಬೊಬ್ಬರೂ, ಪಶ್ಯ-ನೋಡಿರಿ. ತಥಾ-ಹಾಗೆಯೇ, ವಿಚಕ್ಷ್ವ-ವಿವಿಧ ರೀತಿಯಿಂದ, ಪಶ್ಯ ನೋಡಿರಿ. ಅಂದರೆ ಹ್ಯಾಗೆ ರಾಕ್ಷಸರುಗಳು ನಮ್ಮನ್ನು ಬಾಧೆ ಪಡಿಸಬಾರದೋ ಹಾಗೆ ನೋಡತಕ್ಕವರು ಆಗಿರಿ. ಯುವಾಂಚ ನೀವಿಬ್ಬರೂ. ಸಂಹತೌ-ಒಟ್ಟುಗೂಡಿ, ಜಾಗೃತಂ-ಜಾಗರೂಕರಾದವರು ಅಂದರೆ ರಾಕ್ಷಸರ ವಧೋದ್ಯುಕ್ತರು, ಭವತಂ-ಆಗಿರಿ. ಯಾತು-

ಮದ್ಭ್ಯಃ – ಲೋಕಹಿಂಸಕರಾದ; ರಕ್ಷೋಭ್ಯಃ – ರಾಕ್ಷಸರುಗಳಿಗೋಸ್ಕರ, ಅಶನಿಂ-ವಜ್ರಾಯುಧಕ್ಕೆ ಸದೃಶವಾದ, ವಧಂ-ಆಯುಧವನ್ನು, ಕ್ಷಿಪತಂ-ಹಾಕತಕ್ಕವರು ಆಗಿರಿ.

ಪದವಿಭಾಗ: ಯತ್, ಅದ್ಯ, ಕಿಂಚ, ವೃತ್ರಹನ್, ಉತ್ಽಅಗಾಃ, ಅಭಿ। ಸೂರ್ಯ, ಸರ್ವಂ, ತತ್, ಇಂದ್ರ, ತೇ, ವಶೇ॥

ಅರ್ಥ: ಹೇ ವೃತ್ರಹನ್-ಎಲೈ ವೃತ್ರಾಸುರನನ್ನು ಕೊಂದ, ಸೂರ್ಯ-ಜ್ಞಾನಿಗಮ್ಯನಾದ, ಇಂದ್ರ-ಪರಮೈಶ್ವರ್ಯವುಳ್ಳ ಇಂದ್ರಾಂತರ್ಗತ ಪರಮಾತ್ಮನೇ, ಅದ್ಯ-ಈ ದಿನದಲ್ಲಿ, ಯತ್‌ಕಿಂಚ-ಯತ್ಕಿಂಚಿತ್ ಪದಾರ್ಥಗಳ ಅಂದರೆ ವಸ್ತುಗಳ ಸಮೂಹವನ್ನು ಅಭಿಮುಖೀಕರಣ ಮಾಡಿಕೊಂಡು, ಉದಗಾಃ-ತನ್ನ ತೇಜಸ್ಸಿನಿಂದ ಪ್ರಾದುರ್ಭೂತನಾಗುತ್ತೀಯೋ, ತದಾ-ಆಗ, ತತ್ಸರ್ವಂ-ಸ್ಥಾವರಜಂಗಮಾತ್ಮಕವಾದ ಜಗತ್ತು, ತೇ-ನಿನ್ನ, ವಶೇ-ಅಧೀನವು, ಭವತಿ-ಆಗುತ್ತದೆ. ಸೂರ್ಯೋದಯವಾದಕೂಡಲೇ ನಿನ್ನನ್ನು ಉದ್ದೇಶಿಸಿ ಪ್ರಾತಃಕಾಲೀನಗಳಾದ ಕರ್ಮಗಳನ್ನೂ ಮತ್ತು ಹೋಮಗಳನ್ನೂ ಮಾಡುತ್ತಾರೆಂತ ಅರ್ಥ.

ಈ ಮಂತ್ರದಲ್ಲಿ ಕಾಣುವ ವೃತ್ರಹನ್ ಎಂಬ ಶಬ್ದಕ್ಕೆ ವೃತ್ರಾಸುರನನ್ನು ಕೊಂದವನು ಇಂದ್ರನೆಂದು ಪುರಾಣಪ್ರಸಿದ್ಧಿಯಿರುವಾಗ ಪರಮಾತ್ಮನೆಂದು ಹೇಗೆ ಅರ್ಥ ಮಾಡುತ್ತೀರಿ ಎಂದು ಶಂಕಾ ಬರುತ್ತದೆಯಷ್ಟೆ. ಅದಕ್ಕೆ ಉತ್ತರ ಹೀಗೆ ಹೇಳಬೇಕು: ಏನೆಂದರೆ, ಇಂದ್ರನು ವೃತ್ರಾಸುರನೊಡನೆ ಯುದ್ಧ ಮಾಡಿ ಅವನನ್ನು ಗೆಲ್ಲಲು ಕೈಲಾಗದೇ ದಿಕ್ಕುತೋಚದವನಾಗಿ ಶ್ರೀಹರಿಯನ್ನು ಪ್ರಾರ್ಥಿಸಲು ಆಗ ಆದ ಅಶರೀರವಾಣಿಯಂತೆ ಬ್ರಹ್ಮಜ್ಞಾನಿಗಳಾದ ದಧೀಚಿ ಋಷಿಗಳ ಬೆನ್ನುಮೂಳೆಯನ್ನು ತಂದು ಅದರಿಂದ ವೃತ್ರನನ್ನು ಸಂಹಾರ ಮಾಡಿದನೆಂದು ಇತಿಹಾಸವಿರುತ್ತೆ. ಆ ಮೂಳೆಗೆ ಅಷ್ಟು ಸಾಮರ್ಥ್ಯ ಎಲ್ಲಿಯದು? ಅಂದರೆ ದಧೀಚಿ ಋಷಿಗಳು ನಾರಾಯಣವರ್ಮವನ್ನು ವಿಶೇಷಾಕಾರವಾಗಿ ಜಪಿಸಿ ಸಿದ್ಧಿಪಡೆದವರಾಗಿದ್ದರು. ಅದರ ಪ್ರಭಾವದಿಂದ ಅವರ ಅಸ್ಥಿಗಳೆಲ್ಲಾ ಶ್ರೀಹರಿಯ ಸನ್ನಿಧಾನದಿಂದ ಕೂಡಿದ್ದವು. ಆದ್ದರಿಂದ ಆವರ ಅಸ್ಥಿಗತನಾಗಿದ್ದ ಶ್ರೀಹರಿಯು ಇಂದ್ರನಲ್ಲಿಯೂ ಆವಿಷ್ಟನಾಗಿದ್ದು ವೃತ್ರನನ್ನು

ಕೊಂದವನಾಗಿದ್ದಾನೆ. ಆದ್ದರಿಂದ ಪರಮಾತ್ಮನೇ ವೃತ್ರಹನ್ ಶಬ್ದವಾಚ್ಯನಾಗುತ್ತಾನೆ. ಇಂದ್ರನು ಅಮುಖ್ಯವೃತ್ತಿಯಿಂದ ವಾಚ್ಯನಾಗುತ್ತಾನೆ. ಹೀಗೆಯೇ ಮಂತ್ರಗಳಲ್ಲಿ ಕಂಡುಬರುವ ಸೋಮ, ಸೂರ್ಯ, ವರುಣ, ರುದ್ರ ಮೊದಲಾದ ಶಬ್ದಗಳನ್ನು ಬಲವತ್ತರಗಳಾದ ಲಿಂಗಗಳಿಂದ ಅಂದರೆ ಯುಕ್ತಿಗಳಿಂದ ಶ್ರೀಹರಿಯಲ್ಲಿ ಸಮನ್ವಯ ಮಾಡಿ ಬ್ರಹ್ಮನನ್ನು ಉಪಾಸನೆ ಮಾಡಬೇಕು. ಇನ್ನು 'ಹೃದಯಸ್ಥಾತು........' ಎಂಬ ಶ್ಲೋಕತಾತ್ಪರ್ಯವು ಬರೆಯಲ್ಪಡುತ್ತದೆ. ಹೃದಯದಲ್ಲಿ ಸನ್ನಿಧಾನ ಮಾಡಿರುವ ಗಾಯತ್ರಿಯು ಹೃದಯದಿಂದ ಮುಖಮಾರ್ಗವಾಗಿ ಹೊರಟು ಆದಿತ್ಯನಿಗೆ ಶತ್ರುಗಳಾದ ದೈತ್ಯರನ್ನು ಕೊಂದು ಪುನಃ ನನ್ನ ಹೃದಯವನ್ನು ಪ್ರವೇಶ ಮಾಡಿಕೊಂಡು ಇರಲಿ ಎಂತ ಅಭಿಪ್ರಾಯ. ಅಸಾವಾದಿತ್ಯೋ ಬ್ರಹ್ಮಾ—ಇದರ ಅರ್ಥವೇನೆಂದರೆ, ಅಸೌ-ಈ, ಆದಿತ್ಯಃ-ಸೂರ್ಯಾಂತರ್ಗತನಾದ ಪರಮಾತ್ಮನು, ಬ್ರಹ್ಮ-ಗುಣಪೂರ್ಣನಾದವನು ಎಂತ. ಪೂರ್ವೋಕ್ತ ಪ್ರಮಾಣಗಳಿಂದ ಮೂರಾವರ್ತಿ ಅರ್ಘ್ಯವನ್ನು ಕೊಡಬೇಕೆಂತ ನಿಶ್ಚಿತವಾಯಿತಷ್ಟೆ. ಪ್ರತಿ ಅರ್ಘ್ಯಾನಂತರದಲ್ಲಿ 'ಪ್ರತಿಚಕ್ಷ್ವ....' ಎಂಬ ಮಂತ್ರವನ್ನು ಜಪಿಸಬೇಕೆಂಬ ವಿಧಿಯನ್ನು ಮುಂದೆ ಬರೆದಿರುವ ಪ್ರಮಾಣವು ಸೂಚಿಸುತ್ತದೆ.

ಪ್ರತ್ಯರ್ಘ್ಯಾಂತು ಜಪನ್‌ಸಮ್ಯಕ್ ಪ್ರತಿಚಕ್ಷ್ವೇತಿ ವೈಋುಚಮ್ ।
ಪುನರರ್ಘ್ಯಾಧಿಕಾರಾರ್ಥಂ ಆತ್ಮಸಂರಕ್ಷಣಾಯ ಚ ॥ ಇತಿ ವಚನಾತ್ ಪ್ರತ್ಯರ್ಘ್ಯಂ ಉಕ್ತಮಂತ್ರಜಪೋಽಪಿಬೋಧ್ಯಃ ॥

ಮತ್ತು 'ಅಸ್ಯ ಶ್ರೀ ಶಿರೋಮಂತ್ರಸ್ಯ ಬ್ರಹ್ಮಾ ಋಷಿಃ, ಗಾಯತ್ರೀ ಛಂದಃ, ಸವಿತಾ ದೇವತಾ ಗಾಯತ್ರ್ಯಾಕರ್ಷಣೇ ವಿನಿಯೋಗಃ॥' ಇತ್ಯುಕ್ತ್ವಾ 'ಓಮಾಪೇತಿ....' ಮಂತ್ರಂ ಜಪೇತ್ ॥ ಎಂತ ಸಂಧ್ಯಾಭಾಷ್ಯದಲ್ಲಿ ಹೇಳಿರುವುದರಿಂದ ಮೇಲೆ ಸೂಚಿಸಿರುವ ಪ್ರಕಾರ ಆಕರ್ಷಣಾರ್ಥವಾಗಿ ಮಂತ್ರ ಜಪಿಸಿ ನೀರು ಬಿಡಬೇಕು ಎಂದು ಸಿದ್ಧವಾಯಿತು.

ಅರ್ಘ್ಯ ಕೊಡಬೇಕಾದ ಕಾಲದಲ್ಲಿ ಗಮನದಲ್ಲಿಡಬೇಕಾದ ನಿಯಮಗಳನ್ನು ಹೇಳತಕ್ಕ ಪ್ರಮಾಣವಚನಗಳನ್ನು ಉದಾಹರಿಸಿ ಅವುಗಳ ತಾತ್ಪರ್ಯವನ್ನು ಬರೆಯುತ್ತೇನೆ.

1 ಉತ್ಥಾಯಾರ್ಕಂ ಪ್ರತಿಪ್ರೇಷ್ಯೇತ್ ಗಾಯತ್ರ್ಯಾತ್ರ್ಯಂಜಲೀ ದ್ವಿಜಃ ।
ಆದಿತ್ಯಮಂಡಲಾಂತಸ್ಥಂ ಧ್ಯಾತ್ವಾ ವಿಷ್ಣುಂ ಸನಾತನಮ್ ॥
—ಇತಿ ವಶಿಷ್ಠ।

2 ಗೋಶೃಂಗಮಾತ್ರಮುದ್ಧೃತ್ಯ ರವಿಂ ವೀಕ್ಷ್ಯ ಜಲಾಂಜಲಿಮ್ ।
ದ್ವೌ ಪಾದೌ ಚ ಸಮೌ ಕೃತ್ವಾ ಪಾಣಿಮುದ್ಧೃತ್ಯ ನಿಕ್ಷಿಪೇತ್ ॥
—ಇತಿ ಸಂಗ್ರಹೇ। ನಾರಾಯಣೋಪ್ಯೇವಮಾಹ

3 ದ್ವೌ ಹಸ್ತೌ ಯುಗ್ಮತಃ ಕೃತ್ವಾ ಪೂರಯೇದುದಕಾಂಜಲಿಮ್ ।
ಗೋಶೃಂಗಮಾತ್ರಮುದ್ಧೃತ್ಯ ಜಲಮಧ್ಯೇ ಜಲಂ ಕ್ಷಿಪೇತ್ ॥ ಇತಿ

4 ಜಪ್ತ್ವಾರ್ಘ್ಯಂ ಚ ಪ್ರದಾತವ್ಯಂ ಜಲಾಭಾವೇ ಶುಚಿಸ್ಥಳಮ್ ।
ಸಂಪ್ರೋಕ್ಷ್ಯ ವಾರಿಣಾ ಸಮ್ಯಕ್ ತತೋಽರ್ಘ್ಯಾಣಿ ಪ್ರದಾಪಯೇತ್ ॥
—ಇತಿ ಬ್ರಹ್ಮಾಂಡೇ। ಯಮೋತ್ರವಿಶೇಷಮಾಹ

5 ತ್ರಿಸಂಧ್ಯಾಸು ಚ ಗಾಯತ್ರ್ಯಾ ಪೂರಿತಂಚಾಂಜಲಿತ್ರಯಮ್ ।
ಅಪ್ಸುಕ್ಷಿಪೇದರ್ಕಮುಖೋ ಮಧ್ಯಾಹ್ನೇ ಚೋತ್ತರಾಮುಖಃ ॥ ಇತಿ

6 ಶಂಖ ಆಹ—
ಸೂರ್ಯಾಯೈವ ತು ಗಾಯತ್ರ್ಯಾ ತ್ರಿಸಂಧ್ಯಾತ್ಸ್ವಂಜಲಿಂ ಕ್ಷಿಪೇತ್ ।
ಪ್ರಾತರ್ಮಧ್ಯಾಹ್ನಯೋಸ್ತಿಷ್ಠನ್—ಸಾಯಮಾಸೀನ ಏವ ಚ ॥
ತಿಷ್ಠನ್ನರ್ಘ್ಯತ್ರಯಂ ದದ್ಯಾತ್ ತ್ರಿಷು ಕಾಲೇಷು ಬಹ್ವೃಚಃ ॥
ಇತ್ಯುಕ್ತತ್ವಾತ್ ಬಹ್ವೃಚಃ ತಿಷ್ಠನ್ನೇವ ಅರ್ಘ್ಯತ್ರಯಂ ತ್ರಿಷು ಕಾಲೇಷು ದದ್ಯಾತ್। ಇತಿ

1. ಸೂರ್ಯಮಂಡಲಾಂತರ್ಗತನಾದ ಸನಾತನ ಪುರುಷನಾದ ಜಗತ್-ವ್ಯಾಪ್ತನಾದ ವಿಷ್ಣುವನ್ನು ಧ್ಯಾನ ಮಾಡುತ್ತಾ ಎದ್ದು ನಿಂತು ಸೂರ್ಯನಿಗೆ ಅಭಿಮುಖವಾಗಿ ಗಾಯತ್ರಿಯಿಂದ ಅಭಿಮಂತ್ರಿತವಾದ ಉದಕಾಂಜಲಿಯನ್ನು ಬ್ರಾಹ್ಮಣನು ಹಾಕಬೇಕು.

2. ಎರಡು ಪಾದಗಳನ್ನೂ ಸಮವಾಗಿ ಜೋಡಿಸಿ ನಿಂತುಕೊಂಡು ಗೋಶೃಂಗ ಅಂದರೆ ನಾಸಿಕಾದಿ ಪರ್ಯಂತ ಕೈಯನ್ನು ಎತ್ತಿ ಸೂರ್ಯನನ್ನು ನೋಡಿ ಅರ್ಘ್ಯವನ್ನು ಕೊಡಬೇಕು.

3. ಎರಡು ಹಸ್ತಗಳನ್ನು ಸೇರಿಸಿ ಅಂಜಲಿಯಲ್ಲಿ ನೀರು ತೆಗೆದುಕೊಂಡು ಗೋಶೃಂಗಪರ್ಯಂತ ಎತ್ತಿ ನೀರಿನ ಮಧ್ಯದಲ್ಲಿ ನೀರನ್ನು ಹಾಕಬೇಕು.

4. ಗಾಯತ್ರಿಯನ್ನು ಜಪಿಸಿ ಅರ್ಘ್ಯವನ್ನು ನೀರಿನಲ್ಲಿ ಕೊಡಬೇಕು. ನೀರಿಲ್ಲದಿದ್ದರೆ ಶುಚಿಯಾದ ನೆಲವನ್ನು ನೀರಿನಿಂದ ಪ್ರೋಕ್ಷಿಸಿ ಅಭಿಮಂತ್ರಿತವಾದ ಉದಕಾಂಜಲಿಯನ್ನು ಕೆಳಗೆ ಹಾಕಬೇಕು. ಯಮದೇವರು ವಿಶೇಷ ನಿಯಮವನ್ನು ಹೇಳುತ್ತಾರೆ.

5. ಮೂರು ಸಂಧ್ಯೆಗಳಲ್ಲಿಯೂ ಗಾಯತ್ರಿಯಿಂದ ಪೂರಿತವಾದ ಉದಕಾಂಜಲಿಯನ್ನು ಸೂರ್ಯಾಭಿಮುಖನಾಗಿದ್ದುಕೊಂಡು ನೀರಿನಲ್ಲಿ ಹಾಕಬೇಕು. ಅಂದರೆ ಪ್ರಾತಃ ಸಾಯಂ ಸಂಧ್ಯಾಗಳಲ್ಲಿ ಸೂರ್ಯನಿಗೆ ಅಭಿಮುಖವಾಗಿ ಅರ್ಘ್ಯ ಕೊಡಬೇಕು. ಮಧ್ಯಾಹ್ನದಲ್ಲಿ ಉತ್ತರಾಭಿಮುಖವಾಗಿ ಅರ್ಘ್ಯ ಕೊಡಬೇಕು.

6. ಸೂರ್ಯನಿಗೋಸ್ಕರವೇ ಮೂರು ಕಾಲದಲ್ಲಿಯೂ ಅರ್ಘ್ಯವನ್ನು ಕೊಡಬೇಕು. ಪ್ರಾತಃ ಮಧ್ಯಾಹ್ನಕಾಲಗಳಲ್ಲಿ ನಿಂತುಕೊಂಡು ಸಾಯಂಕಾಲದಲ್ಲಿ ಕೂತುಕೊಂಡು ಅರ್ಘ್ಯ ಕೊಡಬೇಕು. ಇದು ಯಜುರ್ವೇದಿಗಳಿಗೆ ನಿಯಮ. ಋಗ್ವೇದಿಗಳಾದರೋ ಮೂರು ಸಂಧ್ಯೆಗಳಲ್ಲಿಯೂ ನಿಂತುಕೊಂಡೇ ಅರ್ಘ್ಯವನ್ನು ಕೊಡಬೇಕು ಎಂತ ತಾತ್ಪರ್ಯ.

ಕೆಲವು ಸಂಪ್ರದಾಯಸ್ಥರು ಕಾಲಾತೀತ ಪ್ರಾಯಶ್ಚಿತ್ತಾರ್ಘ್ಯವನ್ನು ವ್ಯಾಹೃತಿ ಮತ್ತು ಶಿರೋಮಂತ್ರದಿಂದ ಸಂಪುಟಿತವಾದ ಗಾಯತ್ರೀಮಂತ್ರದಿಂದ ಕೊಡುತ್ತಾರೆ. ಅದಕ್ಕೆ ಸಂಧ್ಯಾ ಭಾಷ್ಯದಲ್ಲಿ ಹೀಗೆ ಪ್ರಮಾಣವಿರುತ್ತೆ.—

ಚತುರ್ಥಾರ್ಘ್ಯಂ ತು ಗಾಯತ್ರ್ಯಾ ಶಿರೋವ್ಯಾಹೃತಿಸಂಪುಟಮ್ ।
ಕಾಲಾತೀತವಿಶುದ್ಧ್ಯರ್ಥಂ ತ್ರಿಸಂಧ್ಯಾಂತು ಸಮಾಚರೇತ್ ॥

ಮೂರು ಸಂಧ್ಯೆಗಳಲ್ಲಿಯೂ ಕಾಲಾತೀತಪ್ರಾಯಶ್ಚಿತ್ತಕ್ಕೋಸ್ಕರ ಶಿರೋಮಂತ್ರ ಮತ್ತು ವ್ಯಾಹೃತಿಯಿಂದ ಸಂಪುಟಿತವಾದ ಗಾಯತ್ರಿಯಿಂದ ನಾಲ್ಕನೆ ಅರ್ಘ್ಯವನ್ನು ಕೊಡಬೇಕು.

"ಓಂ ಭೂರ್ಭುವಸ್ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋಜ್ಯೋತಿ-

ರಸೋऽಮೃತಂಬ್ರಹ್ಮ ಭೂರ್ಭುವಸ್ಸ್ವರೋಮ್ ॥" ಎಂದು ನಾಲ್ಕನೇ ಅರ್ಘ್ಯವನ್ನು ಕೊಡಬೇಕು. (ಮೂಲದಲ್ಲಿ ಅಲ್ಪಾಕ್ಷರವಾದ್ದರಿಂದ ಮೊದಲು ಶಿರೋ ಎಂದು ಹೇಳಿರುತ್ತಾರೆ. ನಾವು ವ್ಯಾಹೃತಿ ಶಿರಸ್ಸು ಎಂತ ಅನ್ವಯ ಮಾಡಿಕೊಳ್ಳಬೇಕು.) ಅರ್ಘ್ಯ ಕೊಟ್ಟಮೇಲೆ ಆತ್ಮಪ್ರದಕ್ಷಿಣಾನಂತರದಲ್ಲಿ 'ಮಂತ್ರತಃ ಪರಿವೃತ್ಯಾಥಸನಾಚಮ್ಯಸುರಾದಿಕಾನ್' ಎಂಬ ಸದಾಚಾರ ಸ್ಮೃತಿಯಲ್ಲಿ ಹೇಳಿದಂತೆ ಕೇಶವಾದಿ ದಾಮೋದರಪರ್ಯಂತ ಶುಕ್ಲಪಕ್ಷದಲ್ಲಿಯೂ, ಸಂಕರ್ಷಣಾದಿ ಶ್ರೀಕೃಷ್ಣಪರ್ಯಂತವಾಗಿ ಕೃಷ್ಣಪಕ್ಷದಲ್ಲಿಯೂ, ನವಗ್ರಹಗಳಿಗೂ ತರ್ಪಣವನ್ನು ಕೊಡಬೇಕು. ಏಕಾದಶೀ, ಶ್ರವಣದ್ವಾದಶೀ, ಅತಿರಿಕ್ತದ್ವಾದಶೀ, ಗೋಕುಲಾಷ್ಟಮೀ ಮತ್ತು ಹರಿವಾಸರಗಳಲ್ಲಿ ನವಗ್ರಹಗಳಿಗೆ ತರ್ಪಣ ಕೊಡಬಾರದು. ಕೇಶವಾದಿ ಭಗವದ್ರೂಪಗಳಿಗೆ ಮಾತ್ರ ಯಾವಾಗಲೂ ತ್ರಿಸಂಧ್ಯೆಗಳಲ್ಲಿಯೂ ತರ್ಪಣ ಕೊಡಬೇಕು.

ಇದಕ್ಕೆ ಪ್ರಮಾಣ :— ಪಿತಾಮಹೇ ಕೂರ್ಮೇಚ ॥

ಪಾಣಿನಾ ಜಲಮಾದಾಯ ಸ್ರವತ್ಕುರ್ಯಾತ್ ಪ್ರದಕ್ಷಿಣಮ್ ।
ಆದಿತ್ಯಾದಿಗ್ರಹಾಂಸ್ತತ್ರ ತರ್ಪಯೇತ್ಸುಸಮಾಹಿತಃ ॥ ಇತಿ
ಪರಿಷೇಕಂ ತತಃ ಕುರ್ಯಾತ್ ಪ್ರಾದಕ್ಷಿಣ್ಯಂ ಸಮಾಚರೇತ್ ।
ಸಂತರ್ಪ್ಯ ಕೇಶವಾದೀಂಸ್ತಾ—ನಾಚಮಂತು ಸಮಾಚರೇತ್ ॥
ಗ್ರಹಾನ್ ವಾರಾದಿದೇವಾಂಶ್ಚೇತಿ ।

ಹಸ್ತದಲ್ಲಿ ಉದಕ ಸ್ವೀಕಾರ ಮಾಡಿ ಪ್ರದಕ್ಷಿಣಾಕಾರವಾಗಿ ನೀರನ್ನು ಸ್ರವಿಸಬೇಕು. ಸುತ್ತಲೂ ಪರಿಷೇಚನ ಮಾಡಿ ಏಕಾಗ್ರಚಿತ್ತದಿಂದ ಕೇಶವಾದಿ ರೂಪಗಳಿಗೂ ನವಗ್ರಹಗಳಿಗೂ, ವಾರಾಧಿಪತಿಗಳಿಗೂ ತರ್ಪಣ ಕೊಡಬೇಕು.

ಶುಕ್ಲಪಕ್ಷದಲ್ಲಿ :— ಕೇಶವಂ ತರ್ಪಯಾಮಿ, ನಾರಾಯಣಂ...., ಮಾಧವಂ...., ಗೋವಿಂದಂ...., ವಿಷ್ಣುಂ...., ಮಧುಸೂದನಂ...., ತ್ರಿವಿಕ್ರಮಂ...., ವಾಮನಂ...., ಶ್ರೀಧರಂ ..., ಹೃಷೀಕೇಶಂ...., ಪದ್ಮನಾಭಂ ...., ದಾಮೋದರಂ...., ಆದಿತ್ಯಂ...., ಸೋಮಂ...., ಮಂಗಳಂ...., ಬುಧಂ...., ಗುರುಂ...., ಶುಕ್ರಂ..., ಶನಿಂ...., ರಾಹುಂ...., ಕೇತುಂ ತರ್ಪಯಾಮಿ ಎಂದು ತರ್ಪಣ ಕೊಡಬೇಕು.

ಕೃಷ್ಣಪಕ್ಷದಲ್ಲಿ :— ಸಂಕರ್ಷಣಂ ತರ್ಪಯಾಮಿ, ವಾಸುದೇವಂ ...., ಪ್ರದ್ಯುಮ್ನಂ ...., ಅನಿರುದ್ಧಂ ...., ಪುರುಷೋತ್ತಮಂ ...., ಅಧೋಕ್ಷಜಂ ...., ನಾರಸಿಂಹಂ ...., ಅಚ್ಯುತಂ...., ಜನಾರ್ದನಂ ...., ಉಪೇಂದ್ರಂ ...., ಹರಿಂ ...., ಶ್ರೀಕೃಷ್ಣಂ ತರ್ಪಯಾಮಿ ॥ ಪುನಃ ಆದಿತ್ಯಂ ತರ್ಪಯಾಮಿ, .... .... ಕೇತುಂ ತರ್ಪಯಾಮಿ ಎಂದು ತರ್ಪಣ ಕೊಡಬೇಕು. ಇದು ಋಗ್ವೇದಕ್ರಮ.

ಇನ್ನು ಯಜುರ್ವೇದ ಸಂಧ್ಯಾವಂದನೆಯು ಆರಂಭದಿಂದ ಹಿಡಿದು ಅರ್ಘ್ಯಪ್ರದಾನದವರೆಗೆ ಇರುವ ಸ್ವಲ್ಪ ವ್ಯತ್ಯಾಸಗಳನ್ನು ಬರೆದು ನಂತರ ಅರ್ಥ ಬರೆಯಲ್ಪಡುತ್ತದೆ.

ಆಚಮನ ಕ್ರಮದಲ್ಲಿ ಋಗ್ವೇದದಂತೆಯೇ ಯಜುರ್ವೇದದಲ್ಲಿಯೂ ಮಾಡತಕ್ಕದ್ದು. ಪ್ರಾಣಾಯಾಮಕ್ರಮದಲ್ಲಿ ಋಗ್ವೇದಕ್ಕೂ ಯಜುರ್ವೇದಕ್ಕೂ ಏನೂ ಭೇದವಿಲ್ಲ. ಆದರೆ ಮಂತ್ರದಲ್ಲಿ "ಓಂ ಭೂ .... ಓಂ ಸ್ವಃ" ಎನ್ನುವುದಕ್ಕೆ ಬದಲು "ಓಂ ಗುಂ (ಳ್ಂ) ಸುವಃ" ಎಂತ ಹೇಳಬೇಕು. "....ಓಂ ಗುಂ (ಳ್ಂ) ಸತ್ಯಂ ತತ್ಸವಿತುರ್ವರೇಣ್ಯಂ .... ಭೂರ್ಭುವಸ್ಸ್ವರೋಂ" ಎಂದು ಜಪಿಸಬೇಕು. ಸಂಕಲ್ಪದಲ್ಲಿ ವ್ಯತ್ಯಾಸವಿಲ್ಲ. ಋಗ್ವೇದದಂತೆ ಹೇಳಬೇಕು. "ಆಪೋ ಹಿ ಷ್ಠಾ ... ಜನ ಯಥಾ ಚ ನಃ" ಎಂತ ಮಾರ್ಜನ ಮಾಡಿ ಕೈಯಲ್ಲಿ ನೀರನ್ನು ಹಾಕಿಕೊಂಡು "ಸೂರ್ಯಶ್ಚ ಮಾಮನ್ಯುಶ್ಚ.... ಸೂರ್ಯೇಜ್ಯೋತಿಷಿ ಜುಹೋಮಿ ಸ್ವಾಹಾ" ಎಂತ ಹೇಳಿ ನೀರನ್ನು ಕುಡಿದು ಆಚಮನ ಮಾಡಬೇಕು. ಇಲ್ಲಿ ಒಂದು ವಿಷಯ ಗಮನಿಸಬೇಕು. ಯಜುರ್ವೇದದಲ್ಲಿ ದೇವತಾ, ಋಷಿ, ಛಂದಸ್ಸು, ವಿನಿಯೋಗ ಇವುಗಳನ್ನು ಹೇಳಿ ಮಂತ್ರ ಹೇಳಬೇಕಾಗಿಲ್ಲ. ಯಾಕೆಂದರೆ ಯಜುರ್ವೇದವು ನಿಗದ (ವಾಕ್ಯ)-ರೂಪವಾದ್ದರಿಂದಲೂ ವರ್ಣನಿಯಮದಿಂದ ವಿಚ್ಛೇದ ಇಲ್ಲದಿರುವುದರಿಂದಲೂ ಛಂದಸ್ಸು ಇಲ್ಲ. ಕೆಲವು ಕಡೆಗಳಲ್ಲಿ ಮಾತ್ರ ನಿಯತಾಕ್ಷರಗಳಿಂದ ವಿಚ್ಛೇದವುಂಟು. ಹಾಗೆಯೇ ಉಚ್ಚರಿಸಲ್ಪಡುತ್ತದೆ. ಋಷಿದೇವತೆಗಳು ಮಾತ್ರ ಸ್ಮರಿಸಲ್ಪಡಬೇಕು. ಮುಖ್ಯವಾಗಿ ಸಕಲ ಯಜುರ್ವೇದಕ್ಕೂ ಹಯಗ್ರೀವದೇವರೇ ಋಷಿಯು. ನಾರಾಯಣದೇವರೇ ಪ್ರತಿಪಾದ್ಯದೇವತೆಯು ಎಂದು

ತಿಳಿದು ಮಂತ್ರಗಳನ್ನು ಹೇಳಿದರೆ ಸಾಕು. ಋಗ್ವೇದದಂತೆ ಪ್ರತ್ಯೇಕ ಋಷಿ, ದೇವತಾ, ಛಂದಸ್ಸು ಹೇಳಬೇಕಾಗಿಲ್ಲ. ಸಂಪ್ರದಾಯವೂ ಹಾಗೇ ಇರುತ್ತದೆ. ಆದ್ದರಿಂದ ಋಷಿ, ದೇವತಾಗಳನ್ನು ಹೇಳಲಿಲ್ಲ. ನಂತರ ಪುನರ್ಮಾರ್ಜನ ಮಾಡುವಾಗ ಆರಂಭದಲ್ಲಿ

1) ಹರಿಃ ಓಮ್ ।

ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।
ಸುರಭಿನೋ ಮುಖಾಕರ—ತ್ಪ್ರಣಆಯೂಂಷಿತಾರಿಷತ್ ॥

ಎಂಬ ಮಂತ್ರ ಹೇಳಿ ನಂತರ "ಆಪೋ ಹಿ ಷ್ಠಾ....ಚ ನಃ" ಎಂಬ ಮೂರು ಮಂತ್ರಗಳಿಂದ ಮಾರ್ಜನ ಮಾಡಿಕೊಂಡು ಹಾಗೆಯೇ ಮುಂದೆ ಹೇಳಿರುವ ಮಂತ್ರಗಳಿಂದ ಮಾರ್ಜನ ಮಾಡಿಕೊಳ್ಳಬೇಕು.

2) ಹರಿಃ ಓಮ್ । ಹಿರಣ್ಯವರ್ಣಾಃ ಶುಚಯಃ ಪಾವಕಾಃ । ಯಾಸುಜಾತಃ ಕಶ್ಯಪೋ ಯಾಸ್ವಿಂದ್ರಃ । ಅಗ್ನಿಂಯಾಗರ್ಭಂ ದಧಿರೇ ವಿರೂಪಾ—ಸ್ತಾನ ಆಪಃ ಶಂ ಸ್ಯೋನಾ ಭವಂತು ॥

3) ಯಾಸಾಂ ರಾಜಾ ವರುಣೋ ಯಾತಿಮಧ್ಯೇ ಸತ್ಯಾನೃತೇ ಅವಪಶ್ಯಂ ಜನಾನಾಮ್ । ಮಧುಶ್ಚುತಃ ಶುಚಯೋ ಯಾಃ ಪಾವಕಾಃ ತಾನ ಆಪಃಶಂ ಸ್ಯೋನಾ ಭವಂತು ॥

4) ಯಾಸಾಂ ದೇವಾ ದಿವಿ ಕೃಣ್ವಂತಿ ಭಕ್ಷಂ ಯಾ ಅಂತರಿಕ್ಷೇ ಬಹುಧಾ ಭವಂತಿ । ಯಾಃ ಪೃಥಿವೀಂ ಪಯಸೋದಂತಿ ಶುಕ್ರಾಃ ತಾನ ಆಪಃ ಶಂ ಸ್ಯೋನಾ ಭವಂತು ॥

ಎಂತ ಪ್ರೋಕ್ಷಣ ಮಾಡಿಕೊಳ್ಳಬೇಕು. ನಂತರ ಹಸ್ತದಲ್ಲಿ ಉದಕವನ್ನು ಹಾಕಿಕೊಂಡು ಮುಂದಿನ ಮಂತ್ರ ಜಪಿಸಬೇಕು.

5) ಶಿವೇನ ಮಾ ಚಕ್ಷುಷಾ ಪಶ್ಯತಾಪ ಶಿವಯಾ ತನುವೋಪ-ಸ್ಪೃಶತತ್ವಚಂಮೇ ಸರ್ವಾಂ ಅಗ್ನಿಂ ಅಪ್ಸುಷದೋಹುವೇವೋ ಮಯಿವರ್ಚೋ ಬಲಮೋಜೋ ನಿಧತ್ತ ॥

ಹರಿಃ ಓಮ್ ॥ ದ್ರುಪದಾದಿವಮುಂಚತು ॥ ದ್ರುಪದಾದಿವೇನ್-ಮುಮುಚಾನಃ ॥ ಸ್ವಿನ್ನಸ್ನಾತ್ವೀಮಲಾದಿವ ॥ ಪೂತಂ ಪವಿತ್ರೇಣೈ-ವಾಜ್ಯಮ್ ॥ ಆಪಃ ಶುಂಧಂತು ಮೈನಸಃ ॥

ಎಂತ ನೀರನ್ನು ಆಘ್ರಾಣಿಸಿ ಎಡಮೂಗಿನ ದೆಸೆಯಿಂದ ಉಸಿರುಬಿಟ್ಟು ತನ್ನ ಎಡಕ್ಕೆ ಭೂಮಿಯಮೇಲೆ ಹಾಕಬೇಕು.

1) ದಧಿಕ್ರಾವ್ಣಃ, ಅಕಾರಿಷಂ, ಜಿಷ್ಣೋಃ, ಅಶ್ವಸ್ಯ, ವಾಜಿನಃ, ಸುರಭಿ, ನಃ, ಮುಖಾ, ಕರತ್, ಣಃ, ಆಯೂಂಷಿ, ಪ್ರತಾರಿಷತ್—ಇತಿ ಪದಚ್ಛೇದಃ.

ಅರ್ಥ : ಜಿಷ್ಣೋಃ-ಜಯಶೀಲನಾದ, ಅಶ್ವಸ್ಯ-ಶೀಘ್ರವಾಗಿ ಗಮನ ಮಾಡತಕ್ಕ ಅಥವಾ ಭಕ್ತರಿಗೆ ಶೀಘ್ರವಾಗಿ ಜ್ಞಾನವನ್ನುಂಟುಮಾಡತಕ್ಕ, ವಾಜಿನಃ-ಸರ್ವಭಕ್ಷಕನಾದ, ದಧಿಕ್ರಾವ್ಣಃ-ದಧೀನಿ ಅಂದರೆ ಧಾರಣಸಾಮರ್ಥ್ಯ ವನ್ನುಂಟುಮಾಡತಕ್ಕ ಹವಿಸ್ಸುಗಳನ್ನು, ಕ್ರಾವ್ಣಃ-ಕ್ರಮಣ ಮಾಡತಕ್ಕ ಅಂದರೆ ಹೊಂದತಕ್ಕ ಅಗ್ನ್ಯಂತರ್ಗತ ಪರಮಾತ್ಮನಿಗೆ, ಸ್ತುತಿರೂಪವಾದ ಸೇವಾವನ್ನು, ಅಕಾರಿಷಂ-ಮಾಡುತ್ತೇನೆ. ಆದ್ದರಿಂದ ನಃ-ನಮ್ಮಗಳ, ಮುಖಾ (ಮುಖಾನಿ ಎಂತ ಛಾಂದಸಪ್ರಯೋಗಃ)-ವದನಗಳನ್ನು, ಸುರಭಿ-ಸುವಾಸನೆಯುಕ್ತವಾದದ್ದನ್ನಾಗಿ, ಎಂದರೆ ಪುಣ್ಯಸಾಧನೀಭೂತವೇದೋಚ್ಚಾರಣಸಾಮರ್ಥ್ಯವುಳ್ಳದ್ದನ್ನಾಗಿ, ಕರತ್-ಮಾಡತಕ್ಕವನಾಗಲಿ. ಅದಕ್ಕೋಸ್ಕರವಾಗಿಯೇ ಅಂದರೆ ಶ್ರೀಹರಿಯನ್ನು ಸ್ತೋತ್ರಮಾಡುವುದಕ್ಕಾಗಿಯೇ, ಣಃ (ನಃ)-ನಮ್ಮಗಳ, ಆಯೂಂಷಿ ಆಯುಸ್ಸುಗಳು, ಪ್ರತಾರಿಷತ್-ಅಭಿವೃದ್ಧವಾಗಲಿ, ದೇವರ ಸೇವಾಕ್ಕಾಗಿ ದೇಹ ಕೊಟ್ಟಿರುವುದರಿಂದ ಪರಮಾತ್ಮನ ಸೇವಾ ಮಾಡಲಿಕ್ಕೆ ಆಯುಸ್ಸು ಹೆಚ್ಚಲಿ ಎಂತ ತಾತ್ಪರ್ಯವು. 'ಆಪೋ ಹಿ ಷ್ಠಾ ....ಚ ನಃ" ಎಂಬುವ ಮೂರು ಋಕ್ಕಿನ ಅರ್ಥ ಪೂರ್ವದಲ್ಲಿ ಬರೆದಿರುತ್ತದೆ.

2) ಹಿರಣ್ಯವರ್ಣಾಃ, ಶುಚಯಃ, ಪಾವಕಾಃ, ಯಾಸು, ಜಾತಾಃ, ಕಶ್ಯಪಃ, ಯಾಸು, ಇಂದ್ರಃ, ಅಗ್ನಿಂ, ಯಾ ಗರ್ಭಂ, ದಧಿರೇ, ವಿರೂಪಾಃ, ತಾಃ, ನಃ, ಆಪಃ ಶಮ್, ಸ್ಯೋನಾಃ, ಭವಂತು—ಇತಿ ಪದವಿಭಾಗಃ

ಅರ್ಥ : ಹಿರಣ್ಯವರ್ಣಾಃ-ಭಂಗಾರದಂತೆ ವರ್ಣವುಳ್ಳ, ಅಥವಾ ಸುಖದಾಯಕವಾದ ಸ್ವರೂಪವುಳ್ಳ, ಶುಚಯಃ-ಸ್ವಯಂ ಶುದ್ಧವಾದ, ಇತರ ವಸ್ತುಗಳನ್ನೂ ಮತ್ತು ಪುರುಷರನ್ನೂ, ಪಾವಕಾಃ-ಪವಿತ್ರ ಮಾಡತಕ್ಕ, ಯಾಃ-ಯಾವ, ಆಪಃ-ಉದಕಗಳೋ, ಯಾಸು-ಯಾವ ಉದಕದಲ್ಲಿ, ಕಶ್ಯಪಃ-ಕೇ ಉದಕೇಶೇತ ಇತಿ ಕಶೀ; ಅಂ-ಚತುರ್ಮುಖಂ ಪಾತೀತಿ ಅಪಃ

ಕಶೀಚಾಸೌ ಅಪಶ್ಚೇತಿ ಕಶ್ಯಪಃ ಎಂಬ ವಿಗ್ರಹದಂತೆ ಅಂದರೆ ಉದಕದಲ್ಲಿ ಮಲಗಿರತಕ್ಕವನಾದ್ದರಿಂದ ಕಶೀ ಎಂತಲೂ, ಚತುರ್ಮುಖನನ್ನು ಪಾಲನ ಮಾಡತಕ್ಕವನಾದ್ದರಿಂದ ಅಪಃ ಎಂತಲೂ ಪರಮಾತ್ಮನಿಗೆ ಹೆಸರು. ಆದ್ದರಿಂದ ಕಶೀ + ಅಪಃ = ಕಶ್ಯಪಃ ಎಂತ ಪದವನ್ನು ಕರ್ಮಧಾರಯ ಮಾಡಬೇಕು. ಹೀಗೆ ಮಾಡಿದರೆ ಪ್ರಳಯೋದಕದಲ್ಲಿ ಚತುರ್ಮುಖನ ಪಾಲನಾರ್ಥವಾಗಿ ಶ್ರೀಹರಿಯು ಮತ್ಸ್ಯಾವತಾರ ಮಾಡಿದನೋ, ಮತ್ತು ಇದಂ ರಾತೀತಿ ಇಂದ್ರಃ—ಅಂದರೆ ವರಾಹರೂಪಿಯಾದ ಪರಮಾತ್ಮನು, ಯಾಸು-ಯಾವ ಉದಕದಲ್ಲಿ, ಜಾತಾಃ-ಅವತರಿಸಿವನೋ, ಅಂದರೆ ಪ್ರಳಯೋದಕದಲ್ಲಿ ಇದ್ದು ಸೃಷ್ಟಿಯು ಆದಿಕಾಲದಲ್ಲಿ ಚತುರ್ಮುಖನನ್ನು ಉದ್ದೇಶಿಸಿ ವೇದವನ್ನೂ ಹಾಗೂ ಇದಂ–ಭೂಮಿ ಎಂಬ ವಸ್ತುವನ್ನು ತಂದು ಆತನಿಗೆ ಕೊಟ್ಟಂಥ ಮತ್ಸ್ಯ ಮತ್ತು ವರಾಹ ಅವತಾರಗಳು ಯಾವ ಉದಕದಲ್ಲಿ ಆದವೋ ಎಂತ ಅಭಿಪ್ರಾಯ. ಇಷ್ಟೇ ಅಲ್ಲ, ಇನ್ನೂ ಕೂರ್ಮಾದಿ ಅವತಾರಗಳೂ ಉದಕದಲ್ಲಿ ಆಗಿವೆಯೋ, ಮತ್ತು ವಿರೂಪಾಃ–ವಿಶಿಷ್ಟರೂಪವುಳ್ಳ, ಯಾಃ–ಸಮುದ್ರೋದಕಗಳು, ಗರ್ಭಂ-ತಮ್ಮ ಗರ್ಭದಲ್ಲಿ ಅಂದರೆ ಒಳಗೆ, ಅಗ್ನಿಂ-'ಯೋ ಬಡ ವಾಗ್ನಿರ್ನರಸಿಂಹರೂಪಃ, ಅಬ್ಧಾವಿತಿ ಕರ್ಮನಿರ್ಣಯಭಾಷ್ಯೇ' ಎಂಬ ಪ್ರಮಾಣಾನುಸಾರ, ಸಮುದ್ರಜಲವನ್ನು ಈಗ ಹೆಚ್ಚಾಗದ ಹಾಗೆ ಮತ್ತು ಪ್ರಳಯದಲ್ಲಿ ಸಂಪೂರ್ಣ ಶೋಷಿಸುವ ಹಾಗೆ ಮಾಡತಕ್ಕ ನರಸಿಂಹರೂಪವಾದ ಬಡವಾನಾಮಕವಾದ ಅಗ್ನಿಯನ್ನು, ದಧಿರೇ–ಧಾರಣ ಮಾಡಿರುತ್ತವೆಯೋ, ತಾಃ ಆಪಃ–ಅಂಥಾ ಉದಕಗಳು, ತದಭಿಮಾನಿ ದೇವತೆಗಳೂ, ತನ್ನಿಯಾಮಕ ಭಗವದ್ರೂಪಗಳು, ನಃ-ನಮ್ಮಗಳಿಗೆ, ಶಂ-ವೈಷಯಿಕ ಸುಖಗಳನ್ನೂ ಮತ್ತು ಅಲೌಕಿಕ ಸುಖಗಳನ್ನೂ ಕೊಡುವುದಕ್ಕೆ, ಸ್ಯೋನಾಃ–ಕಾರಣಗಳು, ಭವಂತು –ಆಗಲಿ, ಅಂದರೆ ಇಹಪರ ಸೌಖ್ಯಗಳನ್ನುಂಟುಮಾಡತಕ್ಕವರಾಗಲಿ.

(ಈ ಮಂತ್ರದಲ್ಲಿ ಕಂಡುಬರುವ ಕಶ್ಯಪ, ಮತ್ತು ಇಂದ್ರ ಎಂಬ ಎರಡು ಶಬ್ದಗಳಿಗೆ ಅನ್ಯಮತೀಯರೂ ಮತ್ತು ಭಾಷ್ಯಾದಿಗಳನ್ನು ಸರಿಯಾಗಿ ನೋಡದೇ ಇರುವವರೂ ಆಪಾತತಃ ತೋರುವ ಕಶ್ಯಪಋಷಿಗಳು ಮತ್ತು ಶಚೀಪತಿ ಇಂದ್ರ ಎಂತ ಅರ್ಥ ಬರೆದಿರುತ್ತಾರೆ. ಉದಕದಲ್ಲಿ ಕಶ್ಯಪರಾಗಲೀ ಇಂದ್ರನಾಗಲೀ ಅವತಾರ ಮಾಡಿರುವರೆಂಬುವುದಕ್ಕೆ ಯಾವ ಪುರಾಣಗಳಲ್ಲಿಯೂ ಪ್ರಮಾಣಗಳು ಸ್ಪಷ್ಟವಾಗಿ ಕಂಡುಬಂದಿಲ್ಲವಾದ್ದರಿಂದ ಆ ಅರ್ಥ ತಪ್ಪು. ಹಾಗೆ ಕಿಯಕೂಡದೆಂದು ಸಂಧ್ಯಾಭಾಷ್ಯಕಾರರೇ ಬರೆದಿರುತ್ತಾರೆ.)

3) ಯಾಸಾಂ, ರಾಜಾ, ವರುಣೋ, ಯಾತಿ, ಮಧ್ಯೇ, ಸತ್ಯಾನೃತೇ, ಅವಪಶ್ಯನ್, ಜನಾನಾಂ, ಮಧುಶ್ಚುತಃ, ಶುಚಯಃ, ಯಾಃ, ಪಾವಕಾಃ, ತಾಃ, ನಃ, ಆಪಃ, ಶಂ, ಸ್ಯೋನಾಃ, ಭವಂತು— ಇತಿ ಪದವಿಭಾಗಃ.

**ಅರ್ಥ :** ಯಾಸಾಂ-ಯಾವ ಉದಕಗಳಿಗೆ, ರಾಜಾ-ಒಡೆಯನಾದ, ವರುಣಃ-ವರುಣಾಂತರ್ಗತ ವಾಸುದೇವನು, ಯಾಸಾಂ-ಯಾವ ದೇವತೆಗಳ, ಮಧ್ಯೇ-ವಳಗೂ, ಜನಾನಾಂ ಮಧ್ಯೇ-ಜನಗಳ ಮಧ್ಯದಲ್ಲಿಯೂ, ಸತ್ಯಾನೃತೇ ಪುಣ್ಯಪಾಪಗಳನ್ನು, ಅವಪಶ್ಯನ್-ನೋಡತಕ್ಕವನಾಗಿ, ಯಾತಿ-ಇರುತ್ತಾನೆಯೋ, ಮತ್ತು ಮಧುಶ್ಚುತಃ-ಸುಖವನ್ನು ಸೇಚನ ಮಾಡುತ್ತಾನೆಯೋ, ಯಾಃ-ಯಾವುವು, ಶುಚಯಃ-ಸದಾ ಪವಿತ್ರಗಳಾಗಿರುತ್ತವೆಯೋ, ಪಾವಕಾಃ-ಪಾವನಕರ್ತೃಗಳೋ, ತಾಃ ಆಪಃ-ಅಂಥ ಉದಕಗಳು ನಃ-ನಮ್ಮಗಳಿಗೆ, ಶಂ-ಸುಖವನ್ನು, ಸ್ಯೋನಾಃ-ಉಂಟುಮಾಡತಕ್ಕವುಗಳು, ಭವಂತು-ಆಗಲಿ.

4) ಯಾಸಾಂ, ದೇವಾ, ದಿವಿ, ಕೃಣ್ವಂತಿ, ಭಕ್ಷಂ, ಯಾ, ಅಂತರಿಕ್ಷೇ, ಬಹುಧಾ, ಭವಂತಿ, ಯಾಃ ಪೃಥಿವೀಂ, ಪಯಸಾ, ಉದಂತಿ ಶುಕ್ರಾಃ.

ಉಳಿದದ್ದು ಹಿಂದಿನ ಮಂತ್ರದಂತೆ ಪದಚ್ಛೇದ ಮಾಡತಕ್ಕದ್ದು.

ಯಾಸಾಂ-ಯಾವ ಉದಕಸಂಬಂಧಿಯಾದ ಮಂದಾಕಿನಿಯನ್ನು (ಗಂಗೆಯನ್ನು), ದೇವಾಃ-ದೇವತೆಗಳು, ದಿವಿ-ಸ್ವರ್ಗದನಿ, ಭಕ್ಷಂ-ಪಾನರೂಪವಾದ ಆಹಾರವನ್ನಾಗಿ, ಕೃಣ್ವಂತಿ-ಮಾಡುತ್ತಾರೆಯೋ (ಅಂದರೆ ತ್ರಿವಿಕ್ರಮರೂಪೀ ಪರಮಾತ್ಮನ ಪಾದಾಂಗುಟದಿಂದ ಉತ್ಪನ್ನವಾಗಿ ಸತ್ಯಲೋಕದಿಂದ ಕ್ರಮವಾಗಿ ಭೂಮಿಗೆ ಬರತಕ್ಕ ಗಂಗೋದಕವನ್ನು ಸ್ವರ್ಗವಾಸಿಗಳಾದ ದೇವತೆಗಳೂ ಸಹ ಪಾನ ಮಾಡುತ್ತಾರೆಯೋ ಎಂತ ಅರ್ಥ) ಯಾಃ-ಯಾವ ಉದಕಗಳು, ಅಂತರಿಕ್ಷೇ-ಆಕಾಶದಲ್ಲಿರತಕ್ಕ ಮೇಘಗಳಲ್ಲಿ, ಬಹುಧಾ ಭವಂತಿ-ಅನೇಕ ನದಿಗಳಿಂದ ಸಮುದ್ರಕ್ಕೆ ಪ್ರಾಪ್ತವಾದ ಉದಕವನ್ನು ಪುನಃ ಆಯಾ ನದಿಗಳಿಗೇನೇ ಮಳೆಯದ್ವಾರಾ ತಲುಪಿಸುವುದಕ್ಕಾಗಿ ವಾಯುವಿನಲ್ಲಿ ಆಶ್ರಯಿಸಿ. ಕೊಂಡು ಇರುತ್ತವೆಯೋ

ಇದಕ್ಕೆ ಪ್ರಮಾಣ :

ಸ್ವಕೀಯಮುದಕಂ ನದ್ಯಾಃ ಸಮುದ್ರೇನೈವ ಜಾಯತೇ ।
ವಾಯುಸ್ತು ತತ್ಪೃಥಕ್ ಜ್ಞಾತ್ವಾ ಮೋಘೇ ಕೃತ್ವಾ ಪ್ರವರ್ಷತೀ ॥

ಅರ್ಥ: ನದಿಯ ಸ್ವಕೀಯವಾದ ಉದಕವು ಸಮುದ್ರದಿಂದಲೇ ಹುಟ್ಟುತ್ತದೆ. ವಾಯುದೇವರು ಸಮುದ್ರದಲ್ಲಿರುವ ಗಂಗಾದಿ ನದಿಗಳ ನೀರನ್ನು ಪ್ರತ್ಯೇಕವಾಗಿ ತಿಳಿದು ಆಯಾ ನದಿಗಳ ಉದಕವನ್ನು ಮೋಘದಲ್ಲಿರಿ ಮಳೆಗರಿಸುತ್ತಾರೆ ಈ ವಿಷಯ ಷಟ್ಪ್ರಶ್ನೋಪನಿಷತ್ತಿನಲ್ಲಿಯೂ ಉಕ್ತ ವಾಗಿರುತ್ತೆ. ನದಿಗಳ ಉದಕ ಸಮುದ್ರಕ್ಕೆ ಸೇರಿ ಹೇಗೆ ಸಮುದ್ರವೇ ಆಗುತ್ತದೆಯೋ ಹಾಗೆ ಜೀವರುಗಳು ಬ್ರಹ್ಮನನ್ನು ಹೊಂದಿ ಐಕ್ಯವಾಗುತ್ತಾರೆ —ಅಂದರೆ ಬ್ರಹ್ಮನೇ ಆಗುತ್ತಾನೆ ಎಂಬ ಪರಕೀಯರ ಅನುವಾದವು ಅಸಂಗತ ವೆಂದು ಮೇಲಿನ ಮಂತ್ರದಿಂದ ಸ್ಪಷ್ಟ ತಿಳಿದುಬರುತ್ತೆ. ಈ ಶೃತಿ ಅದ್ವೈತ ಸಾಧಕವಲ್ಲ, ಭೇದಸಾಧಕವಾದದ್ದು. ಹೇಗೆಂದರೆ ಸಮುದ್ರದಲ್ಲಿ ಅನೇಕ ನದಿಗಳ ನೀರು ಪ್ರತ್ಯೇಕವಾಗಿ ಅಂದರೆ ಸಮುದ್ರೋದಕದಿಂದ ಭಿನ್ನವಾಗಿ ಇರುವುದನ್ನು ವಾಯುದೇವರು ತಿಳಿದು ಪುನಃ ಅದನ್ನು ಪ್ರತ್ಯೇಕ ಮಾಡಿ ಆಯಾ ನದಿಗಳ ನೀರನ್ನು ಅದಕ್ಕೆ ತಲುಪಿಸುತ್ತಾರೆಂತ ಹೇಳಿರುವುದರಿಂದ ಈ ದೃಷ್ಟಾಂತ ಅನೇಕ ಜೀವರುಗಳು ಪರಮಾತ್ಮನಲ್ಲಿ ಭಿನ್ನಭಿನ್ನರಾಗಿ ಇರುತ್ತಾರೆಂಬುದಕ್ಕೆ ಸಾಧಕವೇ ಹೊರತು ಐಕ್ಯಕ್ಕೆ ಸ್ವಲ್ಪವೂ ಸಾಧಕವಲ್ಲ. ಒಂದು ಪಾತ್ರೆಯಲ್ಲಿ ನೀರಿಟ್ಟು ಅದರ ಜತೆಗೆ ಮತ್ತಷ್ಟು ನೀರನ್ನು ಸೇರಿಸಿದರೆ ವೃದ್ಧಿ ಯಾಗದೇ ಅಥವಾ ನೀರನ್ನು ಬೇರೇ ತೆಗೆದರೆ ಕಡಿಮೆಯಾಗದೇ ಇದ್ದಿದ್ದರೆ ಐಕ್ಯಕ್ಕೆ ಸಾಧಕವಾಗುತ್ತಿತ್ತು. ಹಾಗಾಗದೆ ವೃದ್ಧಿಹ್ರಾಸಗಳು ಪ್ರತ್ಯಕ್ಷವಾಗಿ ಕಂಡುಬರುವುದರಿಂದ ಜಲದಲ್ಲಿರತಕ್ಕ ಅನಂತ ಪರಮಾಣುಗಳು ಹೇಗೆ ಭೇದ ವುಳ್ಳದ್ದೋ ಹಾಗೆ ಪರಮಾತ್ಮನ ಆಶ್ರಯದಲ್ಲಿರತಕ್ಕ ಅನಂತ ಜೀವರುಗಳೂ ಭೇದವುಳ್ಳವರೆಂದು ತಿಳಿಯತಕ್ಕದ್ದು. ಇದೇ ಶಾಸ್ತ್ರಕ್ಕೆ ಸಮ್ಮತವಾದ ಅರ್ಥ. ಉಳಿದವುಗಳು ಅಪಾರ್ಥಗಳು.

ಯಾಃ–ಯಾವ ಉದಕಕ್ಕೆ ಅಭಿಮಾನಿದೇವತೆಗಳೋ ಅವರು, ಪಯಸಾ –ನೀರಿನಿಂದ, ಪೃಥಿವೀಂ–ಭೂಮಿಯನ್ನು, ಉದಂತಿ–ತೋಯಿಸುತ್ತಾರೆಯೋ, ಶುಕ್ರಾಃ-ಶುದ್ಧವಾದ, ತಾಃ ಆಪಃ–ಆ ಉದಕಾಭಿಮಾನಿದೇವತೆಗಳೂ ಮತ್ತು

ತದಂತರ್ಗತ ಶ್ರೀಹರಿಯ ರೂಪಗಳೂ, ನಃ ಸ್ಯೋನಾ ಭವಂತು—ನಮ್ಮಗಳಿಗೆ ಸುಖವನ್ನು ಉಂಟುಮಾಡುವವರು ಆಗಲಿ.

೨) ಶಿವೇನ, ಮಾ, ಚಕ್ಷುಷಾ, ಪಶ್ಯತ, ಆಪಃ, ಶಿವಯಾ, ತನುವಾ, ಪಸ್ಪೃಶತ, ತ್ವಚಂ, ಮೇ, ಸರ್ವಾಂಶ್ಚ, ಅಗ್ನೀಂಶ್ಚ, ಅಪ್ಸುಷದಃ, ಹುವೇ, ವಃ, ಮಯಿ ವರ್ಚಃ, ಬಲಂ, ಓಜಃ, ನಿಧತ್ತ ॥

ದೃಪದಾತ್, ಇವ, ಮುಂಚತ್, ದ್ರುಪದಾತ್, ಇವೇತ್, ಮುಮುಚಾನಃ, ಸ್ವಿನ್ನಃ, ಸ್ನಾತ್ವೀ, ಮಲಾತ್, ಇವ, ಪೂತಂ, ಪವಿತ್ರೇಣ, ಏವ, ಆಜ್ಯಂ, ಆಪಃ, ಶುಂಧಂತು, ಮಾ, ಏನಸಃ ॥

**ಅರ್ಥ :** ಹೇ ಆಪಃ—ಎಲೈ ಅಬ್ದೇವತೆಗಳಿರಾ, ಶಿವೇನ—ಮಂಗಳಕರವಾದ, ಚಕ್ಷುಷಾ—ಕಣ್ಣಿನಿಂದ, ಮಾ—ನನ್ನನ್ನು, ಪಶ್ಯತ—ನೋಡತಕ್ಕವರಾಗಿರಿ. ಶಿವಯಾ—ಕ್ಷೇಮದಾಯಕವಾದ, ತನುವಾ—ದೇಹದಿಂದ, ಅಂದರೆ ಪಾದದಿಂದ, ಮೇ—ನನ್ನ, ತ್ವಚಂ—ದೇಹದ ಚರ್ಮವನ್ನು ಉಪಲಕ್ಷಣದಿಂದ ಶಿರಸ್ಸನ್ನು, ಪಸ್ಪೃಶತ—ಮುಟ್ಟತಕ್ಕವರಾಗಿರಿ. ಹೇಗೆ ಕಾರಾಗೃಹದಲ್ಲಿ ಬಂಧಿತರಾದ ಮಹಾಪರಾಧಿಗಳು, ಯಾವಾಗ ಸ್ವತಃ ಕಾರುಣಿಕನಾದ ರಾಜನು ನಾವಿದ್ದಲ್ಲಿಗೆ ತಾನೇ ಬಂದು ನಮ್ಮನ್ನು ದರ್ಶಿಸಿ ಅನುಗ್ರಹ ಮಾಡಿ ಈ ಬಂಧನದಿಂದ ಮುಕ್ತರನ್ನಾಗಿ ಮಾಡುವನೋ ಎಂದು ರಾಜದರ್ಶನವನ್ನು ಅಪೇಕ್ಷೆ ಮಾಡುತ್ತಾರೆಯೋ ಹಾಗೆ ಅನಾದಿಕಾಲದಿಂದಲೂ ಪ್ರಕೃತಿಬದ್ಧರಾದ ಅಧಿಕಾರಿಜೀವರುಗಳು ಸಂಸಾರದಿಂದ ಮುಕ್ತರಾಗಲು ಶ್ರೀಹರಿಯ ದರ್ಶನವನ್ನು ಅಪೇಕ್ಷೆ ಮಾಡುತ್ತಾರೆ. ಆಗ, ಮುಮುಚಾನಃ ಇವ—ಮಹಾರಾಜನ ಹಾಗೆ ಬದ್ಧಜೀವರುಗಳನ್ನು ಬಂಧನದಿಂದ ಮುಕ್ತರನ್ನಾಗಿ ಮಾಡಬೇಕೆಂಬ ಇಚ್ಛೆಯುಳ್ಳ ಆಪಶ್ಶಬ್ದವಾಚ್ಯನಾದ ಪರಮಾತ್ಮನು, ದ್ರುಪದಾತ್—ಪಾದದಲ್ಲಿ ಇರತಕ್ಕ ಸಂಕೋಲೆಯೆಂಬ ಕಾಷ್ಠವಿಶೇಷದ ದೆಸೆಯಿಂದ, ಮುಂಚತ್—ವಿಮೋಚನ ಮಾಡಲಿ. ದ್ರುಪದಾತ್—ಬಂಧನರೂಪವಾದ ಪಾರಬ್ಧಾನಿಷ್ಟ-ಪುಣ್ಯಪಾಪದ ದೆಸೆಯಿಂದ, ಮುಕ್ತಃ—ಬಿಡಲ್ಪಟ್ಟ ನಾವುಗಳು, ಇವೇತ್—(ಇಕಾರಃ ಫಲರತ್ನಾರ್ಚಿರಿತ್ಯಭಿದಾನಾತ್) ಫಲರೂಪವಾದ ಮುಕ್ತಿಯನ್ನು ಹೊಂದುತ್ತಾರೆಯೋ ಹಾಗೆ ಶ್ರೀಹರಿಯ ಪಾದಸ್ಪರ್ಶದಿಂದ ಮುಕ್ತಕಿಲ್ಬಿಷರನ್ನು ಫಲರೂಪವಾದ ಮುಕ್ತಿಯು; ಏತ್—ಹೊಂದಲಿ ಎಂತ ಅಭಿಪ್ರಾಯ.

ಸ್ವಿನ್ನಃ-ಬೆವರಿನಿಂದ ಯುಕ್ತನಾದ ಪುರುಷನು, ಸ್ನಾತ್ವೀ-ಸ್ನಾನ ಮಾಡಿ, ಮಲಾದಿವ-ದೇಹದ ಕಶ್ಮಲದಿಂದ ಹೇಗೆ ನಿರ್ಮುಕ್ತನಾಗುತ್ತಾನೋ ಹಾಗೆ ಸಂಸಾರದ ಬೇಗೆಯಲ್ಲಿ ಬೆಂದು ಬಳಲಿದ ಜೀವನಾದ ನಾನು, ವಿರಜಾಯಾಂ-ವಿರಜಾ ನದಿಯಲ್ಲಿ, ಸ್ನಾತ್ವಾ-ಸ್ನಾನ ಮಾಡಿ, ಮಲಾತ್-ಪ್ರಾರಬ್ಧ ಶೇಷವೆಂಬ ಮಲದಿಂದ, ಮುಕ್ತೋ-ಮುಕ್ತನು, ಭವಾಮಿ-ಆಗುತ್ತೇನೆ. ತತಃ-ಅನಂತರದಲ್ಲಿ, ಅಪ್ಸುಷಧಃ-ವಿರಜಾನದಿಯ ಸಮೀಪದಲ್ಲಿರತಕ್ಕ ವೈಕುಂಠದಲ್ಲಿರುವ, ವಃ-ನಿಮ್ಮ, ಸರ್ವಾನ್-ಸರ್ವತ್ರ ವ್ಯಾಪ್ತನಾದ ಮತ್ತು ಪೂರ್ಣವಾದ, ಅಗ್ನೀನ್-ಅಗ್ನಿಶಬ್ದವಾಚ್ಯನಾದ ವಾಸುದೇವಾದಿ ಶ್ರೀಹರಿಯ ರೂಪಗಳನ್ನು, ಹುವೇ ಆಹ್ವಯಾಮಿ-ಕರೆಯುತ್ತೇನೆ. (ಇತ ಕರ್ತೃವ್ಯತ್ಯಯ ಆಗಿರುತ್ತೆ. ಆದ್ದರಿಂದ ಪರಮಾತ್ಮನಿಂದ ನಾನು ಕರೆಯಲ್ಪಡುತ್ತೇನೆ ಎಂದರ್ಥ.) ಸ ಚ-ಆ ಶ್ರೀಹರಿಯಾದರೋ, ಮಯಿ-ನನ್ನಲ್ಲಿ, ವರ್ಚಃ-ಕಾಂತಿವಿಶೇಷವನ್ನು, ಬಲಂ-ಜ್ಞಾನಬಲವನ್ನು, (ಸ್ವರೂಪಸಾಮರ್ಥ್ಯವನ್ನು), ಓಜಃ-ಮಹತ್‌ಬಲವನ್ನು, ನಿಧತ್ತ-ಇಡಲಿ, ಈ ಪ್ರಕಾರ, ಆಪಃ-ಆಪಶ್ಶಬ್ದವಾಚ್ಯನೇ, ಪವಿತ್ರೇಣೈವ-ದರ್ಭೆಯಿಂದಲೇ, ಪೂತಂ-ಪವಿತ್ರವಾದ, ಆಜ್ಯಮಿವ-ತುಪ್ಪದೋಪಾದಿಯಲ್ಲಿ, ಮಾ-ನನ್ನನ್ನು ಏನಸಃ-ಪಾಪದ ದೆಸೆಯಿಂದ, ಶುಂಧಂತು-ಶುದ್ಧನನ್ನಾಗಿ ಮಾಡತಕ್ಕವನಾಗು ಎಂತ ಮಂತ್ರಾರ್ಥ.

ನಂತರದಲ್ಲಿ ಪುನಃ ಮೊದಲಿನಂತೆ ಪ್ರಾಣಾಯಾಮ ಮಾಡತಕ್ಕದ್ದು. ಪೂರ್ವೋಕ್ತ ಏವಂಗುಣ....ಶುಭತಿಥೌ....ಪ್ರಾತಸ್ಸಂಧ್ಯಾರ್ಘ್ಯಪ್ರದಾನಮಹಂ ಕರಿಷ್ಯೇ ಎಂದು ಸಂಕಲ್ಪಿಸಿ ಅರ್ಘ್ಯವನ್ನು ಕೊಡಬೇಕು. ಋಗ್ವೇದ ಅರ್ಘ್ಯ ಪ್ರದಾನದಂತೆಯೇ ಯಜುರ್ವೇದಿಗಳೂ ಕೂಡ ಗಾಯತ್ರೀ ಮಂತ್ರದಿಂದ ಒಂದು ಅರ್ಘ್ಯ, ಶಿರೋಮಂತ್ರದಿಂದ ಆಕರ್ಷಣ. ಆಕರ್ಷಣಕ್ಕೆ ಮೊದಲು ಪ್ರತಿಚಕ್ಷ್ವ ಎಂಬ ಮಂತ್ರ ಜಪ ಇವುಗಳನ್ನು ಮಾಡಬೇಕು. ಋಷಿ, ದೇವತಾ, ವಿನಿಯೋಗ ಮಾತ್ರ ಹೇಳಬೇಕಾಗಿಲ್ಲ. ಹೀಗೆ ಮೂರು ಅರ್ಘ್ಯಗಳನ್ನು ಕೊಡತಕ್ಕದ್ದು. ಅನಂತರ ಹಸ್ತದಲ್ಲಿ ಉದಕವನ್ನು ಹಾಕಿಕೊಂಡು "ಉದ್ಯಂತಮಸ್ತಂ ಯಂತಮಾದಿತ್ಯಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ

ವಿದ್ವಾನ್ ಸಕಲಂ ಭದ್ರಮಶ್ನುತೇ। ಅಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ ಯ ಏವಂ ವೇದ॥" ಎಂಬ ಮಂತ್ರವನ್ನು ಉಚ್ಚರಿಸಿ ಪ್ರದಕ್ಷಿಣಾಕಾರ ನೀರನ್ನು ಸ್ರವಿಸುತ್ತಾ, ತಿರುಗಿ "ಅಸಾವಾದಿತ್ಯೋ ಬ್ರಹ್ಮ" ಎಂದು ಹೇಳಿ ನೀರಿನಿಂದ ತನ್ನ ಸುತ್ತಲೂ ಪರಿಶೇಚನ ಮಾಡಿಕೊಳ್ಳಬೇಕು. ನಂತರ ಕೂತು ಆಚಮನ ಮಾಡತಕ್ಕದ್ದು. ಈ ಮಂತ್ರಾರ್ಥ ಹಿಂದೆ ಬರೆದಿರುತ್ತೆ. ಹೀಗೆ ಯಜುರ್ವೇದಿಗಳು ಮಾಡತಕ್ಕ ಅರ್ಘ್ಯಪ್ರದಾನಕ್ರಮವೆಂತ ತಿಳಿಯಿರಿ. ಮುಂದೆ ಭೂತೋಚ್ಚಾಟನ, ಆಸನ, ಗಾಯತ್ರೀ ಜಪಕ್ರಮವನ್ನು ಬರೆಯುತ್ತೇನೆ. ಅದು ಋಗ್ವೇದಿಗಳಿಗೂ, ಯಜುರ್ವೇದಿಗಳಿಗೂ ಮತ್ತು ಸಾಮವೇದಿಗಳಿಗೂ ಕೂಡ ಒಂದೇ ವಿಧವಾಗಿರತಕ್ಕದ್ದು. ಆದರಲ್ಲಿ ವ್ಯತ್ಯಾಸವಿಲ್ಲ.

ಅಪಸರ್ಪಂತ್ವಿತ್ಯಸ್ಯ ವಾಮದೇವೋ ಭೂತಾನ್ಯನುಷ್ಟುಪ್ ಭೂತೋಚ್ಚಾಟನೇ ವಿನಿಯೋಗಃ॥

**ಅಪಸರ್ಪಂತು ಯೇ ಭೂತಾಃ ಯೇ ಭೂತಾ ಭುವಿಸಂಸ್ಥಿತಾಃ।**
**ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ॥**
**ಅಪಕ್ರಾಮಂತು ಭೂತಾದ್ಯಾಃ ಕ್ರೂರಾಶ್ಚೈವತು ರಾಕ್ಷಸಾಃ।**
**ಯೇಚಾತ್ರ ನಿವಸಂತ್ಯೇವ ದೇವತಾ ಭುವಿಸಂಸ್ಥಿತಾಃ॥**
**ತೇಷಾಮಪ್ಯವಿರೋಧೇನ ಬ್ರಹ್ಮಕರ್ಮಸಮಾರಭೇತ್॥**

ನಿರಸ್ತಃ ಪರಾವಸುಃ। ಇದಮಹಮರ್ವಾವಸೋಃ ಸದನೇ ಸೀದಾಮಿ। ಆಸನೇ ಸೋಮಮಂಡಲೇ ಕೂರ್ಮಸ್ಕಂಧೇ ಉಪವಿಷ್ಟೋಽಸ್ಮಿ॥ ಪೃಥಿವ್ಯಾಃ ಮೇರುಪೃಷ್ಠಋಷಿಃ ಕೂರ್ಮೋದೇವತಾ ಸುತಳಂ ಛಂದಃ ಆಸನೇ ವಿನಿಯೋಗಃ॥

ಅನಂತಾಸನಾಯ ನಮಃ। ಕೂರ್ಮಾಸನಾಯ ನಮಃ॥

ಪೃಥ್ವೀ ತ್ವಯಾಧೃತಾಲೋಕಾ ದೇವೀ ತ್ವಂ ವಿಷ್ಣುನಾ ಧೃತಾ॥ ತ್ವಂ ಚ ಧಾರಯ ಮಾಂ ದೇವೀ ಪವಿತ್ರಂ ಕುರು ಚಾಸನಮ್। ಪದ್ಮಂ ಚ ಸ್ರೂಪಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ॥

ಯಾವ ಭೂತಗಳು ಸತ್ಕರ್ಮಕ್ಕೆ ವಿಘ್ನವನ್ನುಂಟುಮಾಡತಕ್ಕವುಗಳಾಗಿ ಭೂಮಿಯಲ್ಲಿವೆಯೋ ಅವುಗಳು ದೂರ ಓಡಲಿ. ಭೂತಾದಿಗಳು ಮತ್ತು ಕ್ರೂರವಾದ ರಾಕ್ಷಸರುಗಳು ರುದ್ರದೇವರ ಆಜ್ಞೆಯಂತೆ ನಾಶವಾಗಲಿ. ಯಾವ ದೇವತೆಗಳು ನಿರಂತರದಲ್ಲಿ ಭೂಮಿಯಲ್ಲಿ ವಾಸವಾಗಿರುತ್ತಾರೋ ಅವರುಗಳಿಗೆ ವಿರೋಧವಿಲ್ಲದ ರೀತಿಯಲ್ಲಿ ಬ್ರಹ್ಮಕರ್ಮವನ್ನು ಛಂದಾಗಿ ಆರಂಭ ಮಾಡುತ್ತೇನೆ ಎಂತ ತಾತ್ಪರ್ಯ.

ಪರಾವಸುಃ–ಪರಾವಸು ಎಂಬುವನು, ನಿರಸ್ತಃ–ಸಂಹರಿಸಲ್ಪಟ್ಟನು. ಅಹಂ–ನಾನು, ಇದಂ–ಈ, ಅರ್ವಾವಸೋಃ–ಅರ್ವಾವಸುವಿನ, ಸದನೇ–ಹೃದಯದಲ್ಲಿ, ಸೀದಾಮಿ–ವಾಸ ಮಾಡುತ್ತೇನೆ, ಅಂದರೆ ಸನ್ನಿಧಾನ ಮಾಡುತ್ತೇನೆ ಎಂತ ಸೂರ್ಯದೇವನು ಹೇಳಿದ ಮಾತನ್ನು ಸ್ಮರಣೆಗೆ ತಂದುಕೊಂಡು ದಾರವನ್ನು ಕೈಯಲ್ಲಿ ಹಿಡಿದು ಎರಡು ಭಾಗ ಮಾಡಿ ಎಡಗೈಯಲ್ಲಿದ್ದ ಭಾಗವನ್ನು ಎಡಕ್ಕೆ ಬಿಸುಟು, ಬಲಗೈಯಲ್ಲಿದ್ದ ಭಾಗವನ್ನು ಬಲಭಾಗದಲ್ಲಿ ಆಸನದ ಕೆಳಗೆ ಹಾಕಬೇಕು — ಈ ಇತಿಹಾಸ ಮಹಾಭಾರತದ ವನಪರ್ವದಲ್ಲಿ ವಿಸ್ತಾರವಾಗಿರುತ್ತೆ. ಅಲ್ಲಿ ಓದಿ ತಿಳಿಯಬಹುದು. ಸೋಮ ಮಂಡಲೇ–ಚತುರಸ್ರಾಕಾರವಾದ ಮಂಡಲದಲ್ಲಿ, ಕೂರ್ಮಸ್ಕಂಧೇ–ಆಮೆಯ ಆಕೃತಿಯುಳ್ಳ, ಆಸನೇ–ಪೀಠದ ಪೃಷ್ಠದ ಮೇಲೆ, ಉಪವಿಷ್ಟೋಸ್ಮಿ–ಕೂತುಕೊಳ್ಳುತ್ತೇನೆ, ಎಂದು ಸಂಕಲ್ಪಿಸಿ, 'ಪೃಥಿವೀತಿ' ಮಂತ್ರಕ್ಕೆ ಮೇರೋಪೃಷ್ಠ ಋಷಿಯು, ಕೂರ್ಮೋದೇವತಾ, ಸುತಳಂ ಛಂದಃ, ಆಸನ ಹಾಕಿ ಕೂಡುವಾಗ, ವಿನಿಯೋಗಃ–ಹೇಳತಕ್ಕದ್ದು. ಅನಂತಾಸನಾಯ ನಮಃ–ಶೇಷದೇವರೇ ಪೀಠವಾಗಿ ಉಳ್ಳ ಪರಮಾತ್ಮನಿಗೆ ನಮಸ್ಕಾರವು, ಕೂರ್ಮಾಸನಾಯ ನಮಃ–ಘನೋದಕದಲ್ಲಿ ಭೂಮಿಗೆ ಆಧಾರವಾಗಿರತಕ್ಕ ವಿಷ್ಣುಕೂರ್ಮ ಮತ್ತು ವಾಯುಕೂರ್ಮಗಳೆಂಬ ಆಶ್ರಯರೂಪಗಳಿಗೆ ನಮಸ್ಕಾರವೆಂತ ಹೇಳಿ, ನಂತರ ಭೂದೇವಿಯನ್ನು ಪ್ರಾರ್ಥಿಸತಕ್ಕದ್ದು. ಪೃಥ್ವಿ–ಎಲೈ ಭೂದೇವಿಯೇ, ತ್ವಯಾ–ನಿನ್ನಿಂದ, ಲೋಕಾಃ–ಸಮಸ್ತ ಪ್ರಜೆಗಳು, ಧೃತಾಃ–ಧರಿಸಲ್ಪಟ್ಟಿವೆ. ದೇವಿ–ಎಲೈ ದೇವಿಯೇ, ತ್ವಂ–ನೀನಾದರೋ, ವಿಷ್ಣುನಾ–ಶ್ರೀಹರಿಯಿಂದ, ಧೃತಾ–ಧರಿಸಲ್ಪಟ್ಟಿದ್ದಿ. ತ್ವಂಚ ನೀನಾದರೋ, ಮಾಂ–ನನ್ನನ್ನು, ಧಾರಯ–

ಪ್ರೇಷಿಸು. ಆಸನಂ ಚ–ನಾನು ಕೂತಿರುವ ಆಸನವನ್ನೂ, ಪವಿತ್ರಂ–ಪಾವನ ವಾದದ್ದನ್ನಾಗಿ, ಕುರು–ಮಾಡು. ಸುರೇಶ್ವರಿ–ದೇವತೆಗಳಿಗೆ ಯಜಮಾನಳೇ, ತ್ವಾಂ–ನಿನ್ನನ್ನು ಕುರಿತು, ನತೋಽಸ್ಮಿ–ನಮಸ್ಕಾರ ಮಾಡಿದವನು ಆಗುತ್ತೇನೆ ಎಂತ ಅರ್ಥಾನುಸಂಧಾನಪೂರ್ವಕ ಭೂಮಿಯನ್ನು ಪ್ರಾರ್ಥನಾ ಮಾಡಬೇಕು.

**ಓಮಿತ್ಯೇಕಾಕ್ಷರಂ ಬ್ರಹ್ಮ ಅಗ್ನಿರ್ದೇವತಾ ಬ್ರಹ್ಮ ಇತ್ಯಾರ್ಷಂ ಗಾಯತ್ರಂ ಛಂದಂ ಪರಮಾತ್ಮಂ ಸ್ವರೂಪಮ್ ॥ ಸಾಯುಜ್ಯಂ ವಿನಿಯೋಗಮ್ ॥**

'ಸೈಷಾ ಗಾಯತ್ರೀ ಚತುಷ್ಪದಾ' ಎಂಬ ವಚನದಂತೆ ಗಾಯತ್ರೀ ಮಂತ್ರವು ನಾಲ್ಕು ಪಾದವೆಂತ ತಿಳಿಯತಕ್ಕದ್ದು. ಅದರಲ್ಲಿ ಮೊದಲನೇ ಪಾದ ಯಾವುದು ಅಂದರೆ, ಓಮಿತ್ಯೇಕಾಕ್ಷರಂ ಬ್ರಹ್ಮ- ಗುಣಪೂರ್ಣನಾದ ಬ್ರಹ್ಮನನ್ನು ಪ್ರತಿಪಾದನ ಮಾಡುವ ಓಂ ಎಂಬ ಅಕ್ಷರವು ಪ್ರಥಮ ಪಾದವು. ಅಗ್ನಿರ್- ದೇವತಾ–ಓಂಕಾರಕ್ಕೆ ಅಭಿಮಾನಿದೇವತಾ ಅಗ್ನಿದೇವರು (ಅಮುಖ್ಯದೇವತಾ) ಅಗ್ನ್ಯಂತರ್ಗತ ಪರಶುರಾಮದೇವರು ಮುಖ್ಯಪ್ರತಿಪಾದ್ಯದೇವತಾ. (ಇದಕ್ಕೆ ಪ್ರಮಾಣ 'ಸಂಹರ್ತಾ ಸರ್ವದೋಷಾಣಾಂ ಅಗ್ನಿಸ್ಥಃ ಸರ್ವದಾಹಕಃ। ನಿತ್ಯಾನಂದೋಽಗ್ನಿವರ್ಣಶ್ಚ ರಾಮಃ ಪರಶುಭೃತ್ಸದಾ॥' ಇತಿ ಬೃಹದ್ಭಾಷ್ಯೇ) ಬ್ರಹ್ಮ ಇತ್ಯಾರ್ಷಂ–ಪರಬ್ರಹ್ಮನೇ ಋಷಿಯಾಗಿ ಉಳ್ಳದ್ದು ಪ್ರಣವವು. ಸರೂಪಂ-ಸಾರೂಪ್ಯವು, ಸಾಯುಜ್ಯಂ-ಸಾಯುಜ್ಯವು, ಉಪಲಕ್ಷಣಯಾ ಸಾಮೀಪ್ಯ ಮತ್ತು ಸಾಲೋಕ್ಯ ಎಂಬ ಚತುರ್ವಿಧಮುಕ್ತಿಯನ್ನು ವಿನಿ- ಯೋಗಮ್–ಫಲರೂಪವಾಗಿ ಕೊಡತಕ್ಕದ್ದು ಅಧಿಕಾರಿಭೇದದಿಂದ.

ಆಯಾತು ವರದಾ ದೇವೀ ಅಕ್ಷರಂ ಬ್ರಹ್ಮಸಂಹಿತಮ್ ।
ಗಾಯತ್ರೀ ಛಂದಸಾಂ ಮಾತಾ ಇದಂ ಬ್ರಹ್ಮಜುಷಸ್ವ ನೋ ॥
ಯದನ್ಹಾತ್ಕುರುತೇ ಪಾಪಂ ತದನ್ಹಾತ್ಪ್ರತಿಮುಚ್ಯತೇ ।
ಯದ್ರಾತ್ರಿಯಾತ್ಕುರುತೇ ಪಾಪಂ ತದ್ರಾತ್ರಿಯಾತ್ಪ್ರತಿಮುಚ್ಯತೇ ॥
ಸರ್ವವರ್ಣೇ ಮಹಾದೇವೀ ಸಂಧ್ಯಾವಿದ್ಯೇ ಸರಸ್ವತೀ ॥

ಓಜೋಽಸಿ, ಸಹೋಽಸಿ, ಬಲಮಸಿ, ಭ್ರಾಜೋಽಸಿ, ದೇವಾನಾಂ ಧಾಮನಾಮಾಸಿ । ವಿಶ್ವಮಸಿ ವಿಶ್ವಾಯುಃ, ಸರ್ವಮಸಿ ಸರ್ವಾಯುಃ, ಅಭಿಭೂರೋಮ್ ॥

**ಗಾಯತ್ರೀಮಾವಾಹಯಾಮಿ, ಸಾವಿತ್ರೀಮಾವಾಹಯಾಮಿ, ಸರಸ್ವತೀ-ಮಾವಾಹಯಾಮಿ, ಛಂದರ್ಷೀನಾವಾಹಯಾಮಿ, ಶ್ರಿಯಮಾವಾಹ-ಯಾಮಿ, ಬಲಮಾವಾಹಯಾಮಿ ॥**

ಗಾಯತ್ರ್ಯಾಃ ಗಾಯತ್ರೀ ಛಂದಃ, ವಿಶ್ವಾಮಿತ್ರಋಷಿಃ, ಸವಿತಾ ದೇವತಾ, ಅಗ್ನಿರ್ಮುಖಂ, ಬ್ರಹ್ಮಾಶಿರಃ, ವಿಷ್ಣುರ್ಹೃದಯಂ, ರುದ್ರಃಶಿಖಾ, ಪೃಥಿವೀ ಯೋನಿಃ, ಪ್ರಾಣಾಪಾನ ವ್ಯಾನೋದಾನ ಸಮಾನ ಸಪ್ರಾಣಾ, ರಕ್ತವರ್ಣಾ (ಇದು ಪ್ರಾತಸ್ಸಂಧ್ಯೆಯಲ್ಲಿ; ಮಾಧ್ಯಾಹ್ನಿಕದಲ್ಲಿ 'ಶ್ವೇತವರ್ಣಾ' ವೆಂದೂ, ಸಾಯಂಸಂಧ್ಯೆಯಲ್ಲಿ 'ಕೃಷ್ಣವರ್ಣಾ'ವೆಂದೂ ಹೇಳಿಕೊಳ್ಳಬೇಕು), ಸಾಂಖ್ಯಾಯನಸ ಗೋತ್ರಾ, ಗಾಯತ್ರೀ ಚತುರ್ವಿಂಶತ್ಯಕ್ಷರಾ, ತ್ರಿಪದಾ ಷಟ್ಕುಕ್ಷಿಃ ಪಂಚಶೀರ್ಷೋಪನಯನೇ ವಿನಿಯೋಗಃ ॥ ಎಂತ ಉಚ್ಚರಿಸಿ ನಂತರ ಪ್ರಾಣಾಯಾಮ ಮಾಡಬೇಕು.

**ಓಂ ಭೂಃ, ಓಂ ಭುವಃ, ಓಂ ಸ್ವಃ** (ಯಜುರ್ವೇದಿಗಳು 'ಓಂ ಸುವಃ' ಎಂತ ಹೇಳಬೇಕು), **ಓಂ ಮಹಃ, ಓಂ ಜನಃ, ಓಂ ತಪಃ, ಓಂ ಸತ್ಯಂ, ಓಂ ತತ್ಸವಿತುರ್ವರೇಣ್ಯಂ, ಭರ್ಗೋದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್ ॥ ಓಂ ಅಪೋಜ್ಯೋತೀರಸೋ ಅಮೃತಂ ಬ್ರಹ್ಮ ಭೂರ್ಭುವಸ್ಸ್ವರೋಂ (ಸ್ಸುವರೋಂ) ॥** ಎಂತ. ನಂತರ ಮುಂದೆ ಬರೆದಿರುವಂತೆ ಕರನ್ಯಾಸ, ಹೃದಯಾದಿ ನ್ಯಾಸಗಳನ್ನು ಮಾಡಬೇಕು. ಹೀಗೆ ಪ್ರಣವದ ಋಷಿ, ದೇವತಾ, ಛಂದಸ್ಸು, ವಿನಿಯೋಗವನ್ನು ಹೇಳಿ ನಂತರ ತನ್ನೊಳಗೆ ಪ್ರಣವ ಗಾಯತ್ರಿಗಳಿಗೆ ಅಭಿಮಾನಿ ಮತ್ತು ಪ್ರತಿಪಾದ್ಯವಾದ ಭಗವದ್ರೂಪಗಳನ್ನು ಸನ್ನಿಧಾನ ಮಾಡುವಂತೆ ಪ್ರಾರ್ಥನಾವನ್ನು ಮಂತ್ರವು ಹೇಳುತ್ತದೆ.

**ಅರ್ಥ :** ( ಹೃದಯೇ ಚಾರ್ಕಮಂಡಲೇ ॥ " **ದೇವೀಮಾವಾಹ್ಯ** ಗಾಯತ್ರೀಂ ತತೋಧ್ಯಾಯೇದ್ದ್ವಿಜೋತ್ತಮ ॥" **ಇತಿ ಭರದ್ವಾಜಸ್ಮೃತೇಃ**) ವರದಾ- ನನಗೆ ಇಷ್ಟವಾದ ವರಗಳನ್ನು ಕೊಡುವ, ದೇವೀ-ಕ್ರೀಡಾದಿ ಗುಣ-ವಿಶಿಷ್ಟನಾದ, ಛಂದಸಾಂ-ಉಷ್ಣಿಗಾದಿ ಛಂದೋಭಿಮಾನಿ ದೇವತೆಗಳಿಗೆ, ಮಾತಾ-ಸುಖ ಕೊಡುವುದರಿಂದ ತಾಯಿಗೆ ಸದೃಶನಾದ, ಅಥವಾ ನಾನಾ-

ಛಂದಸ್ಸಿನಿಂದ ಯುಕ್ತವಾದ ವೇದವಾಕ್ಯಗಳ ಅರ್ಥವನ್ನು, ಮಾತಯತೀತಿ—ಮಾತಾ-ಬೋಧನೆಯನ್ನು ಮಾಡುವ, ಗಾಯತ್ರೀ-ಗುಣಗಾನ ಮಾಡುವ ನನ್ನು ಸಂರಕ್ಷಣೆ ಮಾಡತಕ್ಕವನಾದ್ದರಿಂದ ಗಾಯತ್ರೀಶಬ್ದವಾಚ್ಯನಾದ, ಅಕ್ಷರಂ-ಅನಿತ್ಯತ್ವ, ದೇಹನಾಶ, ದುಃಖಪ್ರಾಪ್ತಿ, ಅಪೂರ್ಣತಾ ಎಂಬ ನಾಲ್ಕು ವಿಧವಾದ ನಾಶರಹಿತನಾದ, ಸಮ್ಮಿತಂ-ನಿರ್ದೋಷತ್ವ ಮತ್ತು ಅನಂತ ಕಲ್ಯಾಣಗುಣವಿಶಿಷ್ಟತ್ವವನ್ನು ಪ್ರತಿಪಾದನ ಮಾಡುವ ಶ್ರುತಿಸ್ಮೃತಿಪ್ರಮಾಣ ಗಳಿಂದ ಪ್ರಮಿತನಾದ ಅಥವಾ ಬ್ರಹ್ಮಸಮ್ಮಿತಂ-ಬ್ರಹ್ಮನಷ್ಟೇ ಸಮಾನ ದೇಶ-ಕಾಲಗಳಲ್ಲಿ ವ್ಯಾಪ್ತವಾದ ಶಬ್ದಬ್ರಹ್ಮ ಎಂದರೆ ಪ್ರಣವಾದಿ ವೇದಗಳಿಂದ ತಿಳಿಯಲ್ಪಡತಕ್ಕ ಶಬ್ದಸ್ವಭಾವದಿಂದ ಸ್ತ್ರೀಲಿಂಗವಾದ ಗಾಯತ್ರ್ಯಾದಿ ಶಬ್ದಗಳಿಂದ ವಾಚ್ಯಳಾದ ಲಕ್ಷ್ಮೀದೇವಿಯಲ್ಲಿ ಲಕ್ಷ್ಮೀರೂಪದಿಂದ ನಿಯಾಮಕನಾಗಿರುವುದರಿಂದ ಸ್ತ್ರೀಲಿಂಗಶಬ್ದವಾಚ್ಯನಾದ, ಬ್ರಹ್ಮ-ಗುಣಪೂರ್ಣನಾದ ವಿಷ್ಣುವು, ಆಯಾತು—ಸೂರ್ಯಮಂಡಲವನ್ನು ಮತ್ತು ನನ್ನ ಹೃದಯವನ್ನು ಕುರಿತು ಬರತಕ್ಕವನಾಗಲಿ ಅಂದರೆ ವಿಶೇಷ ಸನ್ನಿಧಾನ ಮಾಡತಕ್ಕವನಾಗಲಿ. ಹೇ ವಿಷ್ಣೋ, ನೀನು ಇದಂ ಬ್ರಹ್ಮ-ಈ ಪ್ರಣವಗಾಯತ್ರ್ಯಾದಿರೂಪವಾದ ಶಬ್ದ-ಬ್ರಹ್ಮವನ್ನು ಅಂದರೆ ವೇದದ ಅರ್ಥವಿಶೇಷಗಳನ್ನು, ಮೇ-ನನಗೆ, ಜುಷಸ್ವ-ಬೋಧನ ಮಾಡು, ಚೆನ್ನಾಗಿ ತಿಳಿಸು ಎಂತ ಅರ್ಥ. ಸ ವಿಷ್ಣುರಾಹಹಿ, ತಂ ಬ್ರಹ್ಮೇತ್ಯಾಚಕ್ಷತೇ, ತದೇವ ಬ್ರಹ್ಮ ಪರಮಂ ಕವೀನಾಂ ಇತ್ಯಾದಿ ಪ್ರಮಾಣ ಗಳಿಂದ ಗಾಯತ್ರೀವಾಚ್ಯನಾದವನು ಶ್ರೀವಿಷ್ಣುವೇ ಹೊರತು ಅನ್ಯದೇವತೆ ಗಳಾಗಲಿ ಛಂದಸ್ಸಾಗಲಿ ಅಲ್ಲವೆಂದು ತಿಳಿಯಬೇಕು.

ಅಹ್ನಾತ್—ಹಗಲಿನಲ್ಲಿ, ಯತ್ ಪಾಪಂ—ಯಾವ ಪಾಪಗಳು, ಕುರುತೇ—ಮಾಡಲ್ಪಡುತ್ತವೆಯೋ, ತತ್-ಆ ಪಾಪವು, ಅಹ್ನಾತ್—ಸಾಯಂಸಂಧ್ಯಾ-ವಂದನೆಯಿಂದ, ಪ್ರತಿಮುಚ್ಯತೇ—ಬಿಡಲ್ಪಡುತ್ತದೆ. ರಾತ್ರ್ಯಾತ್—ರಾತ್ರಿ ಕಾಲದಲ್ಲಿ, ಯತ್ ಪಾಪಂ-ಯಾವ ಪಾಪಗಳು, ಕುರುತೇ ಮಾಡಲ್ಪಡುತ್ತ ದೆಯೋ, ತತ್—ಆ ಪಾಪವು, ರಾತ್ರ್ಯಾತ್—ಪ್ರಾತಃಸಂಧ್ಯಾವಂದನೆಯಿಂದ ರಾತ್ರಿಶಬ್ದವಾಚ್ಯ ದುರ್ಗಾರಮಣನ ಸನ್ನಿಧಾನದಿಂದ, ಪ್ರತಿಮುಚ್ಯತೇ—ಬಿಡಲ್ಪಡುತ್ತದೆ. ಸರ್ವವರ್ಣೇ-ಅಪ್ರಾಕೃತವಾದ ಶುಕ್ಲಾದಿ ವರ್ಣಗಳಿಂದ

ಕೂಡಿರುವವನೇ (ಶುಕ್ಲ, ರಕ್ತ, ರೌಕ್ಮ [ಪೀತಂ] ಕೃಷ್ಣ ಎಂದು ನಾರಾಯಣನಿಗೆ ನಾಲ್ಕು ವಿಧ ವರ್ಣವುಳ್ಳ ರೂಪಗಳು ಉಂಟೆಂದು ಪ್ರಮಾಣವಿರುತ್ತದೆ.) ಅಥವಾ ವಿಪ್ರಾದಿ ಸರ್ವ ವರ್ಣಾಶ್ರಮಧರ್ಮಗಳಿಂದ ಕೂಡಿರುವನೇ, ಅಥವಾ ಗಾಯತ್ರೀ ಅಭಿಮಾನಿದೇವತೆಗಳು ಮೂರು ಮಂದಿಗಳು—ಅವರು ಯಾರೆಂದರೆ ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂದು—ಕ್ರಮವಾಗಿ ರಕ್ತವರ್ಣ, ಶ್ವೇತವರ್ಣ, ಕೃಷ್ಣವರ್ಣ. ಆದ್ದರಿಂದ ಸರ್ವವರ್ಣೇ ಎಂದು ಸಂಬೋಧನೆ ಮಾಡಿರುತ್ತೆ. ಮಹಾದೇವೀ, ಸಂಧ್ಯಾವಿದ್ಯೇ, ಸರಸ್ವತೀ ಎಂಬ ಮೂರು ಶಬ್ದಗಳೂ ಗಾಯತ್ರಿಯ ಸಂಬೋಧನೆಯಾಗಿರುತ್ತೆ. ಸರ್ವೋತ್ತಮನಾದ್ದರಿಂದಲೂ ಕ್ರೀಡಾದಿ ಗುಣವಿಶಿಷ್ಟನಾದ್ದರಿಂದಲೂ ಮಹಾದೇವೀ ಎಂಬ ಶಬ್ದವಾಚ್ಯನಾಗುತ್ತಾನೆ. ಯಜಮಾನನು ಈತನಿಂದ ಸಂಪತ್ತಿನಿಂದ ಕೂಡಿದವನಾಗಿ ಮಾಡಲ್ಪಡುವುದರಿಂದ ಸಂಧ್ಯಾಶಬ್ದವಾಚ್ಯನೂ, ಜ್ಞಾನಸ್ವರೂಪನಾದ್ದರಿಂದ ವಿದ್ಯಾಶಬ್ದವಾಚ್ಯನೂ ಆಗಿರುತ್ತಾನೆ. ಸರಾಂಸಿ ತೀರ್ಥಗಳು ನಿಯಮೇನ ಯಾವನಲ್ಲಿ ಇವೆಯೋ ಅವನು ಅಥವಾ ಸಾಗರವು ಭಗವನ್ಮೂರ್ತಿಗಳಿಗೆ ಆಶ್ರಯವಾಗಿವೆಯೋ ಆದ್ದರಿಂದ ಸರಸ್ವತೀಶಬ್ದವಾಚ್ಯನೂ ಶ್ರೀಹರಿಯಾಗಿರುತ್ತಾನೆ. ಅಥವಾ ಸಂಧ್ಯಾಕಾಲಗಳಲ್ಲಿ ಧ್ಯಾನಿಸಲ್ಪಡತಕ್ಕವನಾದ್ದರಿಂದಲೂ ಸಂಧ್ಯಾವಿದ್ಯೇ ಎಂದು ಸಂಬೋಧಿಸಲ್ಪಡುತ್ತಾನೆ. ಈ ರೀತಿ ಗಾಯತ್ರ್ಯಾದಿ ಮೂರು ರೂಪಗಳಿಂದ ಇರತಕ್ಕ ಪರಮಾತ್ಮನೇ, ಇದಂ ಬ್ರಹ್ಮ-ವಿಷ್ಣುನಾಮಕ ಬ್ರಹ್ಮನನ್ನು, ಜುಷಸ್ವ—ನನ್ನಿಂದ ಸೇವೆ ಮಾಡಿಸತಕ್ಕವನಾಗು (ಅಂದರೆ ನಿನ್ನ ಸೇವೆಯು ನನಗೆ ಹೇಗೆ ದೊರೆಯಬೇಕೋ ಹಾಗೆ ಮಾಡಿಸು ಎಂತ ಪ್ರಾರ್ಥನಾ ).

ಓಜೋಽಸಿ-ಭೂಧರಾದಿ ಧಾರಣಶಕ್ತಿಯುಳ್ಳವನಾಗಿದ್ದಿ, ಸಹೋಽಸಿ-ಸಹನಶಕ್ತಿಯುಳ್ಳವನು ಆಗಿದ್ದಿ. ಬಲಮಸಿ-ಪ್ರಾಣಬಲ ಮತ್ತು ಬುದ್ಧಿಬಲ ಉಳ್ಳವನಾಗಿದ್ದಿ. ಭ್ರಾಜೋಽಸಿ-ಶರೀರಕಾಂತಿಯುಳ್ಳವನು ಆಗಿರುತ್ತಿ. ದೇವಾನಾಂ-ದೇವತೆಗಳಿಗೆ, ಧಾಮ—ಸುಖವನ್ನು ಕೊಡುವ ಸ್ಥಾನವು ಅಂದರೆ ಆಶ್ರಯನೂ, ನಾಮ—ನಾಮಕರಣ ಮಾಡಿದವನೂ, ಮತ್ತು ಸಮಸ್ತ ದೇವತೆಗಳ ಹೆಸರಿನಿಂದ ವಾಚ್ಯನೂ ನೀನಾಗಿರುತ್ತಿ. ವಿಶ್ವಮಸಿ—ಸಮಸ್ತ

ಜಗತ್ತಿನಲ್ಲಿ ಪ್ರವೇಶ ಮಾಡಿರತಕ್ಕವನಾದ್ದರಿಂದ ವಿಶ್ವಶಬ್ದವಾಚ್ಯನಾಗಿರುತ್ತಿ. ವಿಶ್ವಾಯುಃ- ಜಗತ್ತಿಗೆ ಆಶ್ರಯನು ಮತ್ತು ಆಯುಃಪ್ರದನೂ ಆಗಿರುತ್ತಿ. ನರನಾಮಕ ಭಗವಂತನಿಂದ ಉತ್ಪನ್ನವಾದ್ದರಿಂದ ತತ್ವಗಳಿಗೆ ವಿಶ್ವ ಎಂದು ಹೆಸರು. ಅವುಗಳಿಗೆ ಆಶ್ರಯನು ಅಂದರೆ ನಾರಾಯಣನು ಆಗಿದ್ದಿ. ಸರ್ವಮಸಿ- ಯದಧೀನಾಯಸ್ಯಸತ್ತಾ ತತ್ತದಿತ್ಯೇವ ಭಣ್ಯತೇ ಎಂಬ ನ್ಯಾಯದಿಂದಲೂ, ಸರ್ವವ್ಯಾಪಿಯಾದ್ದರಿಂದಲೂ ಸರ್ವಶಬ್ದವಾಚ್ಯನು ಆಗಿರುತ್ತಿ. ಸರ್ವಾಯುಃ ಯೇನ ಜಾತಾನಿ ಜೀವಂತೀತಿ ಶ್ರುತೇಃ, ಸರ್ವಜೀವನಹೇತುವೂ ಮತ್ತು ಸರ್ವಯೋಗ್ಯರಿಗೆ ಮೋಕ್ಷಪ್ರದನೂ ಆಗಿರುತ್ತಿ. ಅಭಿಭೂಃ-ಸರ್ವಜಪಕ್ಕೆ ವಿಘ್ನಕರ್ತೃಗಳಿಗೂ ಪಾಪಗಳಿಗೂ ತಿರಸ್ಕರ್ತನೂ, ಅಸಿ-ಆಗಿದ್ದಿ. ಓಮಸಿ- ಗುಣಪೂರ್ಣನಾಗಿರುತ್ತಿ. ಈ ರೀತಿ ಪರಮಾತ್ಮನನ್ನು ಪ್ರಾರ್ಥಿಸಿ ನಮ್ಮೊಳಗೆ ಆವಾಹನವನ್ನು ಮಾಡುತ್ತೇವೆ.

ಗಾಯತ್ರೀಮಾವಾಹಯಾಮಿ-ಗುಣಪೂರ್ಣತ್ರಾಣಕರ್ತ್ರೀಯಾದ ಭಗವನ್ಮೂರ್ತಿಯನ್ನು ನನ್ನಲ್ಲಿ ಆವಾಹನ ಮಾಡುತ್ತೇನೆ. ಸಾವಿತ್ರೀಮಾವಾಹಯಾಮಿ- ಜಗತ್ತನ್ನು ಪ್ರಸವಿಸತಕ್ಕ ಸಾವಿತ್ರೀನಾಮಕ ಭಗವನ್ಮೂರ್ತಿಯನ್ನು ಆವಾಹನ ಮಾಡುತ್ತೇನೆ. ಸರಸ್ವತೀಮಾವಾಹಯಾಮಿ-ಸರಸ್ವತೀನಾಮಕ ಭಗವನ್ಮೂರ್ತಿಯನ್ನು ಆವಾಹನ ಮಾಡುತ್ತೇನೆ. "ಗಾಯತ್ರೀನಾಮಪೂರ್ವಂ ಸ್ಯಾತ್ ಸಾವಿತ್ರೀ ಮಧ್ಯಮೇ ದಿನೇ। ಸರಸ್ವತೀ ಚ ಸಾಯಾಹ್ನೇ ಸೈವ ಸಂಧ್ಯಾತ್ರಿಷು ಸ್ಮೃತಾ॥" ಇತಿ ಆಹ್ನಿಕಸ್ಮೃತೇಃ. ಒಬ್ಬನೇ ಪರಮಾತ್ಮನು ಪ್ರಾತಃ ಗಾಯತ್ರೀನಾಮಕನೂ, ಮಧ್ಯಾಹ್ನ ಸಾವಿತ್ರೀನಾಮಕನೂ, ಸಾಯಂ ಕಾಲ ಸರಸ್ವತೀನಾಮಕನೂ ಆಗಿದ್ದು ತ್ರಿಸಂಧ್ಯಾಭಿಮಾನಿಗಳಾದ ಬ್ರಹ್ಮ- ಪತ್ನಿಯರಾದ ಗಾಯತ್ರೀ, ಸಾವಿತ್ರೀ, ಸರಸ್ವತೀದೇವಿಯರಲ್ಲಿ ನಿಯಾಮಕ ನಾಗಿರುತ್ತಾನೆಂತ ತಾತ್ಪರ್ಯ.

ಛಂದಋಷೀನಾವಾಹಯಾಮಿ-ವೇದದ್ರಷ್ಟೃಗಳಾದ ಋಷಿಗಳನ್ನೂ, ಶ್ರಿಯಮಾವಾಹಯಾಮಿ-ಮಹಾಲಕ್ಷ್ಮಿಯನ್ನೂ, ಬಲಮಾವಾಹಯಾಮಿ- ಬಲಾತ್ಮಕರಾದ ಮುಖ್ಯವಾಯುವನ್ನೂ ನನ್ನಲ್ಲಿ ಆವಾಹನೆ ಮಾಡುತ್ತೇನೆ. ನನಗೆ ಗಾಯತ್ರೀಜಪ ಸಿದ್ಧಿಸುವುದಕ್ಕಾಗಿ ಪೂರ್ವೋಕ್ತ ಸಮಸ್ತ ದೇವ

ಋಷಿಗಳೂ ನನ್ನಲ್ಲಿ ಸನ್ನಿಹಿತರಾಗಲಿ ಎಂದು ಅಭಿಪ್ರಾಯ. ಗಾಯತ್ರ್ಯಾಃ-ಗಾಯತ್ರೀಮಂತ್ರಕ್ಕೆ, ಗಾಯತ್ರೀ ಛಂದಃ-ಗಾಯತ್ರೀ ಛಂದಸ್ಸು, ವಿಶ್ವಾಮಿತ್ರ ಋಷಿಃ-ಗಾಧಿಪುತ್ರರಾದ ವಿಶ್ವಾಮಿತ್ರರು ದ್ರಷ್ಟೃಗಳಾದ ಋಷಿಗಳು, ಸವಿತಾದೇವತಾ-ಸೂರ್ಯಾಂತರ್ಗತನಾದ ಜಗತ್ಪ್ರಸವಕರ್ತನಾದ ನಾರಾಯಣನು ಪ್ರತಿಪಾದ್ಯದೇವತೆಯು. ಅಗ್ನಿರ್ಮುಖಂ-ನಾರಾಯಣನಿಗೆ ಅಗ್ನಿಯು ಮುಖವು ಎಂದರೆ ಮುಖವನ್ನು ಆಶ್ರಯಿಸಿರತಕ್ಕವನು ಮತ್ತು ಮುಖದಿಂದ ಹುಟ್ಟಿದವನು ಎಂದು ಅರ್ಥ. "ಯದಧೀನಾಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ" ಎಂಬ ನ್ಯಾಯದಿಂದ ಅಭೇದೋಕ್ತಿಯು ಹೇಳಲ್ಪಟ್ಟಿರುತ್ತೆ. ಬ್ರಹ್ಮಾ ಶಿರಃ-ಶಿರಸ್ಸಿನಿಂದ ಹುಟ್ಟಿದವನು ತದಾಶ್ರಿತನು ಚತುರ್ಮುಖಬ್ರಹ್ಮನು. ವಿಷ್ಣುರ್ಹೃದಯಂ – ಸೋಮಲತಾಭಿಮಾನಿಯಾದ ಚಂದ್ರನು ಹೃದಯದಿಂದ ಹುಟ್ಟಿ ಇದನ್ನು ಆಶ್ರಯಿಸಿರುತ್ತಾನೆ. ರುದ್ರಃ ಶಿಖಾ-ರುದ್ರದೇವರು ಶಿಖಾದಿಂದ ಹುಟ್ಟಿರುತ್ತಾನೆ. ಪೃಥಿವೀ ಯೋನಿಃ-ಇಲ್ಲಿ ಯೋನಿ ಶಬ್ದದಿಂದ ಪಾದವನ್ನು ತಿಳಿಯಬೇಕು. ಪಾದದಿಂದ ಭೂಮಿ ಹುಟ್ಟಿತು. ಅದನ್ನೇ ಆಶ್ರಯಿಸಿರುತ್ತೆ. ಪ್ರಾಣಾಪಾನವ್ಯಾನೋದಾನಸಮಾನಸಪ್ರಾಣಾ-ಪ್ರಾಣಾದಿ ಐದು ಉಪವಾಯುಗಳು ಮುಖ್ಯಪ್ರಾಣನಿಂದ ಸಹಿತವಾಗಿ ಗಾಯತ್ರೀಪ್ರತಿಪಾದ್ಯ ನಾರಾಯಣನ ಪ್ರಾಣದಿಂದ ಹುಟ್ಟಿದವುಗಳು ಮತ್ತು ಅದನ್ನು ಆಶ್ರಯಿಸಿರತಕ್ಕವುಗಳು. ಶ್ವೇತವರ್ಣಾ-ಇದು ಉಪಲಕ್ಷಣ. ಗಾಯತ್ರಿಯು ರಕ್ತವರ್ಣವುಳ್ಳವಳಾಗಿಯೂ, ಸಾವಿತ್ರೀ ಶುಕ್ಲವರ್ಣದವಳೂ, ಸರಸ್ವತಿಯು ಕೃಷ್ಣವರ್ಣದವಳಾಗಿಯೂ ಕಾಲಭೇದದಿಂದ ವ್ಯಕ್ತಳಾಗಿರುತ್ತಾಳೆ ಒಬ್ಬಳೇ ಆದ ಗಾಯತ್ರಿಯು. ಆದ್ದರಿಂದಲೇ ಹಿಂದೆ ಸರ್ವವರ್ಣೇ ಎಂತ ಹೇಳಿರುವುದು. ಸಾಂಖ್ಯಾಯನಸಗೋತ್ರಾ ಸಾಂಖ್ಯಾಯನಸ ಋಷಿಗಳ ಗೋತ್ರದಲ್ಲಿ ಉತ್ಪನ್ನಳಾಗಿರುವವಳು ಅಂದರೆ ಅವರ ದ್ವಾರಾ ಅಭಿವ್ಯಕ್ತಳಾದವಳೆಂತ ಅರ್ಥ. ಗಾಯತ್ರೀಚತುರ್ವಿಂಶತ್ಯಕ್ಷರಾ-ಗಾಯತ್ರೀಮಂತ್ರವು ಇಪ್ಪತ್ತುನಾಲ್ಕು ಅಕ್ಷರಗಳು ಅಂದರೆ ವರ್ಣಗಳುಳ್ಳ ವೇದದ ವಿಶೇಷರೂಪವಾದದ್ದು, ವರೇಣ್ಯಂ ಎಂಬಲ್ಲಿರುವ 'ಣ್ಯಂ' ಎಂಬ ವರ್ಣವನ್ನು ಣೀ, ಯಂ, ಎಂದು ವಿಭಾಗ ಮಾಡಿ ೨೪ ಅಕ್ಷರವೆಂತ ತಿಳಿಯಬೇಕೆಂದು ಸಾಂಪ್ರದಾಯಿಕ

ವಾದ ಅರ್ಥ (ವಿಷ್ಣುಷಡಕ್ಷರ ಮಂತ್ರದಂತೆ). ತ್ರಿಪದಾ–ಎಂಟು ಅಕ್ಷರಕ್ಕೆ ಒಂದು ಪಾದದಂತೆ ಮೂರು ಪಾದವುಳ್ಳದ್ದು. ಮಂತ್ರಪ್ರತಿಪಾದ್ಯದೇವತೆಯು ಶ್ವೇತದ್ವೀಪ, ಅನಂತಾಸನ, ವೈಕುಂಠ ಎಂಬ ಮೂರು ಸ್ಥಳವಿಶೇಷಗಳಲ್ಲಿ ಕ್ರಮವಾಗಿ ನಾರಾಯಣ, ವಾಸುದೇವ, ವೈಕುಂಠ ಎಂಬ ರೂಪದಿಂದ ಇರತಕ್ಕದ್ದು. ಇನ್ನು ಓಂಕಾರವನ್ನು ಒಂದು ಪಾದವೆಂತ ಎಣಿಸಿದಾಗ ನಾಲ್ಕು ಪಾದಗಳಾಗುತ್ತದೆ. ಆಗ ಧಾಮತ್ರಯಗಳಲ್ಲಿರುವ ಭಗವದ್ರೂಪಗಳು ಮತ್ತು ಭಿನ್ನಾಂಶರಾದ ಸರ್ವಜೀವರೊಳಗೆ ಇರುವ ರೂಪ ಒಂದು. ಹೀಗೆ ನಾಲ್ಕು ರೂಪಗಳು ನಾಲ್ಕು ಪಾದಕ್ಕೆ ಪ್ರತಿಪಾದ್ಯಗಳು. ಷಟ್ಕುಕ್ಷಿಃ–ಆರು ವಿಧವಾಗಿರತಕ್ಕವನು ಗಾಯತ್ರೀನಾಮಕ ವಿಷ್ಣುವು ಎಂದು ಉಪಾಸನ ಮಾಡಬೇಕು. ಅದು ಹೇಗೆ ಎಂದರೆ— ೧. ಗಾಯತ್ರೀ, ೨. ಭೂತ, ೩. ವಾಕ್, ೪. ಪೃಥಿವೀ, ೫. ಶರೀರ, ಮತ್ತು ೬. ಹೃದಯ ಎಂದು ಆರು ವಿಧ. ಇದರ ವಿವರ ಹೀಗೆ ತಿಳಿಯತಕ್ಕದ್ದು—

೧. ಗಾಯತ್ರೀ, ಸಾವಿತ್ರೀ, ಸರಸ್ವತಿಗಳಲ್ಲಿ ನಿಯಾಮಕವಾದ ಸೂರ್ಯನಂತೆ ಕಾಂತಿಯುಳ್ಳ ಭಗವದ್ರೂಪಗಳಿಗೆ 'ಗಾಯತ್ರೀ' ಎಂತ ಹೆಸರು.

೨. ಭೂತ ಎಂದರೆ ಪ್ರಾಣಿಗಳು. ಮತ್ಸ್ಯಾದಿ ಪ್ರಾಣಿಗಳ ಅವತಾರಗಳಿಗೆ 'ಭೂತ' ಎಂದು ಹೆಸರು. ಗಾಯತ್ರೀ ಮಂತ್ರದಲ್ಲಿರುವ ಇಪ್ಪತ್ತುನಾಲ್ಕು ಅಕ್ಷರಗಳಿಗೆ ಕ್ರಮವಾಗಿ ಕೇಶವಾದಿ ಇಪ್ಪತ್ತುನಾಲ್ಕು ಮೂರ್ತಿಗಳು ಹೇಗೆ ಪ್ರತಿಪಾದ್ಯರೋ ಹಾಗೇನೆ ಗಾಯತ್ರೀಮಂತ್ರಗತ ಹತ್ತು ಪದಗಳಿಂದ ಪ್ರತಿಪಾದ್ಯವಾದದ್ದು ದಶಾವತಾರಗಳು.

೩. ವಾಕ್-ವಾಗಭಿಮಾನಿಯಲ್ಲಿರತಕ್ಕ ಸ್ತ್ರೀರೂಪನಾದ ಹಯಗ್ರೀವದೇವರು 'ವಾಕ್' ಎನಿಸುತ್ತಾನೆ.

೪. ಪೃಥಿವೀ–ಪೃಥಿವೀಗೆ ಪ್ರವರ್ತಕವಾದ ಭೂಮಿಯೊಳಗೆ ಇರುವ ಶ್ರೀರೂಪಕ್ಕೆ 'ಪೃಥಿವೀ' ಎಂತ ಹೆಸರು.

೫. ಶರೀರ–ಸಮಸ್ತ ಜೀವರ ಅಂತರ್ಗತನಾಗಿ ವ್ಯಾಪಿಸಿರುವ ಭಗವತ್ ರೂಪಕ್ಕೆ 'ಶರೀರ' ಎಂದು ಹೆಸರು.

೬. ಮನಸ್ಸಿನಲ್ಲಿರುವ ರೂಪಕ್ಕೆ 'ಹೃದಯ'ವೆಂತ ಹೆಸರು. ಅಥವಾ ನಾಲ್ಕು ದಿಕ್ಕುಗಳಲ್ಲಿಯೂ ಮತ್ತು ಊರ್ಧ್ವ ಮತ್ತು ಅಧೋಭಾಗಗಳಲ್ಲಿರುವ ಭಗವದ್ರೂಪಗಳು ಆರು ಎಂತ ತಿಳಿಯಬೇಕು. ಹೀಗೆ ಒಬ್ಬನೇ ಅನೇಕ ರೂಪಗಳನ್ನು ವ್ಯಕ್ತಪಡಿಸುತ್ತಾನೆ.

ಪಂಚಶೀರ್ಷಾ–ಗಾಯತ್ರೀಮಂತ್ರವನ್ನು ಜಪಕಾಲದಲ್ಲಿ ಐದು ಭಾಗವಾಗಿ ನಿಲ್ಲಿಸಿ ಜಪಿಸಬೇಕೆಂದು ಧರ್ಮಶಾಸ್ತ್ರ ೧. ಪ್ರಣವ, ೨. ವ್ಯಾಹೃತಿ, ೩. ಪಾದಗಳು, ಒಟ್ಟು ಅವಸಾನಸ್ಥಳ ಅಂದರೆ ನಿಲ್ಲಿಸುವ ಸ್ಥಳವೆಂತ ಅಭಿಪ್ರಾಯ. ಕ್ರಮವಾಗಿ ಐದು ಭಾಗಗಳಿಂದ ಪ್ರತಿಪಾದ್ಯರೂಪಗಳು ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಎಂದು. ಇದೊಂದು ಕಲ್ಪ. ಅಷ್ಟಾಕ್ಷರವನ್ನು ಮೂರಾವರ್ತಿ ಉಚ್ಚರಿಸುವುದರಿಂದಲೂ, ಅಥವಾ ದ್ವಾದಶಾಕ್ಷರಮಂತ್ರವನ್ನು ಎರಡಾವರ್ತಿ ಉಚ್ಚರಿಸುವುದರಿಂದಲೂ ಗಾಯತ್ರೀ ಮಂತ್ರವು ಅಭಿವ್ಯಕ್ತವಾಯಿತೆಂದು ಎರಡು ಪಕ್ಷಗಳುಂಟು. ಮತ್ತು ವ್ಯಸ್ತ ಸಮಸ್ತವಾದ ವ್ಯಾಹೃತಿಯು ಎಂಟು ಅಕ್ಷರವಾಗುತ್ತದೆ. ಅಂಥಾ ವ್ಯಾಹೃತಿಯನ್ನು ಮೂರಾವರ್ತಿ ಉಚ್ಚರಿಸುವುದರಿಂದ ಇಪ್ಪತ್ತುನಾಲ್ಕು ಅಕ್ಷರಾತ್ಮಕ ಗಾಯತ್ರೀ ಮಂತ್ರವು ಅಭಿವ್ಯಕ್ತವಾಯಿತೆಂದು ಇನ್ನೊಂದು ಪಕ್ಷ. ಮೂರನೇ ಪಕ್ಷದಲ್ಲಿ ಪ್ರಣವ ಮತ್ತು ಮೂರು ವ್ಯಾಹೃತಿಗಳು, ಸಮಸ್ತ ವ್ಯಾಹೃತಿಗೆ ಕ್ರಮವಾಗಿ ಅನಿರುದ್ಧಾದಿ ಐದು ರೂಪಗಳು ಪ್ರತಿಪಾದ್ಯವಾದವುಗಳು.

ಇಂಥಾ ಗಾಯತ್ರೀ ಮಂತ್ರವು, ಉಪನಯನೇ–ಉಪನಯನಾಖ್ಯ ಕರ್ಮದಲ್ಲಿ ಬ್ರಾಹ್ಮಣ್ಯಾಧಿಕ್ಯವನ್ನುಂಟುಮಾಡುವುದರಲ್ಲಿ, ವಿನಿಯೋಗಃ–ಉಪಯೋಗಿಸತಕ್ಕದ್ದು. ಅಂದರೆ ಜಾತ್ಯಾ ಬ್ರಾಹ್ಮಣಕುಲದಲ್ಲಿ ಹುಟ್ಟಿದಮೇಲೆ ಪುನಃ ದ್ವಿಜತ್ವರೂಪವಿಶೇಷಬ್ರಾಹ್ಮಣಧರ್ಮ ಸಿದ್ಧಿಸತಕ್ಕ ಉಪನಯನ-ಸಂಸ್ಕಾರದಲ್ಲಿ ವಟುವಿಗೆ ಉಪದೇಶಿಸಲ್ಪಡತಕ್ಕ ಮುಖ್ಯಮಂತ್ರವಿದೆಂದು ಈ ಶ್ರುತಿಯ ಅರ್ಥ. ಭೂಃ........ಸ್ವರೋಂ ಎಂಬ ದಶೋಂಕಾರ ಗಾಯತ್ರಿಗೆ ಹಿಂದೆ ಪ್ರಾಣಾಯಾಮ ಅರ್ಥ ಬರೆದಿರುವ ಕಡೆ ಅರ್ಥ ಬರೆದಿರುತ್ತೆ. ಇನ್ನೂ ಅನೇಕ ವಿಶೇಷಗಳನ್ನು ಗುರುಗಳಿಂದ ತಿಳಿಯಬೇಕು.

ಓಂ ತತ್ಸವಿತುಃ ಅಂಗುಷ್ಠಾಭ್ಯಾಂ ನಮಃ। ವರೇಣ್ಯಂ ತರ್ಜನೀಭ್ಯಾಂ ನಮಃ। ಭರ್ಗೋದೇವಸ್ಯ ಮಧ್ಯಮಾಭ್ಯಾಂ ನಮಃ। ಧೀಮಹಿ ಅನಾಮಿಕಾಭ್ಯಾಂ ನಮಃ। ಧಿಯೋ ಯೋ ನಃ ಕನಿಷ್ಠಿಕಾಭ್ಯಾಂ ನಮಃ। ಪ್ರಚೋದಯಾತ್ ಕರತಲಕರಪೃಷ್ಠಾಭ್ಯಾಂ ನಮಃ॥ ಇತಿ ಕರನ್ಯಾಸಃ॥

ಓಂ ತತ್ಸವಿತುಃ ಹೃದಯಾಯ ನಮಃ। ವರೇಣ್ಯಂ ಶಿರಸೇ ಸ್ವಾಹಾ। ಭರ್ಗೋದೇವಸ್ಯ ಶಿಖಾಯೈ ವೌಷಟ್। ಧೀಮಹಿ ಕವಚಾಯ ಹುಮ್। ಧಿಯೋ ಯೋ ನಃ ನೇತ್ರಾಭ್ಯಾಂ ವೌಷಟ್। ಪ್ರಚೋದಯಾತ್ ಅಸ್ತ್ರಾಯಫಟ್॥ ಭೂರ್ಭುವಸ್ಸ್ವರೋಂ ಇತಿ ದಿಗ್ಬಂಧಃ। ಇತಿ ಹೃದಯಾದಿ ಷಡಂಗನ್ಯಾಸಃ॥

ಅಥ ಧ್ಯಾನಮ್ —

ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಸ್ಸರಸಿಜಾಸನಸನ್ನಿವಿಷ್ಟಃ।
ಕೇಯೂರವಾನ್ಮಕರಕುಂಡಲವಾನ್ ಕಿರೀಟೀ
ಹಾರೀಹಿರಣ್ಮಯವಪುರ್ಧೃತಶಂಖಚಕ್ರಃ॥ ಇತಿ ಧ್ಯಾನಮ್॥

ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಯಥಾಶಕ್ತಿ ಗಾಯತ್ರೀಮಂತ್ರಜಪಂ ಕರಿಷ್ಯೇ॥ (ಎಂದು ಸಂಕಲ್ಪಿಸಿ ದಕ್ಷಿಣಹಸ್ತದಿಂದ ನೀರನ್ನು ಬಿಡಬೇಕು. ಆಮೇಲೆ ಬಲಗೈ ಅನಾಮಿಕಬೆಟ್ಟಿನ ಬುಡದ ಪರ್ವವನ್ನು ಆರಂಭಿಸಿ ಮೇರುಪರ್ವತವೆಂದು ಕರೆಸಿಕೊಂಡಿರುವ ಅನಾಮಿಕಾ ಮತ್ತು ಮಧ್ಯದ ಬೆಟ್ಟಿನ ಮಧ್ಯದ ಪರ್ವಗಳಿಗೆ ಪ್ರದಕ್ಷಿಣಾಕಾರವಾಗಿ ಎಣಿಕೆಯನ್ನು ಮಾಡುತ್ತಾ ಗಾಯತ್ರೀಮಂತ್ರವನ್ನು ಜಪಿಸಬೇಕು. ೧,೦೦೦ ಉತ್ತಮ, ೧೦೦ ಮಧ್ಯಮ, ೧೦ ಅಧಮ. ಹತ್ತು ಸಂಖ್ಯೆಗಿಂತ ಕಡಿಮೆ ಜಪ ಮಾಡಕೂಡದು. ಹಸ್ತದ ಪರ್ವಗಳಿಂದಲೇ ಜಪಿಸಬೇಕೆಂದು ಪ್ರಮಾಣವು ವಿಧಿಸುತ್ತದೆ. ಅನ್ಯತ್ರ ಮಾಲಾದಿಗಳು ಜಪಕ್ಕೆ ಯೋಗ್ಯವೆನಿಸುತ್ತದೆ. ಅಲ್ಲದೆ ಗಾಯತ್ರೀಮಂತ್ರವನ್ನು ಜಪಿಸುವಾಗ ಐದು ಕಡೆ ಸ್ವಲ್ಪ ನಿಲ್ಲಿಸಿ ನಿಲ್ಲಿಸಿ ಜಪಿಸಬೇಕು. ಅದು ಹೇಗೆಂದರೆ

೧. ಓಂ, ೨. ಭೂರ್ಭುವಸ್ಸ್ವಃ, ೩. ತತ್ಸವಿತುರ್ವರೇಣ್ಯಂ, ೪. ಭರ್ಗೋ ದೇವಸ್ಯ ಧೀಮಹಿ, ೫. ಧಿಯೋ ಯೋ ನಃ ಪ್ರಚೋದಯಾತ್ ॥ ) ಎಂದು ಜಪಿಸಬೇಕು. ಕೊನೆಯಲ್ಲಿ ಗಾಯತ್ರೀ ಕೊನೆಯಲ್ಲಿ ಓಂಕಾರವನ್ನು ಗೃಹಸ್ಥರೂ ಮತ್ತು ಬ್ರಹ್ಮಚಾರಿಗಳೂ ಹೇಳಕೂಡದು ಎಂದು ಛಲಾರಿ ಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತೆ. ಹೇಳಿದರೆ ವಂಶ ನಷ್ಟವಾಗುತ್ತೆ. ಆದ್ದರಿಂದ ಏಕೋಂಕಾರ ಗಾಯತ್ರಿಯನ್ನು ಮಾತ್ರ ಜಪಿಸತಕ್ಕವರಾಗಬೇಕು. ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟ ಪ್ರಮಾಣವಾಕ್ಯಗಳನ್ನು ಮುಂದೆ ವಿವರಿಸಲಾಗುವುದು. ಈಗ ಗಾಯತ್ರೀ ಧ್ಯಾನಮಂತ್ರದ ಅರ್ಥವನ್ನು ವಿವರಿಸಲಾಗುತ್ತದೆ.

ಸವಿತೃಮಂಡಲಮಧ್ಯವರ್ತೀ- ಸೂರ್ಯಮಂಡಲದ ಒಳಗೆ ನಿಯಾಮಕ ನಾಗಿರುವ ಸರಸಿಜಾಸನ ಸನ್ನಿವಿಷ್ಟಃ–ಪದ್ಮಾಸನದಲ್ಲಿ ಕುಳಿತಿರುವ (ಅಥವಾ ನಾಭಿಕಮಲವೇ ಆಶ್ರಯವಾಗಿ ಉಳ್ಳ ಚತುರ್ಮುಖ ಬ್ರಹ್ಮನ ಒಳಗೆ ನಿಯಾ- ಮಕನಾಗಿರುವ) ( ' ಬ್ರಹ್ಮಸ್ಥೋ ಅಸ್ಯ ಜದ್ವಿಷ್ಣುಃ ' ಎಂಬ ಪ್ರಮಾಣದಂತೆ ) ಕೇಯೂರವಾನ್–ಭುಜಕೀರ್ತಿ ಎಂಬ ಆಭರಣವುಳ್ಳ, ಮಕರಕುಂಡಲವಾನ್- ಕಿವಿಯಲ್ಲಿ ಮೊಸಳೆಯಂತೆ ಆಕೃತಿಯುಳ್ಳ ಕುಂಡಲಗಳುಳ್ಳ, ಕಿರೀಟೀ–ಕಿರೀಟ ಉಳ್ಳ, ಹಾರೀ–ವೈಜಯಂತೀ, ವನಮಾಲಾದಿ ಹಾರಗಳನ್ನು ಧರಿಸಿರುವ, ಹಿರಣ್ಮಯವಪುಃ–ಭಂಗಾರದ ಕಾಂತಿಯಂತೆ ಕಾಂತಿಯುಳ್ಳ ಶರೀರವುಳ್ಳ ಅಥವ ಸುಖರೂಪವಾದ ದೇಹವುಳ್ಳ, ಧೃತಶಂಖಚಕ್ರಃ–ಧರಿಸಲ್ಪಟ್ಟ ಶಂಖಚಕ್ರ ವೆಂಬ ಆಯುಧವುಳ್ಳ (ದ್ವಿಭುಜವನ್ನು ಚಿಂತಿಸಬೇಕು— ಇಲ್ಲಿ ಮಾತ್ರ; ಬ್ರಹ್ಮ ಗಾಯತ್ರೀ ಮಂತ್ರದಲ್ಲಿ ಚತುರ್ಭುಜವನ್ನು ಚಿಂತಿಸಬೇಕು.) ನಾರಾಯಣಃ- ಮುಕ್ತರಿಗೆ ಆಶ್ರಯನಾದ ನಾರಾಯಣದೇವರು, ಸದಾ ಯಾವಾಗಲೂ, ಧ್ಯೇಯಃ–ಧ್ಯಾನಿಸಲ್ಪಡತಕ್ಕವನು.

ಗಾಯತ್ರೀಜಪವನ್ನು ಹಸ್ತಪರ್ವಗಳಿಂದಲೇ ಎಣಿಕೆ ಮಾಡಬೇಕು— ಎಂಬುದಕ್ಕೆ ಪ್ರಮಾಣವೇನೆಂದರೆ

" ಗಾಯತ್ರೀ ವೇದಮಾತಾ ಚ ವೇದಃ ಪರ್ವಸುಗೀಯತೇ ।
ಪರ್ವಭಿಸ್ತು ಜಪೇದ್ದೇವೀಂ ನ ಮಾಲಾಭಿಃ ಕದಾಚನ ॥
ಇತಿ ಮನುನಾ ॥ "

ಇದರ ತಾತ್ಪರ್ಯವೇನೆಂದರೆ ಗಾಯತ್ರೀ ಮಂತ್ರವು ಸಮಸ್ತ ವೇದಗಳಿಗೆ ತಾಯಿ ಅಂದರೆ ಮೂಲವಾದದ್ದು. ವೇದಾಭಿಮಾನಿ ದೇವತೆಗಳು ಹಸ್ತದ ಪರ್ವಗಳಲ್ಲಿ (ಗೆಣ್ಣುಗಳಲ್ಲಿ) ಇದ್ದಾರೆ ಎಂದು ಹೇಳಲ್ಪಡುತ್ತದೆ. ಆದ್ದರಿಂದ ಸಂಧ್ಯಾಂಗವಾದ ಗಾಯತ್ರೀಮಂತ್ರವನ್ನು ಪರ್ವಗಳಿಂದಲೇ ಜಪ ಮಾಡಬೇಕು. ಯಾವಾಗಲೇ ಆಗಲಿ ಜಪಮಾಲೆಗಳಿಂದ ಎಣಿಕೆ ಮಾಡಕೂಡದು ಎಂದು ಮನುವಿನಿಂದ ಉಕ್ತವಾಗಿರುತ್ತೆ. ಹಾಗಾದರೆ ಯಾವ ಪರ್ವದಿಂದ ಜಪಾರಂಭ ಮಾಡಬೇಕು ಎಂದರೆ ನಾರದರು ಹೀಗೆ ಹೇಳಿರುತ್ತಾರೆ: "ಮಧ್ಯಮಾ-ನಾಮಿಕಾ ಮಧ್ಯಂ ಪರ್ವಂ ಮೇರು ತಯಾ ಕೃತಮ್। ಆರಭ್ಯಾನಾಮಿಕಾ ಮೂಲಂ ಪ್ರದಕ್ಷಿಣತಯಾ ಜಪೇತ್॥"—ಬಲಹಸ್ತದ ಮಧ್ಯದ ಮತ್ತು ಅನಾಮಿಕಾಂಗುಲಿಗಳ ಮಧ್ಯದ ಪರ್ವವು ಮೇರು ಎಂದು ವ್ಯವಸ್ಥೆಯಾಗಿ ರುತ್ತೆ. ಆದ್ದರಿಂದ ಅನಾಮಿಕಾಂಗುಲಿಯ ಮೂಲಪರ್ವವನ್ನು ಆರಂಭಮಾಡಿ ಕ್ರಮವಾಗಿ ಮೇರುವಿಗೆ ಪ್ರದಕ್ಷಿಣೆಯಾಗಿರತಕ್ಕ ಹತ್ತು ಪರ್ವಗಳಿಂದ ಎಣಿಸುತ್ತ ಜಪಿಸಬೇಕು.

> ಪ್ರಾತಃ ನಾಭ್ಯಾಂ ಕರೌ ಕೃತ್ವಾ ಮಧ್ಯಾಹ್ನೇ ಹೃದಿಸಂಸ್ಥಿತೇ।
> ಸಾಯಾಹ್ನೇ ಮುಖಮಧ್ಯೇ ಚ ಗಾಯತ್ರೀಜಪಮುತ್ತಮಮ್॥
> ಕೃತ್ವೋತ್ಥಾನ ಕರೌ ಪ್ರಾತಃ ಸಾಯಂಚಾಧೋಮುಖೌ ಕರೌ।
> ಮಧ್ಯೇ ಸ್ಕಂಧಭುಜಾಭ್ಯಾಂ ತು ಜಪಏವಮುದಾಹೃತಃ॥
> ಭುಜಯೋಸ್ಕಂಧಯೋರ್ಮಧ್ಯೇ ಕರೌಮಧ್ಯೇ ಕೃತ್ವಾ ಜಪಃ ಕಾರ್ಯಃ।
> ಇತ್ಯರ್ಥಃ॥ —ಇತಿ ಸ್ಮೃತ್ಯರ್ಥಸಾಗರೇ

ಪ್ರಾತಃಕಾಲದಲ್ಲಿ ನಾಭಿಗೆ ಸಮನಾಗಿಯೂ, ಮಧ್ಯಾಹ್ನದಲ್ಲಿ ಹೃದಯ ದಲ್ಲಿಯೂ, ಸಾಯಂಕಾಲದಲ್ಲಿ ವದನಮಧ್ಯದಲ್ಲಿಯೂ ಹಸ್ತವನ್ನು ಇಟ್ಟು-ಕೊಂಡು ಜಪಿಸಬೇಕು. ಪ್ರಾತಃಕಾಲದಲ್ಲಿ ಹಸ್ತವನ್ನು ಮೇಲ್ಮುಖವಾಗಿ ಮಾಡಿಯೂ ಸಾಯಂಕಾಲದಲ್ಲಿ ಕೆಳಮುಖವಾಗಿಯೂ ಭುಜ ಮತ್ತು ಸ್ಕಂಧ ಗಳ ಮಧ್ಯದಲ್ಲಿ ಕರಗಳನ್ನು ಮಾಡಿ ಜಪಿಸಬೇಕು. ಜಪವೆಂದರೆ ಏನು? ಅಂದರೆ

ಜಕಾರೋ ಜನ್ಮವಿಚ್ಛೇದಃ ಪಕಾರಃ ಪಾಪನಾಶನಃ ।
ತಸ್ಮಾಜ್ಜಪ ಇತಿ ಪ್ರೋಕ್ತಃ ಜನ್ಮಪಾಪವಿನಾಶತಃ ॥ ಇತಿ ॥

ಯಾವ ಕ್ರಿಯೆಯು ಜನ್ಮ ಮತ್ತು ಪಾಪಗಳನ್ನು ಕಳೆಯುತ್ತದೆಯೋ ಅದು 'ಜಪ'ವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಅಂಥ ಜಪಕ್ರಿಯೆಯ ಲಕ್ಷಣವಾದರೂ ಏನು ? ಅಂದರೆ

ಧ್ಯಾಯೇಚ್ಚ ಮನಸಾ ಮಂತ್ರಂ ಜಿಹ್ವೋಷ್ಠಾ ನ ವಿಚಾಲಯೇತ್ ।
ನ ಕಂಪಯೇಚ್ಛಿರೋಗ್ರೀವಾ ದಂತಾನ್ನೈವ ಪ್ರಕಾಶಯೇತ್ ॥

ಮನಸ್ಸಿನಲ್ಲಿ ಮಂತ್ರ ಮತ್ತು ಪ್ರತಿಪಾದ್ಯದೇವತೆಯನ್ನು ಧ್ಯಾನ ಮಾಡಬೇಕು. ನಾಲಗೆ ತುಟಿಗಳನ್ನು ಚಲಿಸಬಾರದು. ಹಲ್ಲುಗಳನ್ನು ತೋರಿಸ ಬಾರದು. ಇದು ಜಪದ ಲಕ್ಷಣ ಉಚ್ಚನಾಗಿ ಉಚ್ಚರಿಸತಕ್ಕದ್ದು. ವಾಚನಿಕ ವೆಂತಲೂ, ಸ್ವಲ್ಪ ತುಟೀ ನಾಲಿಗೆಯನ್ನು ಅಲ್ಲಾಡಿಸುತ್ತಾ ಜಪಿಸುವುದು ಉಪಾಂಶು ಎಂತಲೂ ಕರೆಸಿಕೊಳ್ಳಲ್ಪಡುತ್ತದೆ. ಆದರೆ ಫಲ ಕಡಿಮೆ. ಮಾನಸಿಕ ಜಪಕ್ಕೆ ಅಧಿಕ ಫಲವೆಂತ ಅನೇಕ ಉಕ್ತಿಗಳುಂಟು. ಇಂಥ ಜಪ- ರೂಪವಾದ ಸಂಪತ್ತಿಗೆ ಕಾರಣಗಳು ಯಾವುವು ? ಎಂದರೆ,

ಮನಃ ಪ್ರಹರ್ಷಣಂ ಶೌಚಂ ಮೌನಂ ಮಂತ್ರಾರ್ಥಚಿಂತನಮ್ ।
ಅವ್ಯಗ್ರತ್ವಮನಾಲಸ್ಯಂ ಜಪಸಂಪತ್ತಿಹೇತವಃ

ಮನಸ್ಸಿನ ಪ್ರಸನ್ನತೆಯೂ. ಬಾಹ್ಯಾಭ್ಯಾಂತರ ಶೌಚವೂ, ಅನ್ಯವಿಷಯಕ ಗಳಾದ ಮಾತುಗಳನ್ನು ಆಡದೆ ಇರುವುದೂ, ಮಂತ್ರಾರ್ಥಗಳನ್ನು ಆಲೋಚಿ. ಸುವುದೂ, ಚಿತ್ತ ವ್ಯಗ್ರವಾಗದಿರುವಿಕೆಯೂ, ಸೋಮಾರಿಕೆ ಇಲ್ಲದಿರುವುದೂ ಜಪದ ಸಂಪತ್ತಿಗೆ ಕಾರಣಗಳಾಗುತ್ತವೆ. ಇವೇ ಮೊದಲಾದ ಅನೇಕ ನಿಯಮ ಗಳನ್ನು ಗುರುದ್ವಾರಾ ಉಪದೇಶ ಹೊಂದಿ ತ್ರಿಸಂಧ್ಯೆಗಳಲ್ಲಿಯೂ ತಪ್ಪದೆ ಗಾಯತ್ರೀಮಂತ್ರವನ್ನು ಜಪಿಸಬೇಕು. ಒಂದು ಸಾವಿರ ಉತ್ತಮವೆಂತಲೂ, ಒಂದುನೂರು ಮಧ್ಯಮವೆಂತಲೂ, ಹತ್ತು ಅಧಮಪಕ್ಷವೆಂತಲೂ ಜಪ- ಸಂಖ್ಯೆಯನ್ನು ಸದಾಚಾರಸ್ಮೃತಿಯು ವಿಧಿಸುತ್ತದೆ. ಹತ್ತು ಜಪಕ್ಕಿಂತಲೂ ಸಂಕೋಚ ಮಾಡಲು ಪ್ರಮಾಣವಿಲ್ಲ. "ಆಸೂರ್ಯದರ್ಶನಾತ್ತಿಷ್ಠೇತ್ ತತಸ್ತೂಪವಿಶೇತವಾ ॥"—ಪ್ರಾತಃಕಾಲ ಜಪಿಸುವಾಗ ಅರುಣೋದಯ

ಕಾಲಕ್ಕೆ ಅರ್ಘ್ಯವನ್ನು ಕೊಟ್ಟು ನಂತರ ಸೂರ್ಯೋದಯವಾಗುವವರೆಗೂ ನಿಂತು ಜಪಿಸಬೇಕು. ನಂತರ ನಿಂತಾದರೂ ಸರಿ ಅಥವಾ ಕೂತಾದರೂ ಜಪಿಸಬಹುದು. ಮಧ್ಯಾನ್ಹ ಸಾಯಂಕಾಲದಲ್ಲಿ ಕೂತು ಜಪಿಸಬೇಕು. ಹೀಗೆ ಜಪವನ್ನು ಮಾಡಿದಮೇಲೆ ಪುನಃ ಪೂರ್ವದಂತೆಯೇ ಪ್ರಾಣಾಯಾಮ ವನ್ನು ಮಾಡಿ ಅಂಗನ್ಯಾಸ, ಕರನ್ಯಾಸಗಳನ್ನು ಆಚರಿಸಿ, ಧ್ಯಾನಶ್ಲೋಕವನ್ನು ಹೇಳಿ "ಶ್ರೀವಿಷ್ಣುಪ್ರೀತ್ಯರ್ಥಂ ಯಥಾಶಕ್ತಿ ಗಾಯತ್ರೀಮಂತ್ರಜಪಃ ಸಂಪೂರ್ಣಃ" ಎಂದು ಹೇಳಿದ ತರುವಾಯದಲ್ಲಿ "ಅನೇನ ಗಾಯತ್ರೀಮಂತ್ರ ಜಪೇನ ಮನುನಾಮಕ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀ-ನಾರಾಯಣಃ ಪ್ರೀಯತಾಂ ಪ್ರೀತೋ ಭವತು । ಶ್ರೀಕೃಷ್ಣಾರ್ಪಣಮಸ್ತು ॥" ಎಂತ ಹೇಳಿ ನೀರನ್ನು ಬಿಡಬೇಕು. ನಂತರ ಉಪಸ್ಥಾನಾನಂತರ ಸಂಧ್ಯಾ ಸಮಾಪ್ತಿಗೊಳಿಸಿದಮೇಲೆ ಶ್ರೀನಾರಾಯಣಾಷ್ಟಾಕ್ಷರಮಂತ್ರವನ್ನು ಗಾಯತ್ರೀ ಜಪದ ಮೂರರಷ್ಟು ಜಪಿಸಬೇಕು. ಇದು ಋಗ್ವೇದಿಗಳ ಕ್ರಮ. ಯಜುರ್-ವೇದಿಗಳಾದರೋ ಗಾಯತ್ರೀಜಪ ಮುಗಿಸಿದ ತಕ್ಷಣ ಅಷ್ಟಾಕ್ಷರಮಂತ್ರವನ್ನು ಜಪಿಸಿದ ನಂತರ ಉಪಸ್ಥಾನ ಮಾಡಿ ಸಂಧ್ಯಾವಂದನೆಯನ್ನು ಮುಗಿಸ-ಬೇಕೆಂದು ಪ್ರಾಚೀನ ಸಂಪ್ರದಾಯಜ್ಞರ ಅಭಿಪ್ರಾಯವು.

ಹಿಂದೆ ಜಪಮಾಲೆಯಿಂದ ಗಾಯತ್ರೀಮಂತ್ರ ಜಪಿಸಕೂಡದೆಂದು ಪ್ರಮಾಣ ಹೇಳಿದ್ದು ವಿಶ್ವಾಮಿತ್ರಗಾಯತ್ರಿಗೆ ಮಾತ್ರ ಅನ್ವಯಿಸತಕ್ಕದ್ದು. ಅಷ್ಟಮಹಾಮಂತ್ರಾಂತರ್ಗತ ಬ್ರಹ್ಮಗಾಯತ್ರಿಯನ್ನು ಜಪಮಾಲೆಯಿಂದಲೇ ಜಪಿಸಬೇಕು; ಜಪಮಾಲೆ ಇಲ್ಲದಿದ್ದರೆ ಪರ್ವಗಳಿಂದ ಜಪಿಸಬೇಕು. ಸಂಧ್ಯಾಂಗ ಗಾಯತ್ರೀ ವ್ಯತಿರಿಕ್ತ ಇತರ ಎಲ್ಲಾ ಮಂತ್ರಗಳನ್ನೂ ತುಳಸೀ-, ಪದ್ಮಾಕ್ಷಾದಿ ಮಾಲೆಗಳಿಂದ ಜಪಿಸಬೇಕೆಂತಲೂ, ತುಳಸೀಮಾಲೆಯಿಂದ ಜಪಿ-ಸಿದರೆ ಅನಂತಫಲ ಪ್ರಾಪ್ತಿಯಾಗುತ್ತದೆಂತಲೂ ಅನೇಕ ಪ್ರಮಾಣಗಳು ಘಲಾರೀ ಧರ್ಮಶಾಸ್ತ್ರದಲ್ಲಿ ಹೇಳಿರುತ್ತೆ. ಆದರೆ ಜಪಮಾಲೆಯಿಂದ ಜಪಿಸುವ ಕ್ರಮ ಸರಿಯಾಗಿ ತಿಳಿಯತಕ್ಕದ್ದು ಕರ್ತವ್ಯವಾದ್ದರಿಂದ ಅದರ ವಿವರವನ್ನು ಸಪ್ರಮಾಣವಾಗಿ ಸ್ವಲ್ಪ ತಿಳಿಸಿ ನಂತರ ಸೂರ್ಯೋಪಸ್ಥಾನ ಮಂತ್ರಗಳನ್ನು ತಿಳಿಯೋಣ.

ನಾನ್ಯಾಂಗುಲಿಭಿರಾಕರ್ಷೇ—ನ್ನನಖೈಶ್ಚ ತಥಾ ಸ್ಪೃಶೇತ್ ।
ಮಧ್ಯಾಂಗುಲ್ಯಾಕರ್ಷಣಂ ಸ್ಯಾ—ತ್ಸರ್ವಸಿದ್ಧಿಪ್ರದಾಯಕಮ್ ॥ ೧ ॥
ಮುಖಮಾರಭ್ಯ ಪೃಷ್ಠಾಂತಂ ಜಪ್ತ್ವಾ ಮೇರೋಃ ಪ್ರದಕ್ಷಿಣಮ್ ।
ಭ್ರಾಮಯಿತ್ವಾ ಪುನರ್ವಕ್ತ್ರಂ ಪ್ರಾರಭ್ಯ ಜಪಮಾಚರೇತ್ ॥ ೨ ॥
ಮಧ್ಯಮಾನಾಮಿಕಾಂಗುಷ್ಠೈಃ ಜಪೇನ್ನಾನ್ಯೈಃ ಕದಾಚನ ।
ತರ್ಜನ್ಯಾ ನಸ್ಪೃಶೇನ್ಮಾಲಾಂ ಕನಿಷ್ಠೇನ ಕದಾಚನ ॥ ೩ ॥
ಜಪಮಾಲಾಪ್ರಗೋಪ್ತವ್ಯಾ ಜಪಕಾಲೇ ಸುಮೇಧಸಾ ।
ಪರದೃಷ್ಟಿಕೃತಾಮಾಲಾ ನಿಷ್ಫಲಾ ಜಪಕರ್ಮಣಿ ॥ ೪ ॥
ಅಕ್ಷಮಾಲಾಪ್ರಗೋಪ್ತವ್ಯಾ ಗುರೋಽಪಿ ನ ದರ್ಶಯೇತ್ ।
ಪಾತೇತು ಜಪಮಾಲಾಯಾಃ ಮೇರೋರುಲ್ಲಂಘನೇ ಸತಿ ॥ ೫ ॥
ಪ್ರಾಣಾಯಾಮತ್ರಯಂ ಕೃತ್ವಾ ಧೃತ್ವಾಪೋಶನಮಾಚರೇತ್ ।
ಅಪ್ರತಿಷ್ಠಿತಮಾಲಾಯಾ ತಜ್ಜಪೋ ನಿಷ್ಫಲೋ ಭವೇತ್ ॥ ೬ ॥
ನ ವಾಮೇನ ಸ್ಪೃಶೇನ್ಮಾಲಾಂ ಕರೇಣ ಬ್ರಾಹ್ಮಣಃ ಕ್ವಚಿತ್ ।
ಕರೇ ಕಂಠೇಽಥವಾಂಗುಲ್ಯಾಂ ಧಾರಯೇನ್ನ ಕದಾಚನ ॥ ೭ ॥

ಇತಿ ಬ್ರಹ್ಮತರ್ಕೇ ॥ (ಧರ್ಮಸ್ಮೃತ್ಯರ್ಥಸಾಗರೇ) ಉಕ್ತಮ್ ॥

ಇದರ ತಾತ್ಪರ್ಯ ಈ ರೀತಿ ಇರುತ್ತದೆ. ಅದೇನೆಂದರೆ

ಜಪಮಾಲೆಯಿಂದ ಎಣಿಕೆ ಮಾಡುವಾಗ ಮಣಿಗಳನ್ನು ಮಧ್ಯದ ಬೆಟ್ಟಿನಿಂದ ಆಕರ್ಷಣ ಮಾಡಬೇಕು. ಅದರಿಂದ ಸರ್ವಸಿದ್ಧಿಯುಂಟಾಗುತ್ತದೆ. ಬೇರೆ ಇನ್ಯಾವ ಅಂಗುಲಿಗಳಿಂದಲೂ ಎಣಿಕೆ ಮಾಡಬಾರದು. ಜಪಸರಕ್ಕೆ ಉಗುರುಗಳನ್ನು ತಗುಲಿಸಬಾರದು.॥ ೧ ॥ ಜಪಸರದ ಮಧ್ಯೆ ಗುರುತಿಗಾಗಿ ಹಾಕಿರುವ ಮಣಿಗೆ ಮೇರುವೆಂತ ಹೆಸರು. ಅದರ ಮುಖದಿಂದ ಜಪಾರಂಭ ಮಾಡಿ ಪೃಷ್ಠಪರ್ಯಂತ ಎಣಿಸಿ ನಂತರ ಮೇರುವನ್ನು ಪ್ರದಕ್ಷಿಣಾಕಾರವಾಗಿ ತಿರುಗಿಸಿ ಪುನಃ ಮುಖದಿಂದಲೇ ಜಪ ಆರಂಭ ಮಾಡಬೇಕು. ॥ ೨ ॥ ಮಧ್ಯಮಾ, ಅನಾಮಿಕಾ, ಅಂಗುಷ್ಠಗಳಿಂದ ಜಪಿಸಬೇಕು. (ಅಂದರೆ ಮಣಿಗಳನ್ನು ಎಣಿಸಬೇಕು.) ಜಪಮಣಿಯನ್ನು ತರ್ಜನೀಬೆಟ್ಟಿನಿಂದಲೂ, ಕಿರುಬೆರಳಿನಿಂದಲೂ ಯಾವಾಗಲೂ ಸ್ಪರ್ಶ ಮಾಡಬಾರದು. ॥ ೩ ॥ ಬುದ್ಧಿವಂತ.

ರಾದವರು ಜಪಕಾಲದಲ್ಲಿ ಜಪಸರವನ್ನು ಇತರರು ನೋಡದಂತೆ ಆಚ್ಛಾದನ ಮಾಡಿರಬೇಕು. ಜಪಕಾಲದಲ್ಲಿ ಜಪಮಾಲೆಯು ಪರರಿಗೆ ಕಾಣಿಸಿದರೆ ಜಪವು ವ್ಯರ್ಥವಾಗುತ್ತದೆ.॥ ೬ ॥ ಗುರುಗಳಿಗೆ ಸಹ ಜಪಮಾಲೆಯನ್ನು ತೋರಿಸ-ಬಾರದು. ಹಾಗೆ ಆಚ್ಛಾದನಾ ಮಾಡಬೇಕು. ಜಪಕಾಲದಲ್ಲಿ ಜಪಸರವು ಕೆಳಗೆ ಜಾರಿಬಿದ್ದರಾಗಲೀ ಮೇರುವನ್ನು ಉಲ್ಲಂಘಿಸಿ ಜಪಿಸಿದರಾಗಲೀ ಮೂರು ಪ್ರಾಣಾಯಾಮವನ್ನು ಮಾಡಿ ಜಪಸರವನ್ನು ತೆಗೆದುಕೊಂಡು ನಂತರ ಆಪೋಶನವನ್ನು ಆಚರಿಸಬೇಕು.॥ ೫ ॥ ಜಪಮಾಲೆಗೆ ಶಾಸ್ತ್ರವಿಧದಿಂದ ಪ್ರತಿಷ್ಠಾ ಮಾಡಿ ಜಪಕ್ಕೆ ಉಪಯೋಗಿಸಬೇಕು. ಪ್ರತಿಷ್ಠಾ ಮಾಡದಿರುವ ಸರದಿಂದ ಎಣಿಕೆ ಮಾಡಿದ ಜಪವು ನಿಷ್ಫಲವಾಗುತ್ತದೆ.॥ ೬ ॥ ಬ್ರಾಹ್ಮಣನು ಯಾವ ಕಾಲಕ್ಕೇ ಆಗಲೀ ಜಪಮಾಲೆಯನ್ನು ಎಡದ ಹಸ್ತದಿಂದ ಮುಟ್ಟ-ಬಾರದು. ಜಪಕ್ಕೆ ಉಪಯೋಗಿಸುವ ಸರವನ್ನು ಕರದಲ್ಲಿಯಾಗಲೀ, ಕೊರಳಲ್ಲಿ ಯಾಗಲೀ, ಅಂಗುಲಿಗಳಲ್ಲಿಯಾಗಲೀ ಧರಿಸಿಬಾರದು ಎಂದು ಬ್ರಹ್ಮತರ್ಕದಲ್ಲಿ ವಿಧಿಸಿರುತ್ತೆ.॥ ೭ ॥ ಜಪಮಾಲಾ ಪ್ರತಿಷ್ಠಾ ವಿಧಾನವನ್ನು ಸ್ಮೃತ್ಯರ್ಥ-ಸಾಗರದಲ್ಲಿ ನೋಡಿ ಅದರಂತೆ ಮಾಡಬೇಕು. ಗಾಯತ್ರೀಮಂತ್ರವನ್ನು ಐದು ಸ್ಥಳದಲ್ಲಿ ಸ್ವಲ್ಪ ನಿಲ್ಲಿಸಿ ಜಪಿಸಬೇಕು ಎನ್ನುವುದಕ್ಕೆ ಪ್ರಮಾಣಗಳು ಇಂತಿವೆ :

ಛಿನ್ನಪಾದಾತು ಗಾಯತ್ರೀ ಬ್ರಹ್ಮಹತ್ಯಾವಿನಾಶನೀ ।
ಅಚ್ಛಿನ್ನಪಾದಾಗಾಯತ್ರೀ ಬ್ರಹ್ಮಹತ್ಯಾಂ ಪ್ರಯಚ್ಛತಿ ॥ ಇತಿ ಛಲಾರೀ
ಪಂಚಾವಸಾನಾ ಗಾಯತ್ರೀ ಪಂಚಪಾತಕನಾಶನೀ ।
ಪಂಚಾವಸಾನರಹಿತಾ ಪಂಚಪಾತಕದಾಯಿನೀ ॥—ಸ್ಮೃತಿಮುಕ್ತಾವಲಿ

ಪಂಚಾವಸಾನ ಸಹಿತವಾಗಿ ಜಪಿಸಿದ ಗಾಯತ್ರೀಮಂತ್ರವು ಬ್ರಹ್ಮಹತ್ಯಾದಿ ಪಂಚಮಹಾಪಾತಕಗಳನ್ನು ನಾಶಗೊಳಿಸುತ್ತದೆ. ಪಂಚಾವಸಾನರಹಿತವಾದದ್ದು ಬ್ರಹ್ಮಹತ್ಯಾದಿ ಪಾತಕಗಳನ್ನು ನಮಗೆ ಕೊಡುತ್ತದೆಂದು ಇದರ ಮುಖ್ಯ ತಾತ್ಪರ್ಯ. ಅನೇಕರು ಗಾಯತ್ರಿಯನ್ನು ಜಪಿಸುವಾಗ ಯಜ್ಞೋಪವೀತ ವನ್ನು ಹಿಡಿದು ಜಪಿಸುತ್ತಾರೆ. ಅದು ಬಹಳ ಅನರ್ಥಕ್ಕೆ ಕಾರಣವಾಗುತ್ತದೆ. ಆದ್ದರಿಂದ ಯಜ್ಞೋಪವೀತ ಹಿಡಿಯಬಾರದು. ಇದಕ್ಕೆ ಶ್ರೀ ಛಲಾರೀಯ ದಲ್ಲಿ ಹೀಗೆ ವಾಕ್ಯವಿರುತ್ತದೆ :

ಯಜ್ಞೋಪವೀತಹಸ್ತೇನ ಗಾಯತ್ರೀಂ ಯೋ ಜಪೇನ್ನರಃ ।
ಸಬ್ರಹ್ಮಹಾಸಮುದ್ದಿಷ್ಟಃ ಸರ್ವಕರ್ಮಸುಗರ್ಹಿತಃ ॥

ಯಾವಾತನು ಯಜ್ಞೋಪವೀತವನ್ನು ಹಿಡಿದಿರತಕ್ಕ ಹಸ್ತದಿಂದ ಗಾಯತ್ರಿಯನ್ನು ಜಪಿಸುತ್ತಾನೋ ಅವನು ಬ್ರಹ್ಮಹತ್ಯಾ ಮಾಡಿದವನಾಗುತ್ತಾನೆ ಮತ್ತು ಸಮಸ್ತ ಕರ್ಮಗಳಲ್ಲಿ ನಿಂದಿತನಾಗುತ್ತಾನೆ ಎಂತ ಅರ್ಥ. ಸಂಧ್ಯಾಂಗ ಗಾಯತ್ರಿಯನ್ನು ಜಪಿಸುವಾಗ ಆದಿಯಲ್ಲಿ ಓಂಕಾರಸಹಿತವಾದ ಏಕೋಂಕಾರ ಗಾಯತ್ರಿಯನ್ನು ಗೃಹಸ್ಥರು ಮತ್ತು ಬ್ರಹ್ಮಚಾರಿಗಳು ಜಪಿಸಬೇಕು. ಕೊನೆಯಲ್ಲಿ ಪ್ರಣವವನ್ನು ಹೇಳಕೂಡದು ಎಂದು ಈ ಪ್ರಮಾಣವು ಹೇಳುತ್ತದೆ.

ತತ್ರೈಕಾಪ್ರಣವಾಗ್ರಾಹ್ಯಾ ಗೃಹಸ್ಥೈರ್ಬ್ರಹ್ಮಚಾರಿಭಿಃ ।
ಗೃಹಸ್ಥೋ ಬ್ರಹ್ಮಚಾರೀ ಚ ಪ್ರಣವಾದ್ಯಾಮಿಮಾಂ ಜಪೇತ್ ॥
ಅಂತೇ ಯಃ ಪ್ರಣವಾಂ ಕುರ್ಯಾತ್ ನಾಸೌವೃದ್ಧಿಮವಾಪ್ನುಯಾತ್ ॥
ಇತಿ ಛಲಾರೀಯೇ ॥

ಅಂತ್ಯದಲ್ಲಿ ಓಂಕಾರ ಹೇಳಿ ಗಾಯತ್ರೀ ಜಪಿಸತಕ್ಕವನು ಅಭಿವೃದ್ಧಿಯನ್ನು ಹೊಂದುವುದಿಲ್ಲ.

ಗಾಯತ್ರೀ ಮಂತ್ರಾರ್ಥವನ್ನು ಹೇಳುವ ಶ್ರೀಮದಾಚಾರ್ಯರ ಋಗ್-ಭಾಷ್ಯದ ಶ್ಲೋಕವನ್ನು ಗಾಯತ್ರೀ ಧ್ಯಾನಶ್ಲೋಕ ಪಠಿಸಿದ ತರುವಾಯ ಹೇಳುವುದು ಶಿಷ್ಟರ ವಾಡಿಕೆಯಲ್ಲಿರುತ್ತೆ. ಆದ್ದರಿಂದ ಆ ಶ್ಲೋಕಗಳನ್ನೂ ಈ ಮುಂದೆ ಕೊಡಲಾಗಿದೆ.

ಓಮಶೇಷಗುಣಾಧಾರ ಇತಿ ನಾರಾಯಣೋಽಸ್ಯಸೌ ॥
ಪೂರ್ಣೋಭೂತಿವರೋಽನಂತ—ಸುಖೋ ಯದ್ವ್ಯಾಹೃತೀರಿತಃ ।
ಗುಣೈಸ್ತತಃಪ್ರಸವಿತಾ ವರಣೀಯೋ ಗುಣೋನ್ನತೇಃ ॥
ಭಾರತಿಜ್ಞಾನರೂಪತ್ವಾತ್ ಭರ್ಗೋ ಧ್ಯೇಯೋಯಮೀಶ್ವರಃ ।
ಪ್ರೇರಕೋಽಶೇಷಬುದ್ಧೀನಾಂ ಸಗಾಯತ್ರ್ಯರ್ಥ ಈರಿತಃ ॥

ಈ ಶ್ಲೋಕಗಳನ್ನು ಅನುಸರಿಸಿಯೇ ಹಿಂದೆ ಗಾಯತ್ರೀ ಅರ್ಥವನ್ನು ನಿರೂಪಿಸಲಾಗಿದೆ. ಇನ್ನು ಋಗ್ವೇದಿಗಳು ಮಾಡಬೇಕಾದ ಸೂರ್ಯೋಪಸ್ಥಾನ ಮಂತ್ರಗಳನ್ನು ಬರೆದು ನಂತರ ಅರ್ಥವನ್ನು ವಿವರಿಸಲಾಗುತ್ತದೆ.

ಪೂರ್ವಾಭಿಮುಖವಾಗಿ ನಿಂತುಕೊಂಡು ಸೂರ್ಯೋಪಸ್ಥಾನವನ್ನು ಮಾಡಬೇಕು.

(೧) ಜಾತವೇದಸ ಇತ್ಯಸ್ಯ ಮಂತ್ರಸ್ಯ ಕಶ್ಯಪಋಷಿಃ। ದುರ್ಗಾ ಜಾತವೇದಾಗ್ನಿರ್ದೇವತಾ। ತ್ರಿಷ್ಟುಪ್ ಛಂದಃ। ಸೂರ್ಯೋಪಸ್ಥಾನೇ ವಿನಿಯೋಗಃ॥

ಹರಿಃ ಓಮ್॥ ಜಾತವೇದಸೇ ಸುನವಾಮ ಸೋಮಮರಾತೀ-ಯತೋ ನಿ ದಹಾತಿ ವೇದಃ। ಸ ನಃ ಪರ್ಷದತಿ ದುರ್ಗಾಣಿ ವಿಶ್ವಾನಾ-ನಾವೇವ ಸಿಂಧುಂ ದುರಿತಾತ್ಯಗ್ನಿಃ॥

(೨) ತಚ್ಛಂಯೋರಿತ್ಯಸ್ಯ ಶಂಯುರ್ವಿಶ್ವೇದೇವಾಃ ಶಕ್ವರೀಛಂದಃ ಶಾಂತ್ಯರ್ಥೇ ಜಪೇ ವಿನಿಯೋಗಃ॥

ಓಂ ತಚ್ಛಂಯೋರಾವೃಣೀಮಹೇ ಗಾತುಂ ಯಜ್ಞಾಯ ಗಾತುಂ ಯಜ್ಞಪತಯೇ। ದೈವೀ ಸ್ವಸ್ತಿರಸ್ತು ನಃ॥ ಸ್ವಸ್ತಿರ್ಮಾನುಷೇಭ್ಯಃ ಊರ್ಧ್ವಂ ಜಿಗಾತು ಭೇಷಜಂ। ಶನ್ನೋ ಅಸ್ತು ದ್ವಿಪದೇ ಶಂ ಚತುಷ್ಪದೇ॥

(೩) ಓಂ ನಮೋ ಬ್ರಹ್ಮಣ ಇತ್ಯಸ್ಯ ಮಂತ್ರಸ್ಯ ವಾಮದೇವೋ ಋಷಿಃ। ಲಿಂಗೋಕ್ತ ದೇವತಾ। ತ್ರಿಷ್ಟುಪ್ ಛಂದಃ। ಸಂಧ್ಯೋಪ-ಸ್ಥಾನೇ ವಿನಿಯೋಗಃ॥

ಓಂ ನಮೋ ಬ್ರಹ್ಮಣೇ। ನಮೋ ಅಸ್ತ್ವಗ್ನಯೇ। ನಮಃ ಪೃಥಿವ್ಯೈ। ನಮ ಓಷಧೀಭ್ಯಃ॥ ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಮಹತೇ ಕರೋಮಿ॥ (ಎಂತ ಹೇಳುತ್ತಾ ಮೂರು ಸುತ್ತನ್ನು ಪ್ರದಕ್ಷಿಣಾಕಾರವಾಗಿ ಹಾಕಬೇಕು.)

## ಅಥ ದಿಗುಪಸ್ಥಾನಂ

ಓಂ ನಮಃ ಪ್ರಾಚ್ಯೈದಿಶೇ ಯಾಶ್ಚ ದೇವತಾಃ ಏತಸ್ಯಾಂ ಪ್ರತಿ-ವಸಂತಿ ಏತಾಭ್ಯಶ್ಚ ನಮೋ ನಮಃ। ಓಂ ನಮಃ ದಕ್ಷಿಣಾಯೈದಿಶೇ ಯಾಶ್ಚ ದೇವತಾಃ ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮಃ॥

ಓಂ ನಮಃ ಪ್ರತೀಚ್ಯೈದಿಶೇ ಯಾಶ್ಚ ದೇವತಾಃ ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮಃ ॥ ಓಂ ನಮಃ ಉದೀಚ್ಯೈದಿಶೇ ಯಾಶ್ಚ ದೇವತಾಃ ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮಃ ॥ ಓಂ ನಮಃ ಊರ್ಧ್ವಾಯೈದಿಶೇ ಯಾಶ್ಚ ದೇವತಾಃ ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮಃ ॥ ಓಂ ನಮಃ ಅಧರಾಯೈ ದಿಶೇ ಯಾಶ್ಚ ದೇವತಾಃ ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮಃ ॥ ಓಂ ನಮಃ ಅಂತರಿಕ್ಷಾಯೈದಿಶೇ ಯಾಶ್ಚ ದೇವತಾಃ ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮಃ ॥ ಓಂ ನಮಃ ಅವಾಂತರಾಯೈದಿಶೇ ಯಾಶ್ಚ ದೇವತಾಃ ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮಃ॥ ಸಂಧ್ಯಾಯೈ ನಮಃ, ಗಾಯತ್ರ್ಯೈ ನಮಃ, ಸಾವಿತ್ರ್ಯೈ ನಮಃ, ಸರಸ್ವತ್ಯೈ ನಮಃ, ಸರ್ವಾಭ್ಯೋ ದೇವತಾಭ್ಯೋ ನಮಃ, ದೇವಿಭ್ಯೋ ನಮಃ, ಋಷಿಭ್ಯೋ ನಮಃ, ಮುನಿಭ್ಯೋ ನಮಃ, ಗುರುಭ್ಯೋ ನಮಃ, ಮಾತೃಭ್ಯೋ ನಮಃ, ಪಿತೃಭ್ಯೋ ನಮಃ, ಅಚಾರ್ಯೇಭ್ಯೋ ನಮಃ, ಕಾಮೋಕಾರ್ಷೀನ್ನಮೋನಮಃ, ಮನ್ಯುರಕಾರ್ಷೀನ್ನಮೋ ನಮಃ॥ ಓಂ ನಮೋ ಭಗವತೇ ವಾಸುದೇವಾಯ ॥ (ಎಂತ ದೇವತಾವಂದನೆಯನ್ನು ಮಾಡಬೇಕು. ನಂತರ ಮುಂದೆ ಬರೆದಿರುವ ಶ್ಲೋಕಗಳಿಂದ ದೇವತಾ ಪ್ರಾರ್ಥನಾ ಮಾಡಬೇಕು.)

ಯಾಂ ಸದಾ ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ।
ಸಾಯಂಪ್ರಾತಃ ನಮಸ್ಯಂತಿ ಸಾಮಾಸಂಧ್ಯಾಭಿರಕ್ಷತು ॥ ೧ ॥
ಶ್ರೀಸಾಮಾಸಂಧ್ಯಾ ಅಭಿರಕ್ಷತು ಓಂ ನಮಃ ॥
ಬ್ರಹ್ಮಣ್ಯೋ ದೇವಕೀಪುತ್ರೋ ಬ್ರಹ್ಮಣ್ಯೋ ಮಧುಸೂದನಃ ।
ಬ್ರಹ್ಮಣ್ಯಃ ಪುಂಡರೀಕಾಕ್ಷೋ ಬ್ರಹ್ಮಣ್ಯೋ ವಿಷ್ಣುರಚ್ಯುತಃ ॥ ೨ ॥
ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥ ೩ ॥
ಕ್ಷೀರೇಣಸ್ನಾಪಿತೇ ದೇವಿ ಚಂದನೇನ ವಿಲೇಪಿತೇ ।
ಬಿಲ್ವಪತ್ರಾರ್ಚಿತೇ ದೇವಿ ದುರ್ಗೇಹಂ ಶರಣಂ ಗತಃ ॥
ಶ್ರೀದುರ್ಗೇಹಂ ಶರಣಂ ಗತಃ ಓಂ ನಮಃ ॥ ೪ ॥

## ಗಾಯತ್ರ್ಯುದ್ವಾಸನಮ್

ಅಸ್ಯ ಶ್ರೀ ಗಾಯತ್ರೀ ಉದ್ವಾಸನಮಂತ್ರಸ್ಯ ವಾಮದೇವಋಷಿಃ ಗಾಯತ್ರೀ ದೇವತಾ, ಅನುಷ್ಟುಪ್ ಛಂದಃ, ಗಾಯತ್ರ್ಯುದ್ವಾಸನೇ ವಿನಿಯೋಗಃ ॥

ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತಮೂರ್ಧನಿ ।
ಬ್ರಾಹ್ಮಣೇಭ್ಯೋಽಭ್ಯನುಜ್ಞಾತಾ ಗಚ್ಛದೇವಿ ಯಥಾ ಸುಖಮ್ ॥೧॥
ಶ್ರೀ ಗಚ್ಛದೇವಿ ಯಥಾ ಸುಖಂ ಗಚ್ಛತು ಓಂ ನಮಃ ॥
ಸರ್ವ ವೇದೇಷು ಯತ್ಪುಣ್ಯಂ ಸರ್ವ ತೀರ್ಥೇಷು ಯತ್ಫಲಮ್ ।
ತತ್ಫಲಂ ಸಮವಾಪ್ನೋತಿ ಸ್ತುತ್ವಾ ದೇವಂ ಜನಾರ್ದನಮ್ ॥ ೨ ॥
ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್ ।
ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥
ಶ್ರೀಕೇಶವಂ ಪ್ರತಿಗಚ್ಛತು ಓಂ ನಮಃ ॥ ೩ ॥
ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।
ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥ ೪ ॥
ನಮೋಽಸ್ತ್ವನಂತಾಯ ಸಹಸ್ರಮೂರ್ತಯೇ
ಸಹಸ್ರಪಾದಾಕ್ಷಿಶಿರೋರುಬಾಹವೇ ।
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ
ಸಹಸ್ರಕೋಟಿಯುಗಧಾರಿಣೇ ನಮಃ ॥ ೫ ॥
ಓಂ ಭದ್ರಂ ನೋ ಅಪಿವಾತಯ ಮನಃ ॥
ಓಂ ಸರ್ವತಃ ಶಾಂತಿಃ ಶಾಂತಿಃ ಶಾಂತಿಃ ॥ ಸರ್ವಾರಿಷ್ಟ ಶಾಂತಿರಸ್ತು ॥ ಸಮಸ್ತಮಂಗಳಾವಾಪ್ತಿರಸ್ತು ॥ ಚತುಸ್ಸಾಗರಪರ್ಯಂತಂ ಗೋ-ಬ್ರಾಹ್ಮಣೇಭ್ಯಃ ಶುಭಂ ಭವತು ॥

(ಎಂತ ಪಠಿಸಿ ಪ್ರವರೋಚ್ಚಾರಣಪೂರ್ವಕ ಗೋತ್ರ ನಾಮಗಳನ್ನು ಹೇಳಿ ಭೂಮಿಯನ್ನು ಮುಟ್ಟಿ ನಮಸ್ಕರಿಸಬೇಕು )

ಅದರ ಕ್ರಮವು ಹೀಗೆ ತಿಳಿಯತಕ್ಕದ್ದು —

" ಆಂಗೀರಸ ಬಾರ್ಹಸ್ಪತ್ಯ ಭಾರದ್ವಾಜ ತ್ರಯಾರ್ಷೇಯ ಪ್ರವರಾನ್ವಿತ ............ಗೋತ್ರೋತ್ಪನ್ನಃ ಆಶ್ವಲಾಯನಸೂತ್ರಃ ಋಕ್-ಶಾಖಾಧ್ಯಾಯೀ ................ಶರ್ಮ ಅಹಂ ಭೋ ಅಭಿವಾದಯೇ ಅಭಿವಾದಯಾಮಿ ॥ " ಎಂತ ಹೇಳಿ ನಮಸ್ಕರಿಸತಕ್ಕದ್ದು.

(ಇಲ್ಲಿ ಭಾರದ್ವಾಜಗೋತ್ರದ ಪ್ರವರವನ್ನು ಬರೆಯಲಾಗಿದೆ. ಏಕಾರ್ಷೇಯ ತ್ರಯಾರ್ಷೇಯ ಪಂಚಾರ್ಷೇಯ ಸಪ್ತಾರ್ಷೇಯವಾಗಿ ಭಿನ್ನಭಿನ್ನವಾಗಿ ಅನೇಕ ಗೋತ್ರಗಳು ಉಂಟು. ಆಯಾ ಗೋತ್ರದವರು ಅವರವರ ಗೋತ್ರದ ಆರ್ಷೇಯಗಳನ್ನು ಉಚ್ಚರಿಸಿ "...........ಪ್ರವರಾನ್ವಿತ" ಎಂತ ಹೇಳಿ ತಮ್ಮತಮ್ಮ ಗೋತ್ರಗಳನ್ನು ಹೇಳಿ "ಗೋತ್ರೋತ್ಪನ್ನಃ ಆಶ್ವಲಾಯನ ಸೂತ್ರಃ...." ಇತ್ಯಾದಿಯಾಗಿ ಉಚ್ಚರಿಸತಕ್ಕದ್ದು ಕರ್ತವ್ಯವು.)

ಈಗ ಕ್ರಮವಾಗಿ ಅರ್ಥವನ್ನು ತಿಳಿಯೋಣ—

೧. " ಜಾತವೇದಸ.... " ಎಂಬ ಮಂತ್ರಕ್ಕೆ ಕಶ್ಯಪರು ಋಷಿಗಳು. ದುರ್ಗಾದೇವೀ ಮತ್ತು ಜಾತವೇದನಾಮಕ ಅಗ್ನಿಯು ದೇವತೆಯು. ತ್ರಿಷ್ಟುಪ್ ಛಂದಸ್ಸು. ಸೂರ್ಯೋಪಸ್ಥಾನ ಮಾಡುವಾಗ, ವಿನಿಯೋಗಃ-ಹೇಳಲ್ಪಡ ತಕ್ಕದ್ದು.

ಮಂತ್ರಪದವಿಭಾಗ : ಜಾತವೇದಸೇ, ಸುನವಾಮ, ಸೋಮಂ, ಅರಾತೀಯತಃ, ನಿದಹಾತಿ, ವೇದಃ ಸಃ, ನಃ, ಪರ್ಷತು, ಅತಿದುರ್ಗಾಣಿ, ವಿಶ್ವಾ, ನಾವಾ, ಇವ, ಸಿಂಧುಂ, ದುರಿತಾ, ಅತಿ, ಅಗ್ನಿಃ ॥

ಅರ್ಥ : ಯಃ-ಯಾವ, ವೇದಃ-ಸಕಲವೇದಪ್ರತಿಪಾದ್ಯನಾದ, ಅಗ್ನಿಃ-ಅಗ್ನಿಯ ಅಂತರ್ಯಾಮಿಯಾದ ಸರ್ವೋತ್ಕೃಷ್ಟನಾದ ಅಗ್ನಿಶಬ್ದವಾಚ್ಯನಾದ ನಾರಾಯಣನೋ, ಸಃ-ಅಂಥ ಪರಮಾತ್ಮನು, ಲೋಕದಲ್ಲಿ, ಸಿಂಧುಂ ಸಮುದ್ರವನ್ನು , ನಾವಾ-ಹಡಗಿನಿಂದ ಅಥವಾ ದೋಣಿಯಿಂದ, ನಾವಿಕ ಇವ-ನಾವಿಕನು ಹೇಗೆ ದಾಟಿಸುತ್ತಾನೋ ಹಾಗೆ, ವಿಶ್ವಾ-ಸಮಸ್ತವಾದ, ದುರ್ಗಾಣಿ-ದುಃಖದಿಂದ ದಾಟಲು ಶಕ್ಯವಾದ, ದುರಿತಾನಿ-ಪಾಪಗಳನ್ನು , ಅತಿಪರ್ಷತು-ಅತ್ಯಂತವಾಗಿ ಅಂದರೆ ನಿಶ್ಶೇಷವಾಗಿ ನಾಶಮಾಡತಕ್ಕವನು ಆಗಲಿ. ಕಿಂಚ-ಮತ್ತು, ಅರಾತೀಯತಃ-ನನಗೆ ಶತ್ರುಗಳನ್ನು ಉಂಟು-

ಮಾಡಬೇಕೆಂದು ಇಚ್ಛೆ ಮಾಡುವ ಶತ್ರುಗಳಾದ ಪುರುಷರನ್ನು, ಅಥವಾ ಅದಾಂತತ್ವವನ್ನು ಅಂದರೆ ಅಜಿತೇಂದ್ರಿಯತ್ವವನ್ನು ಸಂಪಾದನ ಮಾಡುವ ದುಷ್ಟವಾದ ಮನಸ್ಸೇ ಮೊದಲಾದ ಆಂತರಿಕ ಶತ್ರುಗಳನ್ನು, ನಿದಹಾತಿ-ನಿತರಾಂ ಭಸ್ಮವನ್ನಾಗಿ ಮಾಡುತ್ತಾನೆಯೋ, ಅಂಥಾ ಜಾತವೇದಸೇ-ಸೃಷ್ಟ ವಾದ ಸರ್ವವನ್ನೂ ತಿಳಿಯತಕ್ಕವನಾದ್ದರಿಂದಲೂ, ಯಾವಾತನಿಂದ ವೇದಗಳು ಅಭಿವ್ಯಕ್ತವಾದವೋ ಆದ್ದರಿಂದಲೂ ಜಾತವೇದಸ ಶಬ್ದವಾಚ್ಯನಾದ ಪರ-ಮಾತ್ಮನಿಗೋಸ್ಕರ, ಸೋಮಂ-ಸೋಮಲತಾವಿಶೇಷವನ್ನು ಸೋಮರಸವನ್ನು ಉತ್ಪತ್ತಿ ಮಾಡಲೋಸುಗ, ಸುನವಾಮ-ನಿಷ್ಪೀಡನವನ್ನು ಮಾಡುತ್ತೇವೆ. ಅಥವಾ ಸೋಮರಸವನ್ನು ಸ್ತೋತ್ರಮಾಡುತ್ತೇವೆ, ಅಥವಾ ಸೋಮಂ-ಚಂದ್ರನಿಂದ ಅಭಿಮನ್ಯವಾದ ಮನಸ್ಸನ್ನು, ಸುನವಾಮ-ಭಗವದ್ವಿಷಯಕ ವಾಗಿ ಮಾಡುತ್ತೇವೆ. ಅಂದರೆ ಶ್ರೀಹರಿಯ ಪ್ರೀತಿಯನ್ನು ಪಡೆಯಲೋಸುಗ ಮನಸ್ಸನ್ನು ಶ್ರೀರಮಣನಲ್ಲಿ ಎರಗುವಂತೆ ಮಾಡುತ್ತೇವೆ.

೨. "ತಚ್ಛಂಯೋ...." ಎಂಬ ಮಂತ್ರಕ್ಕೆ ಶಂಯುಃ ಎಂಬುವರು ಋಷಿಗಳು. ವಿಶ್ವೇದೇವತೆಗಳು ಪ್ರತಿಪಾದ್ಯರು, ಶಕ್ವರೀನಾಮಕ ಛಂದಸ್ಸು, ಕ್ಷೇಮಪ್ರಾಪ್ತಿಗಾಗಿ ಜಪ ಮಾಡುವ ಕರ್ಮದಲ್ಲಿ ವಿನಿಯೋಗಿಸಲ್ಪಡತಕ್ಕದ್ದು.

**ಅರ್ಥ :** ಓಂ ತತ್-ಪ್ರಣವ ಮತ್ತು ಗಾಯತ್ರೀ ಪ್ರತಿಪಾದ್ಯವಾದ ಭಗವಂತನ, ರೂಪಂ-ಆಕೃತಿಯನ್ನು, ಶಂಯೋಃ-ಸುಖಪ್ರಾಪ್ತಿಗೋಸ್ಕರ ವಾಗಿ, ಆವೃಣೀಮಹೇ-ಸಮ್ಯಕ್ ಶರಣುವನ್ನು ಹೊಂದುತ್ತೇವೆ ಅಥವಾ ವರ್ಣನೆ ಮಾಡುತ್ತೇವೆ. ಯಾತಕ್ಕಾಗಿ ಅಂದರೆ, ಯಜ್ಞಾಯ-ಯಜ್ಞಾದಿ ಸಕಲ ಕರ್ಮಾನುಷ್ಠಾನದ ಸಂಕಲ್ಪಕ್ಕೋಸ್ಕರವೂ, ಅಥವಾ ಯಜ್ಞಶಬ್ದ-ವಾಚ್ಯ ಪರಮಾತ್ಮನ ಪ್ರೀತಿಗೋಸ್ಕರವೂ, ಗಾತುಂ-ಗಾನ ಮಾಡುವು ದಕ್ಕಾಗಿಯೂ, ಯಜ್ಞಪತಯೇ-ಯಜ್ಞಕ್ಕೆ ಪತಿಯಾದ ಶ್ರೀಹರಿಯನ್ನೂ ಮತ್ತು ದೈವೀಃ-ದೇವರ ಸಂಬಂಧಿಯಾದ ಲೀಲೆಗಳನ್ನು, ಗಾತುಂ-ಪ್ರತಿ-ಪಾದನೇ ಮಾಡುವುದಕ್ಕಾಗಿ, ನಃ-ನಮ್ಮಗಳಿಗೆ, ಸ್ವಸ್ತಿ-ಕಲ್ಯಾಣವು, ಅಸ್ತು-ಆಗಲಿ, ಕೇವಲ ನಮಗೆ ಮಾತ್ರ ಮಂಗಳವಾಗಲೀ ಎಂತ ಅಲ್ಲ. ಮಾನು-ಷೇಭ್ಯಃ-ಭಗವದ್‌ಜ್ಞಾನಿಗಳಿಗೆಲ್ಲರಿಗೂ, ಸ್ವಸ್ತಿ-ಕ್ಷೇಮವು, ಅಸ್ತು-ಆಗಲಿ.

ಭೇಷಜಂ–ಸಂಸಾರೌಷಧಭೂತವಾದ, ಊರ್ಧ್ವಂ–ಸರ್ವೋತ್ಕೃಷ್ಟವಾದ ಗಾಯತ್ರೀಪ್ರತಿಪಾದ್ಯಗುಣಪೂರ್ಣನಾದ ಪರಬ್ರಹ್ಮವಸ್ತುವು. ಜಿಗಾತು–ಜಯಿಸಲಿ, ದ್ವಿಪದೇ–ಪಾದದ್ವಯದಿಂದ ಜಾತವಾದ (ಸರೂಪಾಂಶ ಮತ್ತು ಭಿನ್ನಾಂಶವೆಂಬ ಪಾದದ್ವಯದಿಂದ ಜಾತವಾದ), ಚತುಷ್ಪದೇ–ಶ್ವೇತದ್ವೀಪ, ಅನಂತಾಸನ, ವೈಕುಂಠಾದಿ ಧಾಮತ್ರಯಗಳಲ್ಲಿರತಕ್ಕ ಸ್ವರೂಪಾಂಶಗಳು ಮೂರು, ಬ್ರಹ್ಮಾದ್ಯನಂತ ಜೀವರುಗಳು ಭಿನ್ನಾಂಶಗಳು, ಇವರ ಅಂತರ್ಗತ ರೂಪವು ಒಂದಂಶವು. ಹೀಗೆ ನಾಲ್ಕು ಅಂಶಗಳುಳ್ಳ, ತುಭ್ಯಂ–ನಿನಗೆ, ಸ್ವಸ್ತಿ–ಮಂಗಳವು, ಅಸ್ತು–ಆಗಲಿ. ಅಥವಾ ನಃ–ನಮ್ಮಗಳಿಗೆ, ಶಂ–ಸುಖವು, ಅಸ್ತು–ಆಗಲಿ. ದ್ವಿಪದೇ–ಎರಡು ಕಾಲುಳ್ಳ ಸಮಸ್ತ ಮನುಷ್ಯರಿಗೂ, ಚತುಷ್ಪದೇ–ನಾಲ್ಕು ಕಾಲುಳ್ಳ ತಿರ್ಯಗ್‌ಜಂತುಗಳಿಗೂ, ಉಪಲಕ್ಷಣಯಾ ಸಮಸ್ತ ಪ್ರಾಣಿಗಳಿಗೂ ಮತ್ತು ಪಕ್ಷಿಗಳಿಗೂ, ಶಂ–ಸುಖವು, ಅಸ್ತು–ಆಗಲಿ.

ಸಮಸ್ತ ಪ್ರಾಣಿಗಳಿಗೆ ಹಿತವನ್ನುಂಟುಮಾಡುವ ಮಹಾನುಭಾವನಾದ ಅಗ್ನಿಶಬ್ದವಾಚ್ಯ ಪರಮಾತ್ಮನಿಗೆ ನಮ್ಮಿಂದ ಕೊಡಲ್ಪಡತಕ್ಕ ವಸ್ತು ಯಾವುದೂ ಇಲ್ಲ. ಆದಾಗ್ಯೂ "ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ" ಎಂಬ ಎಂಬ ಉಕ್ತಿಯಂತೇ ನಮಸ್ಕಾರವೆಂಬ ಉಕ್ತಿಯು ಉಂಟು. ಆದ್ದರಿಂದ ಮುಂದಿನ ಮಂತ್ರದಲ್ಲಿ ನಮಸ್ಕಾರವನ್ನು ಹೇಳುತ್ತದೆ.

೩. "ಓಂ ನಮೋ ಬ್ರಹ್ಮಣೇ" ಎಂಬ ಮಂತ್ರಕ್ಕೆ ವಾಮದೇವರು ಋಷಿಗಳು. ತತ್ತಲ್ಲಿಂಗೋಕ್ತರು ದೇವತೆಗಳು. ತ್ರಿಷ್ಟುಪ್ ಛಂದಸ್ಸು. ಸಂಧ್ಯಾನಮನದಲ್ಲಿ ವಿನಿಯೋಗವು.

ಅರ್ಥ : ಬ್ರಹ್ಮಣೇ–ವೇದಾಭಿಮಾನಿಗಳು ಮತ್ತು ತದಂತರ್ಗತ ಗುಣಪೂರ್ಣ ಪರಮಾತ್ಮನಿಗೆ, ನಮಃ–ನಮಸ್ಕಾರವು. ಅಗ್ನಯೇ–ಅಗ್ನಿ ಮತ್ತು ತನ್ನಿಯಾಮಕ ಸರ್ವೋತ್ತಮನಾದ ಶ್ರೀಹರಿಗೆ, ನಮಃ–ನಮಸ್ಕಾರವು, ಅಸ್ತು–ಆಗಲಿ. ಪೃಥಿವ್ಯೈ–ಭೂದೇವಿಗೂ, ತತ್ಪತಿಯಾದ ದೊಡ್ಡದಾದ ರೂಪವುಳ್ಳ ಶ್ರೀಕೃಷ್ಣನಿಗೂ, ನಮಃ–ನಮಸ್ಕಾರವು. ಓಷಧೀಭ್ಯಃ–ವನಸ್ಪತಿಗಳಿಗೆ ಅಭಿಮಾನಿಯಾದ ಚಂದ್ರಾಂತರ್ಗತನಾದ ದಧಿವಾಮನನಿಗೆ, ನಮಃ–

ನಮಸ್ಕಾರವು. ವಾಚೇ-ವಾಗಭಿಮಾನಿಗಳಾದ ಅಗ್ನಿ, ಭಾರತೀ, ಸರಸ್ವತ್ಯಂತ-ರ್ಗತನಾದ ಪರಶುರಾಮದೇವರಿಗೂ, ನಮಃ, ವಾಚಸ್ಪತಯೇ-ಚತುರ್ಮುಖ ಬ್ರಹ್ಮಾಂತರ್ಗತ ಶ್ರೀವಾಸುದೇವನಿಗೆ ನಮಃ. ಮಹತೇ-ಪೂಜ್ಯನಾದ, ಅಥವಾ ಬೃಹದ್ರೂಪನಾದ, ತೇಜಸ್ವಿಯಾದ, ವಿಷ್ಣವೇ-ವ್ಯಾಪ್ತನಾದ ವಿಷ್ಣುವಿಗೆ, ನಮಃ-ನಮಸ್ಕಾರವನ್ನು, ಕರೋಮಿ-ಮಾಡುತ್ತೇನೆ.

ಓಂ-ಪ್ರಣವಪ್ರತಿಪಾದ್ಯ ಶ್ರೀಹರಿಗೆ, ನಮಃ-ನಮಸ್ಕಾರವು. ಸರ್ವಾಂತರ್ಯಾಮಿಯು ಶ್ರೀಹರಿಯಾದ್ದರಿಂದ ಪ್ರತಿಯೊಂದು ದಿಗಭಿಮಾನಿದೇವತೆಗಳಿಗೆ ವಂದಿಸುವಾಗಲೂ ಆಯಾ ದೇವತೆಗಳ ಉಪಾಸ್ಯಮೂರ್ತಿಗಳಿಗೂ ನಮಸ್ಕರಿಸಬೇಕು. ಮತ್ತು, ಉಪಾಸ್ಯಮೂರ್ತಿಯಿಂದ ಸಹಿತವಾಗಿರುವ ದಿಗಭಿಮಾನಿ ದೇವತೆಗಳನ್ನು ಅಭಿವಂದಿಸತಕ್ಕದ್ದು ವಿಹಿತವೆಂದು ಸೂಚಿಸುವುದಕ್ಕಾಗಿ "ಓಂ ನಮಃ" ಎಂದು ಪ್ರತಿಯೊಂದು ಮಂತ್ರದ ಆದಿಯಲ್ಲಿ ಹೇಳಲ್ಪಟ್ಟಿರುತ್ತೆ. ಆ "ಓಂ" ಎಂಬುವುದು ಅವರವರ ಉಪಾಸ್ಯಮೂರ್ತಿಗಳಿಗೇ ವಿಶೇಷಣವನ್ನಾಗಿ ತಿಳಿಯತಕ್ಕದ್ದು. ಪ್ರಾಚ್ಯೈದಿಶೇ ಪೂರ್ವದಿಕ್ಕಿಗೆ ಅಧಿಪತಿಯಾದ ಶಚೀದೇವಿಯಿಂದ ಸಹಿತನಾದ ಇಂದ್ರದೇವರಿಗೂ ಅವರ ಉಪಾಸ್ಯಮೂರ್ತಿ ಶ್ರೀಉಪೇಂದ್ರನಿಗೂ, ಮತ್ತು, ಏತಸ್ಯಾಂ-ಈ ಪೂರ್ವದಿಕ್ಕಿನಲ್ಲಿ, ಯಾಃ-ಯಾವ, ದೇವತಾಶ್ಚ-ದೇವತೆಗಳು, ಉಪಲಕ್ಷಣಯಾ ಋಷಿಗಳೂ, ಪ್ರತಿವಸಂತಿ-ವಾಸಮಾಡಿಕೊಂಡು ಇರುವರೋ, ಏತಾಭ್ಯಶ್ಚ-ಇವರೆಲ್ಲರಿಗೂ, ನಮೋ ನಮಃ-ನಮಸ್ಕಾರವು. ಆದರಕ್ಕಾಗಿ ಎರಡಾವರ್ತಿ ವಂದನೆಯು ಹೇಳಿರುತ್ತದೆ. ಹೀಗೆಯೇ ಎಲ್ಲಾ ದಿಕ್ಪ್ರಾರ್ಥನಾಮಂತ್ರಗಳಿಗೂ ಅರ್ಥವನ್ನು ತಿಳಿಯಬೇಕು. ದಿಗಭಿಮಾನಿ ದೇವತೆಗಳೂ ಮತ್ತು ಉಪಾಸ್ಯಮೂರ್ತಿಗಳು ಪ್ರತ್ಯೇಕವಾದ್ದರಿಂದ ಅವುಗಳನ್ನು ಮಾತ್ರ ಇಲ್ಲಿ ಬರೆಯಲಾಗುತ್ತದೆ.

| ದಿಕ್ಕು | ಅಭಿಮಾನಿದೇವತಾ | | ಉಪಾಸ್ಯಮೂರ್ತಿ |
|---|---|---|---|
| ದಕ್ಷಿಣ ದಿಕ್ಕಿಗೆ ... | ಶಾಮಲಾಸಹಿತ ಯಮದೇವರು | | ... ಶ್ರೀರಾಮದೇವರು |
| ಪ್ರತೀಚಿ (ಪಶ್ಚಿಮ) ... | ಗಂಗಾಸಹಿತ ವರುಣದೇವರು | | ... ಶ್ರೀಮತ್ಸ್ಯಮೂರ್ತಿ |
| ಉದೀಚಿ (ಉತ್ತರ) ... | ಚಿತ್ರಿಕಾಸಹಿತ ಕುಬೇರ | ಇಬ್ಬರು | ... ಕಲ್ಕೀಶ |
| | ರೋಹಿಣೀಸಹಿತ ಚಂದ್ರ | | ... ದಧಿವಾಮನ |

| ದಿಕ್ಕು | ಅಭಿಮಾನಿದೇವತಾ | | ಉಪಾಸ್ಯಮೂರ್ತಿ |
|---|---|---|---|
| ಊರ್ಧ್ವ ಮೇಲುಭಾಗ | ಸೌಪರ್ಣೀಪತಿ ಗರುಡ<br>ರತಿಪತಿ ಕಾಮ | ಇಬ್ಬರು | ... ಗರುಡಧ್ವಜ<br>... ಪ್ರದ್ಯುಮ್ನ |
| ಅಧರಾ (ಕೆಳಭಾಗ) ... | ವಾರುಣೀಸಹಿತ ಶೇಷದೇವರು<br>ಮತ್ತು ಮಿತ್ರನಾಮಕ ಸೂರ್ಯ | ,, | ... ಸಂಕರ್ಷಣ |
| ಅಂತರಿಕ್ಷಾ (ಅಂತರಿಕ್ಷ ಲೋಕಕ್ಕೆ) | ಸೂರ್ಯಾದಿ ಗ್ರಹಗಳೂ<br>ಧ್ರುವಾದಿ ನಕ್ಷತ್ರಗಳೂ | ಬಹುಮಂದಿ | ... ಶಿಂಶುಮಾರ |
| ಅವಾಂತರಾ (ಆಗ್ನೇಯಾದಿ ವಿದಿಕ್ಕುಗಳಿಗೆ ಕ್ರಮವಾಗಿ) | | | |
| ಆಗ್ನೇಯಕ್ಕೆ ... | ಸ್ವಾಹಾಸಹಿತ ಅಗ್ನಿದೇವರು | | ... ಪರಶುರಾಮ |
| ನೈಋತ್ಯಕ್ಕೆ ... | ದೀರ್ಘಿಕಾಸಹಿತ ನಿರ್ಋತಿ | | ... ಜನಾರ್ದನ |
| ವಾಯುವ್ಯಕ್ಕೆ ... | ಮೋದಿನೀಸಹಿತ ಪ್ರವಹವಾಯು | | ... ಹಯಗ್ರೀವ (ಕೆಲವು ಪ್ರಮಾಣದಂತೆ ನರಸಿಂಹದೇವರು ಎಂತ ತಿಳಿದುಬರುತ್ತೆ) |
| ಈಶಾನ್ಯಕ್ಕೆ ... | ಪಾರ್ವತೀಸಹಿತ ರುದ್ರದೇವರು | | ... ನರಸಿಂಹ |

ಸಂಧ್ಯಾಯೈ ನಮಃ – ಸಂಧ್ಯಾಭಿಮಾನಿ ದೇವತೆಗಳಿಗೆ ನಮಸ್ಕಾರವು. ಗಾಯತ್ರ್ಯೈ ನಮಃ–ಗಾಯತ್ರೀದೇವಿಗೆ ನಮಸ್ಕಾರವು. ಸಾವಿತ್ರ್ಯೈ ನಮಃ–ಸಾವಿತ್ರೀದೇವಿಗೆ ನಮಸ್ಕಾರವು. ಸರಸ್ವತ್ಯೈ ನಮಃ–ಸರಸ್ವತೀದೇವಿಗೆ ನಮಸ್ಕಾರವು. ಗಾಯತ್ರಿ, ಸಾವಿತ್ರಿ, ಸರಸ್ವತಿ ಈ ಮೂರು ರೂಪಗಳು ತ್ರಿಸಂಧ್ಯೆಗೆ ಅಭಿಮಾನಿಗಳು. ಬ್ರಹ್ಮನ ಹೆಂಡತಿಯರು. ಸರಸ್ವತಿಯ ಮೂರು ಅವತಾರಗಳು. ಸರ್ವಾಭ್ಯೋ ದೇವತಾಭ್ಯೋ ನಮಃ- ಸಮಸ್ತ ದೇವತೆಗಳಿಗೆ ನಮಸ್ಕಾರವು. ದೇವೀಭ್ಯೋ ನಮಃ–ಸಮಸ್ತ ಸ್ತ್ರೀದೇವತೆಗಳಿಗೆ ನಮಸ್ಕಾರವು. ಋಷಿಭ್ಯೋ ನಮಃ–ನಾರದಾದಿ ಋಷಿಗಳಿಗೆ ನಮಸ್ಕಾರವು. ಮುನಿಭ್ಯೋ ನಮಃ–ಸನಕಾದಿ ಸನ್ಯಾಸಿಗಳಿಗೆ ನಮಸ್ಕಾರವು. ಗುರುಭ್ಯೋ ನಮಃ–ನಮಗೆ ವಿದ್ಯೋಪದೇಶಕರಾದ ಗುರುಗಳಿಗೆ ನಮಸ್ಕಾರವು. ಮಾತೃಭ್ಯೋ ನಮಃ–ತಾಯಿಗೆ ನಮಸ್ಕಾರವು. ಪಿತೃಭ್ಯೋ ನಮಃ–ತಂದೆಗೆ ನಮಸ್ಕಾರವು. ಆಚಾರ್ಯೇಭ್ಯೋ ನಮಃ-ಸಮಸ್ತ ಸಚ್ಛಾಸ್ತ್ರಪ್ರವರ್ತಕರಿಗೂ, ಮತ್ತು

ಅಧ್ಯಯನ ಹೇಳಿಕೊಟ್ಟ ಗುರುಗಳಿಗೂ ನಮಸ್ಕಾರವು. ಕಾಮೋಽಕಾರ್ಷೀತ್–ಕಾಮಕ್ಕೆ ನಿಯಾಮಕನಾದ ಶ್ರೀಹರಿಯು ನಮ್ಮಿಂದ ಸಕಲ ಕರ್ಮಗಳನ್ನೂ ಮಾಡಿಸುತ್ತಾನೆ. ಆದ್ದರಿಂದ ಕಾಮಸ್ವಾಮಿಯಾದ ಪರಮಾತ್ಮನಿಗೆ ನಮಸ್ಕಾರ ಮಾಡುತ್ತೇನೆಂತ ನಮಃ ಶಬ್ದವನ್ನು ಹೇಳಬೇಕು.

ಮನ್ಯುರಕಾರ್ಷೀತ್–ಮನ್ಯು ಅಂದರೆ ಕ್ರೋಧಾಭಿಮಾನಿ ದೇವತೆಗಳ ಅಂತರ್ಯಾಮಿಯಾದ ಶ್ರೀಲಕ್ಷ್ಮೀನರಸಿಂಹದೇವರು ನಮ್ಮಿಂದ ಸಕಲ ಕರ್ಮಗಳನ್ನೂ ಮಾಡಿಸುತ್ತಾರೆ. ಆದ್ದರಿಂದ ಕ್ರೋಧಕ್ಕೆ ನಿಯಾಮಕನಾದ ನರಸಿಂಹನಿಗೆ ನಮಸ್ಕಾರವು. ಲೋಕದಲ್ಲಿ ಕಾಮಕ್ರೋಧಕ್ಕೆ ವಶರಾಗಿ ಜೀವರು ಸ್ತ್ರೀತ್ವಮದ್ರೋಹಾದಿ ಮಹಾ ಪಾಪಗಳನ್ನು ಮಾಡುತ್ತಾರೆಂದು ಶಾಸ್ತ್ರ ಮತ್ತು ಪುರಾಣಗಳಲ್ಲಿ ಸ್ಪಷ್ಟೋಕ್ತಿಗಳುಂಟು. ಮುಕ್ತಿಗೆ ಪ್ರತಿಬಂಧಕಗಳಾದ ಅಂಥಾ ಪಾಪಗಳನ್ನು ನಮ್ಮಿಂದ ಮಾಡಿಸಬಾರದೆಂದು ಕಾಮಕ್ರೋಧಕ್ಕೆ ಅಭಿಮಾನಿ ಮತ್ತು ನಿಯಾಮಕ ಭಗವದ್ರೂಪಗಳನ್ನು ವಂದಿಸಬೇಕಾದ್ದು ಕರ್ತವ್ಯವೆಂದು ಋಷಿಗಳು ಮಹಾನಾರಾಯಣೋಪನಿಷತ್ತಿನಲ್ಲಿ ಹೇಳಿರುವ ಕಾಮೋಽಕಾರ್ಷೀತ್, ಮನ್ಯುರಕಾರ್ಷೀತ್ ಎಂಬ ಮಂತ್ರದ ಏಕದೇಶವನ್ನು ಸಂಧ್ಯಾವಂದನೆಯಲ್ಲಿ ಹೇಳಿರುತ್ತಾರೆ. ಅಲ್ಲಿ ಮೇಲ್ಕಂಡ ಮಂತ್ರವು ವಿಸ್ತಾರವಾಗಿ ಇರುತ್ತೆ. ಅದನ್ನು ಪೂರ್ತಿಯಾಗಿ ಕೆಲವರು ಸಂಧ್ಯಾವಂದನೆಯಲ್ಲಿ ಹೇಳುವ ಪದ್ಧತಿ ಇಟ್ಟುಕೊಂಡಿದ್ದಾರೆ. ಹೇಳಿದರೆ ಉತ್ತಮ. ಹೇಳದಿದ್ದವರು ಅದರ ಏಕದೇಶವನ್ನಾದರೂ ಹೇಳಿ ಆ ಮಂತ್ರದ ತಾತ್ಪರ್ಯವನ್ನು ಅನುಸಂಧಾನಕ್ಕೆ ತರಲೆಂದು ಋಷಿಗಳು ಮೇಲಿನ ಮಂತ್ರವನ್ನು ಸೂಚಿಸಿರುತ್ತಾರೆ. ಹೇಳುವ ವಾಡಿಕೆ ಇರುವವರಿಗೆ ಅನುಕೂಲವಾಗಲೆಂದು ಆ ಮಂತ್ರವನ್ನು ಈ ಮುಂದೆ ತೋರಿಸಲಾಗಿದೆ :

ಕಾಮೋಽಕಾರ್ಷೀನ್ನಮೋ ನಮಃ । ಕಾಮೋಽಕಾರ್ಷೀತ್ ಕಾಮಃ ಕರೋತಿ ನಾಹಂ ಕರೋಮಿ । ಕಾಮಃ ಕರ್ತಾ ನಾಹಂ ಕರ್ತಾ । ಕಾಮಃ ಕಾರಯಿತಾ ನಾಹಂ ಕಾರಯಿತಾ । ಏಷತೇ ಕಾಮಕಾಮಾಯ ಸ್ವಾಹಾ ॥ (ಅಂ ೬೧)

ಮನ್ಯುರಕಾರ್ಷೀನ್ನವೋನ್ನಮಃ। ಮನ್ಯುರಕಾರ್ಷೀನ್ಮನ್ಯುಃ ಕರೋತಿ ನಾಹಂ ಕರೋಮಿ। ಮನ್ಯುಃ ಕರ್ತಾ ನಾಹಂ ಕರ್ತಾ। ಮನ್ಯುಃ ಕಾರಯಿತಾ ನಾಹಂ ಕಾರಯಿತಾ । ಏಷತೇ ಮನ್ಯೋ ಮನ್ಯವೇ ಸ್ವಾಹಾ ॥ (ಅಂ ೬೨)

ಕಾಮಾಭಿಮಾನಿದೇವತೆಯೂ ಮತ್ತು ಅಸುರನೂ, ತನ್ನಿಯಾಮಕನಾದ (ಕಾಂತತ್ವಾತ್ ಕಾಮನಾಮಾ ಹರಿಃ ಎಂಬ ವ್ಯುತ್ಪತ್ತಿಯಿಂದ ಕಾಮ-ಶಬ್ದವಾಚ್ಯನಾದ ಶ್ರೀಹರಿಯು ನಮ್ಮ ಅನಾದಿಕರ್ಮಾನುಗುಣವಾಗಿ ಜ್ಞಾನ-ಪ್ರತಿಬಂಧಕವಾದ ಪಾಪ ಮತ್ತು ಕಾಮ್ಯಪುಣ್ಯಗಳನ್ನು ಮಾಡಿಸುತ್ತಾನೆ. ಆದ್ದರಿಂದ ಪ್ರತಿಬಂಧಕ ಪರಿಹಾರಕ್ಕಾಗಿ ನಿನಗೆ ನಮಸ್ಕಾರವನ್ನು ಮಾಡುತ್ತೇನೆ. ವರ್ತಮಾನಕಾಲದಲ್ಲಿರುವ ಜ್ಞಾನಪ್ರತಿಬಂಧಕ ಪಾಪವನ್ನು ಕಾಮನು ಮಾಡುತ್ತಾನೆ. ನಾನು ಮಾಡುವುದಿಲ್ಲ. ಜ್ಞಾನಪ್ರತಿಬಂಧಕಕ್ಕೆ ಮುಖ್ಯ ಕರ್ತನು ಕಾಮನು, ನಾನು ಕರ್ತನಲ್ಲ. ಕಾಮನು ನನ್ನ ಹಸ್ತದಿಂದ ಜ್ಞಾನ-ಪ್ರತಿಬಂಧಕವಾದ ಪಾಪಗಳನ್ನು ಮಾಡಿಸುತ್ತಾನೆ. (ಸಕಾರಯೇತ್ ಪುಣ್ಯಮಥಾಪಿ ಪಾಪಮಿತಿ ಶ್ರುತೇಃ) ಪೂರ್ವದಲ್ಲಿ ಕರ್ಮ ಮಾಡಿಸಿದವನೂ, ವರ್ತಮಾನಕಾಲದಲ್ಲಿ ಮಾಡತಕ್ಕವನೂ ಉತ್ತರತ್ರ ಕರ್ಮ ಮಾಡಿಸತಕ್ಕವನೂ, ಏಷ ಏವ–ಈತನೇ ಹೊರತು ಬೇರೆ ಯಾರೂ ಅಲ್ಲ. ಹೇ ಕಾಮನೇ! ನಿನ್ನ ಪ್ರೀತಿಗೋಸ್ಕರ ಈ ತುಪ್ಪವೇ ಮೊದಲಾದ ಆಹುತಿಗಳು, ಸ್ವಾಹಾ–ಸುಹುತವಾಗಲೀ ಎಂತ ಮೇಲ್ಕಂಡ ಮಂತ್ರದ ತಾತ್ಪರ್ಯವು. ಇದರಂತೆಯೇ ಮನ್ಯುರಕಾರ್ಷೀತ್ ಎಂಬುದರ ಅರ್ಥವೂ ತಿಳಿಯಬೇಕು. ಮನ್ಯುಃ ಕ್ರೋಧಾಭಿಮಾನಿ ರುದ್ರದೇವರೂ ತನ್ನಿಯಾಮಕ ನರಸಿಂಹದೇವರೂ ಎಂದು ತಿಳಿಯತಕ್ಕದ್ದು.

ಮೇಲಿನ ಎರಡು ಮಂತ್ರಗಳೂ ಕೂಡ " ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಮ್ । ತಥಾಪಿ ಮತ್ಕೃತಾ ಪೂಜಾ ತ್ವತ್ಪ್ರಸಾದೇನ ನಾನ್ಯಥಾ । ನ ಜಾನೇ ಕರ್ಮ ಯತ್ಕಿಂಚಿತ್ ನಾಪಿ ಲೌಕಿಕವೈದಿಕೇ। ನ ನಿಷೇಧವಿಧಿವಿಷ್ಣೋ ತವ ದಾಸೋಽಸ್ಮಿ ಕೇವಲಮ್ ॥ " ಎಂಬ ಸ್ಮೃತಿ-ವಾಕ್ಯಗಳ ಅರ್ಥವನ್ನೇ ಪ್ರತಿಪಾದಿಸುತ್ತವೆ. ಇದರಿಂದ ಜೀವರಿಗೆ ಸ್ವಾತಂತ್ರ್ಯ ಲೇಶವೂ ಇಲ್ಲವೆಂಬುದು ಸ್ಪಷ್ಟವಾಗುತ್ತದೆ.

ಭಗವತೇ–ಷಡ್ಗುಣೈಶ್ವರ್ಯವುಳ್ಳ, ವಾಸುದೇವಾಯ–ಜಗತ್ತನ್ನು ವ್ಯಾಪಿಸಿರುವ ಶ್ರೀಕೃಷ್ಣನಿಗೆ, ನಮಃ–ನಮಸ್ಕಾರವು.

೧) ಯಾಂ–ಯಾವ ಸಂಧ್ಯಾನಾಮಕ ಪರಮಾತ್ಮನನ್ನು, ಸ್ಥಾವರಾಣಿ–ಚಲಿಸದೇ ಏಕತ್ರ ಇರುವ ಪದಾರ್ಥಾಭಿಮಾನಿಗಳೂ, ಚರಾಣಿ–ಚಲಿಸತಕ್ಕ ಜೀವವುಳ್ಳ ಪ್ರಾಣಿಗಳೂ ತದಭಿಮಾನಿಗಳೂ, ಸದಾ–ಯಾವಾಗಲೂ, ಸಾಯಂ ಪ್ರಾತಃ–ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ, ನಮಸ್ಯಂತಿ–ನಮಸ್ಕರಿಸುತ್ತಾರೋ, ಸಾ ಸಂಧ್ಯಾ–ಆ ಸಂಧ್ಯಾನಾಮಕ ಪರಮಾತ್ಮನು, ಮಾ–ನನ್ನನ್ನು, ಅಭಿರಕ್ಷತು–ಸರ್ವತ್ರ ರಕ್ಷಿಸಲಿ. ಆ ಸಂಧ್ಯೆಯು ನನ್ನನ್ನು ರಕ್ಷಿಸಲಿ. ಓಂ ನಮಃ–ಪ್ರಣವಪ್ರತಿಪಾದ್ಯ ಶ್ರೀಹರಿಗೆ ನಮಸ್ಕಾರವು.

೨) ದೇವಕೀಪುತ್ರಃ–ದೇವಕೀಪುತ್ರನಾದ ಶ್ರೀಕೃಷ್ಣನು, ಬ್ರಹ್ಮಣ್ಯಃ–ಬ್ರಾಹ್ಮಣಪ್ರಿಯನು, ಮಧುಸೂದನಃ–ಮಧುನಾಮಕ ದೈತ್ಯನನ್ನು ಸಂಹಾರ ಮಾಡಿದ ಅಥವಾ ಮಧುಕವಾದ ಪಾಕವನ್ನು ಮಾಡಿದ ಶ್ರೀ ಭೀಮಸೇನನನ್ನು ಪ್ರೇರಣೆ ಮಾಡತಕ್ಕ ಮಧುಸೂದನನು; ಬ್ರಹ್ಮಣ್ಯಃ–ಬ್ರಾಹ್ಮಣಪ್ರಿಯನು, ಪುಂಡರೀಕಾಕ್ಷ–ಕಮಲದಂತೆ ವಿಶಾಲವಾದ ನೇತ್ರವುಳ್ಳ ಪರಮಾತ್ಮನು, ಬ್ರಹ್ಮಣ್ಯಃ–ಬ್ರಾಹ್ಮಣಪ್ರಿಯನು, ವಿಷ್ಣುಃ–ಸರ್ವತ್ರ ವ್ಯಾಪ್ತನಾದ, ಅಚ್ಯುತಃ–ಎಂದಿಗೂ ನಾಶವಿಲ್ಲದಿರುವ ಶ್ರೀಹರಿಯು, ಬ್ರಹ್ಮಣ್ಯಃ–ಬ್ರಾಹ್ಮಣಪ್ರಿಯನು, ಅಂದರೆ ಬ್ರಹ್ಮಜ್ಞಾನಿಯಾದವನನ್ನು ಪ್ರೀತಿಸತಕ್ಕವನು ಎಂತ ಅರ್ಥ.

೩) ಬ್ರಹ್ಮಣ್ಯದೇವಾಯ–ಬ್ರಾಹ್ಮಣಪ್ರಿಯನಾದ ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನಿಗೆ, ನಮಃ–ನಮಸ್ಕಾರವು, ಗೋಬ್ರಾಹ್ಮಣಹಿತಾಯ ಚ–ದೇವಬ್ರಾಹ್ಮಣರಿಗೂ, ಗೋವುಗಳಿಗೂ ಹಿತವನ್ನುಂಟುಮಾಡುವ, ಮತ್ತು ಜಗದ್ಧಿತಾಯ–ಜಗತ್ತಿಗೆ ಕ್ಷೇಮಕರನಾದ, ಕೃಷ್ಣಾಯ ಕೃಷ್ಣರೂಪಿಯಾದ, ಗೋವಿಂದಾಯ–ವೇದಪ್ರತಿಪಾದ್ಯನಾದ ಪರಮಾತ್ಮನಿಗೆ, ನಮೋ ನಮಃ–ನಮಸ್ಕಾರ, ನಮಸ್ಕಾರ. ಆದರದಿಂದ ದ್ವಿರುಕ್ತಿ.

೪) ಕ್ಷೀರೇಣ–ಹಾಲಿನಿಂದ, ಸ್ನಾಪಿತೇ–ಸ್ನಾನ ಮಾಡಲ್ಪಟ್ಟ, ಹೇ ದೇವಿ–ಎಲೈ ದುರ್ಗೇ–ದುರ್ಗಾದೇವಿಯೇ, ಚಂದನೇನ ವಿಲೇಪಿತೇ–ಉತ್ತಮ

ವಾದ ಶ್ರೀಗಂಧದಿಂದ ಲೇಪಿತಳಾದವಳೇ, ಬಿಲ್ವಪತ್ರಾರ್ಚಿತೇ-ಬಿಲ್ವ ಅಂದರೆ ತುಳಸೀ, ಮುಂತಾದ ಪತ್ರೆಗಳಿಂದ ಪೂಜಿತಳಾದವಳೇ, ಎಲೈ ದುರ್ಗಿಯೇ, ಅಹಂ-ನಾನು, ತ್ವಾಂ-ನಿನ್ನನ್ನು, ಶರಣಂ-ಮೊರೆಯನ್ನು, ಗತಃ-ಹೊಂದಿರುತ್ತೇನೆ. ಎಲೈ ದುರ್ಗೇ, ನಿನ್ನ ಶರಣಾಗತನಾದ ನಾನು ನಿನ್ನ ಅಂತರ್ಗತನಾದ ಪ್ರಣವಪ್ರತಿಪಾದ್ಯನಾದ ಪರಮಾತ್ಮನಿಗೆ ನಮಸ್ಕರಿಸುತ್ತೇನೆ.

## ಅಥ ಗಾಯತ್ರ್ಯುದ್ವಾಸನಮ್

ಈ ಗಾಯತ್ರೀ ಉದ್ವಾಸನ ಮಾಡತಕ್ಕ ಮಂತ್ರಕ್ಕೆ ವಾಮದೇವರು ಋಷಿಗಳು, ಗಾಯತ್ರೀ ದೇವತೆಯು, ಅನುಷ್ಟುಪ್ ಛಂದಸ್ಸು. ಈ ಮಂತ್ರವನ್ನು ನಮ್ಮೊಳಗೆ ಆವಾಹಿತ ಗಾಯತ್ರೀದೇವಿಯನ್ನು ಯಥಾಸ್ಥಾನಕ್ಕೆ ಹೋಗು ಎಂತ ಪ್ರಾರ್ಥನ ಮಾಡುವುದಕ್ಕೆ ಉಪಯೋಗಿಸತಕ್ಕದ್ದು.

೧) ಉತ್ತಮೇ-ಶ್ರೇಷ್ಠವಾದ, ಶಿಖರೇ-ಮೇರುಪರ್ವತದಲ್ಲಿ ಅಥವಾ ಮಾನಸೋತ್ತರ ಪರ್ವತದಲ್ಲಿ ಅಥವಾ ವೈಕುಂಠಾದಿ ಲೋಕಗಳಲ್ಲಿ, ಜಾತೇ-ಹುಟ್ಟಿದ ಅಥವಾ ಅಭಿವ್ಯಕ್ತಳಾದ ಎಲೈ ಗಾಯತ್ರೀದೇವಿಯೇ, ಭೂಮ್ಯಾಂ-ಭೂಮಿಯಲ್ಲಿ, ಪರ್ವತಮೂರ್ಧನಿ-ಮೇರ್ವಾದಿ ಪರ್ವತಶಿಖರಗಳಲ್ಲಿ ವಿಹರಿಸಲೋಸುಗ, ಬ್ರಾಹ್ಮಣೇಭ್ಯೋ-ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರ ದೆಸೆಯಿಂದ, ಅಭ್ಯನುಜ್ಞಾತಾ-ಅಪ್ಪಣೆ ಪಡೆದವಳಾಗಿ, ಯಥಾಸುಖಂ-ನಿನಗೆ ಸುಖವಾಗುವ ರೀತಿಯಿಂದ, ಗಚ್ಛ-ಪ್ರಯಾಣ ಮಾಡು. ಸಂಪದ್ಯುಕ್ತಳಾದ ಹೇ ದೇವಿ ಸುಖವಾಗಿ ಪ್ರಯಾಣ ಮಾಡು. ನಿನ್ನ ಅಂತರ್ಗತ ಪ್ರಣವಮುಖ್ಯಪ್ರತಿಪಾದ್ಯ ಪರಬ್ರಹ್ಮನಿಗೆ ನಮಸ್ಕಾರವು.

೨) ಸರ್ವವೇದೇಷು ಯತ್ಪುಣ್ಯಂ-ಸಮಸ್ತ ವೇದಾಧ್ಯಯನದಿಂದ ಎಷ್ಟು ಪುಣ್ಯಫಲವು ದೊರಕುತ್ತದೆಯೋ, ಸರ್ವ ತೀರ್ಥೇಷು ಯತ್ಫಲಂ-ಸಮಸ್ತ ತೀರ್ಥಯಾತ್ರಾಗಳಿಂದ ಎಷ್ಟು ಫಲ ಬರುತ್ತದೆಯೋ, ತತ್ಫಲಂ-ಅಷ್ಟು ಪುಣ್ಯಫಲವನ್ನು, ಜನಾರ್ದನಂ-ಉತ್ಪತ್ತಿರಹಿತನಾದ ಸಂಸಾರಮರ್ದಕನಾದ ಶ್ರೀಹರಿಯನ್ನು, ಸ್ತುತ್ವಾ-ಸ್ತೋತ್ರ ಮಾಡತಕ್ಕವನಾಗಿ ಅಧಿಕಾರಿ-ಜೀವನು, ಸಮವಾಪ್ನೋತಿ-ಹೊಂದುತ್ತಾನೆ.

೩) ಆಕಾಶಾತ್–ಅಂತರಿಕ್ಷದಿಂದ, ಪತಿತಂ–ಕೆಳಗೆ ಬಿದ್ದ, ತೋಯಂ–ಉದಕಬಿಂದುಗಳು, ಯಥಾ–ಹೇಗೆ, ಸಾಗರಂ–ಸಮುದ್ರವನ್ನೇ ಕುರಿತು, ಗಚ್ಛತಿ–ಹೋಗುತ್ತವೆಯೋ ಅಂದರೆ ಸೇರುತ್ತವೆಯೋ ಹಾಗೆಯೇ, ಸರ್ವ ದೇವ ನಮಸ್ಕಾರಃ–ಎಲ್ಲಾ ಬ್ರಹ್ಮರುದ್ರ, ಇಂದ್ರಾದಿದೇವತೆಗಳಿಗೆ ಮಾಡಿವ ವಂದನೆಗಳು, ಕೇಶವಂ–ಬ್ರಹ್ಮರುದ್ರಾದಿಗಳಿಗೆ ನಿಯಾಮಕನಾಗಿ ಅಂತರ್ಯಾಮಿ ಯಾಗಿರುವ, ಕೇಶವನಿಗೇ, ಪ್ರತಿಗಚ್ಛತಿ–ತಲಪುತ್ತದೆ. ಶ್ರೀ ಕೇಶವನಿಗೇ ನಾವು ಮಾಡುವ ವಂದನಾದಿಗಳು ತಲುಪಲಿ. ಓಂ ನಮಃ–ನಾರಾಯಣನಿಗೆ ನಮಸ್ಕಾರ.

೪) ಜಗತ್ತ್ರಯಂ–ಈ ಮೂರು ಲೋಕವು ನಿನ್ನಲ್ಲಿಯೆ ವಾಸನಾತ್–ವಾಸಮಾಡಿಕೊಂಡು ಇರೋಣದರಿಂದಲೂ, ಅಂದರೆ ನಿನ್ನ ಆಧಾರದಿಂದ ಇರುವದರಿಂದಲೂ ಮತ್ತು ತೇ–ನಿನ್ನಿಂದ ಈ ಲೋಕಗಳು, ವಾಸಿತಂ–ವಾಸಸ್ಥಾನವಾಗಿ ಮಾಡಲ್ಪಟ್ಟಿತು. ಅಂದರೆ "ಯೋ ಲೋಕತ್ರಯಮಾವಿಶ್ಯ ಭಿಭರ್ತ್ಯವ್ಯಯ ಈಶ್ವರಃ" ಎಂಬ ಗೀತೋಕ್ತಿಯಂತೆ ನೀನು ಲೋಕತ್ರಯ ಗಳಲ್ಲಿ ಪ್ರವೇಶಿಸಿ ಧಾರಣಪೋಷಣ ಕರ್ತನಾಗಿದ್ದಿ. ದೇವಃ–ಕ್ರೀಡಾದಿ ಗುಣ-ಯುಕ್ತನೂ ಆಗಿರುತ್ತಿ. ಆದ್ದರಿಂದಲೂ ವಾಸುದೇವನು ನೀನು ಆಗಿದ್ದಿ. ಸರ್ವಭೂತನಿವಾಸೋಸಿ–ಸರ್ವ ಪ್ರಾಣಿಗಳಿಗೆ ಆಶ್ರಯನೂ ಆಗಿದ್ದಿ ಮತ್ತು ಸರ್ವಾಂತರ್ಯಾಮಿಯೂ ನೀನು ಆಗಿರುತ್ತಿ. ಇಂಥಾ ಮಹಿಮೋಪೇತ ನಾದ, ವಾಸುದೇವ–ಎಲೈ ವಸುದೇವಪುತ್ರನಾದ ಕೃಷ್ಣನೇ, ತೇ–ನಿನಗೆ, ನಮಃ–ನಮಸ್ಕಾರವು, ಅಸ್ತು–ಆಗಲಿ

೫) ಅನಂತಾಯ–ಅನಂತರೂಪಗಳುಳ್ಳ, ಸಹಸ್ರಮೂರ್ತಯೇ–ಅನಂತ ಅಥವಾ ವಿಶ್ವಾದಿ ಸಾವಿರರೂಪಗಳುಳ್ಳ ಪರಮಾತ್ಮನಿಗೆ, ನಮಃ–ನಮಸ್ಕಾರವು, ಅಸ್ತು–ಆಗಲಿ, ಸಹಸ್ರಪಾದಾಕ್ಷಿ ಶಿರೋರುಬಾಹವೇ–ಇಲ್ಲಿ ಸಹಸ್ರಶಬ್ದವು ಅನಂತವಾಚಿಯಾದದ್ದು ಸಂಖ್ಯಾರ್ಥಕವಲ್ಲ. (ನೂರಾರು ಸಾವಿರಾರು ಇತ್ಯಾದಿ ಶಬ್ದಗಳಂತೆ) ಅಸಂಖ್ಯಾತವಾದ ಪಾದ, ಕಣ್ಣು, ತಲೆ, ಮೊಳಕಾಲು, ಬಾಹು ಗಳು ಉಳ್ಳ ಅಂದರೆ ವಿಶ್ವರೂಪಿಯಾದ, ಸಹಸ್ರನಾಮ್ನೇ–ಅನಂತ ಹೆಸರುಗಳು ಉಳ್ಳ, ಪುರುಷಾಯ–ಸರ್ವಚೇತನಾಂತರ್ಗತನಾದ, ಶಾಶ್ವತೇ–ಅದ್ಯಂತ

ಶೂನ್ಯನಾದ ನಿತ್ಯನಾದ, ಸಹಸ್ರಕೋಟಿಯುಗಧಾರಿಣೇ-ಅನೇಕ ಕೋಟಿ ಯುಗಗಳನ್ನು ಧರಿಸಿರುವ (ಅಂದರೆ ಎಷ್ಟೇ ಕಾಲವಾದರೂ ಒಬ್ಬನೇ ಸ್ವಾಮಿ ಯಾಗಿರತಕ್ಕವನೂ, ಕಾಲಕೃತವಾದ ನಾಶರಹಿತನೂ ಎಂದು ಅರ್ಥ.) ಅಥವಾ ಅನೇಕ ಕೋಟಿ ಅರಗಳುಳ್ಳ ಚಕ್ರಗಳ ಯುಗ್ಮವನ್ನು (ಅಂದರೆ ಎರಡು ಚಕ್ರ ವನ್ನು), ಧಾರಿಣೇ-ಧರಿಸಿರುವ ಕೇಶವನಿಗೆ, ನಮಃ-ನಮಸ್ಕಾರವು. (ಎರಡೂ ಕೈಗಳಲ್ಲಿ ಚಕ್ರವನ್ನು ಹಿಡಿದಿರುವ ಕೇಶವನ ವಿಗ್ರಹವು ಭರತಖಂಡದ ಏಕ ದೇಶವಾದ "ಮಾರಿಕಾಪುರ"ದಲ್ಲಿ [ಆಂಧ್ರದೇಶ] ಯುಗಾಂತರದಿಂದಲೂ ಇದೆಯೆಂದು ಬಲ್ಲವರು ಹೇಳಿದ್ದನ್ನು ನಾನು ಕೇಳಿರುತ್ತೇನೆ ಸಂಧ್ಯಾ ಪ್ರತಿಪಾದ್ಯಮೂರುತಿಯೇ ಅದು ಎನ್ನುತ್ತಾರೆ. ಆದ್ದರಿಂದಲೇ ಸಂಧ್ಯಾ ವಂದನೆಯ ಉಪಕ್ರಮ 'ಕೇಶವ' ಶಬ್ದದಿಂದ, ಸಮಾಪ್ತಿ 'ಕೇಶವ'ನ ವಂದನೆ ಯಿಂದ ಎಂದು ತಿಳಿಯಬಹುದಾಗಿದೆ.

ಓಂ-ಪ್ರಣವಪ್ರತಿಪಾದ್ಯನಾದ, ಸರ್ವೋತ್ತಮನಾದ ಅಗ್ನಿಶಬ್ದವಾಚ್ಯ ನಾದ ಹೇ ಕೇಶವ, ನಃ-ನಮ್ಮಗಳ, ಮನಃ-ಮನಸ್ಸನ್ನು, ಭದ್ರಂ-ಮಂಗಳ ಸ್ವರೂಪಿಯಾದ ನಿನ್ನನ್ನು, ಅಪಿ ವಾತಯ-ಸಮೀಚೀನವಾಗಿ ಹೊಂದಿಸು, ಎಂತ ಅರ್ಥ. ಇದರಿಂದ ನಾನು ಮಾಡತಕ್ಕ ಸಂಧ್ಯಾದಿ ಕರ್ಮಗಳಿಗೆ ನಿನ್ನ ಪಾದಗಳಲ್ಲಿ ನನಗೆ ರತಿ ಅಂದರೆ ಆಸಕ್ತಿ ಹುಟ್ಟಿಸುವುದೇ ಮುಖ್ಯ ಫಲವೆಂತ ತಾತ್ಪರ್ಯವು. ನಿನ್ನಲ್ಲಿ ಭಕ್ತಿ ಹುಟ್ಟಿದರೆ ಮೋಕ್ಷವು ದೊರಕುವುದರಲ್ಲಿ ಸಂಶಯವೇ ಇಲ್ಲ. ಆದ್ದರಿಂದ ಭಕ್ತಿಯನ್ನು ಯಾಚಿಸಿರುತ್ತದೆ.

ಓಂ ಸರ್ವತಃ ಶಾಂತಿಃ-ಎಲೈ ಪರಮಾತ್ಮನೇ, ಯಾವಾಗಲೂ ಕ್ಷೇಮ ವನ್ನು ಉಂಟುಮಾಡು ಎಂದು ಮೂರಾವರ್ತಿ ಪ್ರಾರ್ಥನಾ ಮಾಡಿರುತ್ತೆ. ಸರ್ವಾರಿಷ್ಟಶಾಂತಿರಸ್ತು-ಸಮಸ್ತ ದುಃಖಕ್ಕೆ ಕಾರಣವಾದ ಲಿಂಗದೇಹವು ನಾಶವಾಗಲೀ ಎಂತ ಅರ್ಥ. ಸಮಸ್ತ ಮಂಗಳಾವಾಪ್ತಿರಸ್ತು-ಎಲ್ಲಾ ಸ್ವರೂಪ ಸುಖವೂ ಅಭಿವ್ಯಕ್ತವಾಗಲಿ. ಚತುಃಸಾಗರಪರ್ಯಂತಂ-ನಾಲ್ಕು ಸಮುದ್ರದ ಪರ್ಯಂತವಾಗಿರತಕ್ಕ ಭೂಮಿಯಲ್ಲಿರುವ, ಗೋಬ್ರಾಹ್ಮಣೇಭ್ಯಃ-ಗೋವು ಮತ್ತು ಬ್ರಾಹ್ಮಣರಿಗೆ, ಶುಭಂ ಕ್ಷೇಮವು, ಭವತು-ಆಗಲಿ. ಉಪಲಕ್ಷಣ ದಿಂದ ಎಲ್ಲಾ ಪ್ರಾಣಿಗಳಿಗೂ ಸುಖವಾಗಲಿ ಎಂತ ಅರ್ಥ.

ನಂತರ ಇಂಥಾ ಗೋತ್ರದಲ್ಲಿ ಹುಟ್ಟಿದವನಾದ ಆಶ್ವಲಾಯನಸೂತ್ರಾನುಸಾರಿಯಾದ, ಋಗ್ವೇದ ಅಧ್ಯಯನ ಮಾಡಲು ಅರ್ಹನಾದ ಇಂಥಾ ಹೆಸರುಳ್ಳ ನಾನು ಭೋ-ಎಲೈ ಜ್ಞಾನಿಗಳಿರಾ, ಅಭಿವಾದಯೇ ಅಭಿವಾದಯಾಮಿ-ನಿಮ್ಮನ್ನು ಸ್ತೋತ್ರ ಮಾಡುತ್ತೇನೆ ಮತ್ತು ನಮಸ್ಕಾರ ಮಾಡುತ್ತೇನೆ ಎಂಬ ಅರ್ಥವುಳ್ಳ ಮೇಲಿನ ವಾಕ್ಯವನ್ನು ಹೇಳಿ ಭೂಮಿಯನ್ನು ಮುಟ್ಟಿ ಸೂರ್ಯಾಂತರ್ಗತನಾದ ಪರಮಾತ್ಮನಿಗೆ ನಮಸ್ಕರಿಸಬೇಕು, ಅಥವಾ ಎದುರಿನಲ್ಲಿ ಗುರುಗಳಾಗಲೀ, ಬ್ರಾಹ್ಮಣರಾಗಲೀ ಅಥವಾ ಮಾತಾಪಿತೃಗಳಾಗಲೀ ಇದ್ದರೆ ಅವರಿಗೆ ನಮಸ್ಕರಿಸತಕ್ಕದ್ದು. ಅನಂತರದಲ್ಲಿ ಹಸ್ತದಲ್ಲಿ ಉದಕವನ್ನು ಹಾಕಿಕೊಂಡು ಈ ಕೆಳಗೆ ಹೇಳಿದ ಮಂತ್ರವನ್ನು ಉಚ್ಚರಿಸಿ ನೀರನ್ನು ಬಿಟ್ಟು ಸಮರ್ಪಣ ಮಾಡಬೇಕು.

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಸ್ಸಂಧ್ಯಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಪ್ರಾತಃಸಂಧ್ಯಾವಂದನೇನ ಭಗವಾನ್ ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸೀ ಅನಂತಕಲ್ಯಾಣಗುಣಗಣಪರಿಪೂರ್ಣಃ ಕ್ಷೀರಾಬ್ಧಿಶಾಯೀ ನಿರ್ದೋಷಜ್ಞಾನಾನಂದಾತ್ಮಕಃ ಭಾರತೀರಮಣಮುಖ್ಯಪ್ರಾಣಾಂತರ್ಗತ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋ ಭವತು ॥ ಶ್ರೀಕೃಷ್ಣಾರ್ಪಣಮಸ್ತು॥

ಎಂದುಚ್ಚರಿಸಿ ಜಲವನ್ನು ಬಿಡಬೇಕು. ನಂತರ ಆಚಮನ ಮಾಡಬೇಕು. ಕೇಶವಾಯ ಸ್ವಾಹಾ........ಶ್ರೀಕೃಷ್ಣಾಯ ನಮಃ ಎಂಬುವವರಿಗೆ ಹೇಳಿ, ನಂತರ ಮಧ್ಯೇ ಮಂತ್ರ ತಂತ್ರ ಸ್ವರ ವರ್ಣ ಪದ ವೃತ್ತ ಲೋಪದೋಷ-ಪ್ರಾಯಶ್ಚಿತ್ತಾರ್ಥಂ ನಾಮತ್ರಯಮಂತ್ರಜಪಂ ಕರಿಷ್ಯೇ॥ ಎಂದು ಹೇಳಿ, ಓಂ ಶ್ರೀ ಅಚ್ಯುತಾಯ ನಮಃ, ಅನಂತಾಯ ನಮಃ, ಗೋವಿಂದಾಯ ನಮಃ, ಶ್ರೀ ಅಚ್ಯುತಾನಂತಗೋವಿಂದೇಭ್ಯೋ ನಮಃ ಎಂತ ಮೂರುಸಲ ಹೇಳಿ ತರುವಾಯ ಮುಂದೆ ಸೂಚಿಸಿರುವ ಶ್ಲೋಕವನ್ನು ಹೇಳಿ ಪರಮಾತ್ಮನಲ್ಲಿ ಸರ್ವವನ್ನೂ ಅರ್ಪಿಸಬೇಕು.

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾನುಸೃತಃಸ್ವಭಾವನಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥

ಇತಿ ಋಗ್ವೇದೀಯ ಪ್ರಾತಸ್ಸಂಧ್ಯಾವಂದನಂ ಸಂಪೂರ್ಣಮ್ ॥

ಶ್ರೀಕೃಷ್ಣಾರ್ಪಣಮಸ್ತು

ಯಸ್ಯ–ಯಾವಾತನ, ಸ್ಮೃತ್ಯಾ–ಸ್ಮರಣೆ ಮಾಡೋಣದರಿಂದಲೂ, ಚ–ಮತ್ತು, ನಾಮೋಕ್ತ್ಯಾ–ಹೆಸರನ್ನು ಉಚ್ಚರಿಸುವುದರಿಂದಲೂ, ತಪಸ್ಸಂಧ್ಯಾ-ಕ್ರಿಯಾದಿಷು–ತಪಸ್ಸು, ಸಂಧ್ಯಾವಂದನಾದಿ ಕರ್ಮಗಳಲ್ಲಿ, ನ್ಯೂನಂ–ಕಡಿಮೆ (ಲೋಪ) ಆದದ್ದು, ಸಂಪೂರ್ಣತಾಂ–ಪೂರ್ಣತ್ವವನ್ನು, ಯಾತಿ–ಹೊಂದುತ್ತದೆಯೋ, ತಂ–ಅಂಥ, ಅಚ್ಯುತಂ–ನಾಶರಹಿತನಾದ ಶ್ರೀಹರಿಯನ್ನು, ಸದ್ಯಃ–ತಕ್ಷಣದಲ್ಲಿ, ವಂದೇ–ನಮಸ್ಕರಿಸುತ್ತೇನೆ. ಹೇ ರಮಾಪತೇ–ಎಲೈ ಲಕ್ಷ್ಮೀಪತಿಯೇ, ಮಂತ್ರಹೀನಂ–ಮಂತ್ರರಹಿತವಾಗಿ, ಕ್ರಿಯಾಹೀನಂ–ಕರ್ಮಹೀನವಾಗಿ, ಭಕ್ತಿಹೀನಂ–ಪ್ರೇಮ ಮತ್ತು ಶ್ರದ್ಧೆಯಿಲ್ಲದವನಾಗಿ, ಮಯಾ–ನನ್ನಿಂದ, ಯತ್ಕೃತಂ–ಯಾವ ಕರ್ಮಗಳು ಮಾಡಲ್ಪಟ್ಟಿರುತ್ತವೆಯೋ, ಹೇ ದೇವ–ಎಲೈ ಸ್ವಾಮಿಯೇ, ತತ್–ಅದು, ಮೇ–ನನಗೆ, ಪರಿಪೂರ್ಣಂ–ಸಂಪೂರ್ಣ ಫಲ ಕೊಡತಕ್ಕದ್ದು, ಅಸ್ತು–ಆಗಲಿ, ಎಂದು ಅರ್ಥ. ಅನೇನ ಪ್ರಾತಃಸಂಧ್ಯಾವಂದನೇನ–ಈ ಪ್ರಾತಃಕಾಲೀನವಾದ ಸಂಧ್ಯಾವಂದನ ಕರ್ಮದಿಂದ, ಭಗವಾನ್–ಷಡ್ಗುಣೈಶ್ವರ್ಯಪೂರ್ಣನಾದ, ಶ್ರೀಮನ್ಮಧ್ವಾಚಾರ್ಯಾಣಾಂ–ಸಂಪದ್ಯುಕ್ತರಾದ ಮಧ್ವಾಚಾರ್ಯರ, ಹೃತ್ಕಮಲಮಧ್ಯನಿವಾಸೀ–ಹೃದಯಕಮಲದ ಮಧ್ಯದಲ್ಲಿ ವಾಸವಾಗಿರುವ, ಅನಂತಕಲ್ಯಾಣಗುಣಗಣಪರಿಪೂರ್ಣ–ಅಸಂಖ್ಯಾಕವಾದ ಮಂಗಳಕರವಾದ ಗುಣರಾಶಿಗಳಿಂದ ಕೂಡಿರುವ,

ಕ್ಷೀರಾಬ್ಧಿಶಾಯೀ-ಕ್ಷೀರಸಮುದ್ರದಲ್ಲಿ ಮಲಗಿರುವ, ನಿರ್ದೋಷಜ್ಞಾನಾನಂದಾತ್ಮಕಃ-ದೋಷರಹಿತವಾದ ಜ್ಞಾನಾನಂದಸ್ವರೂಪಿಯಾದ, ಭಾರತೀರಮಣ ಮುಖ್ಯಪ್ರಾಣಾಂತರ್ಗತ-ಭಾರತೀದೇವಿಗೆ ಪತಿಯಾದ ಮುಖ್ಯವಾಯುದೇವರವಳಗೆ ನಿಯಾಮಕನಾಗಿರುವ, ಸವಿತೃನಾಮಕ-ಸವಿತಾ ಎಂತ ಹೆಸರುಳ್ಳ, ಶ್ರೀಲಕ್ಷ್ಮೀನಾರಾಯಣಃ-ಲಕ್ಷ್ಮೀಸಮೇತನಾದ ಮುಕ್ತಾಶ್ರಯನಾದ ನಾರಾಯಣದೇವರು, ಪ್ರೀಯತಾಂ-ಪ್ರಸನ್ನನಾಗಲಿ. ಪ್ರೀತೋ ವರದೋ ಭವತು-ಪ್ರಸನ್ನನಾದ ಶ್ರೀಹರಿಯು ವರವನ್ನು ಕೊಡುವನು ಆಗಲಿ. ಶ್ರೀಕೃಷ್ಣಾರ್ಪಣಮಸ್ತು-ಶ್ರೀಕೃಷ್ಣನಿಗೆ ಅರ್ಪಿಸಲ್ಪಟ್ಟದ್ದು ಆಗಲಿ ಎಂತ ನೀರನ್ನು ಬಿಟ್ಟು ಆಚಮನ ಮಾಡಬೇಕು ನಾಮತ್ರಯ ಜಪಿಸಬೇಕು. ಕಾಯೇನ-ದೇಹದಿಂದಲೂ, ವಾಚಾ-ವಾಗಿಂದ್ರಿಯದಿಂದಲೂ, ಮನಸಾ-ಮನಸ್ಸಿನಿಂದಲೂ, ಇಂದ್ರಿಯೈಃ-ಇತರ ವಿಧವಾದ ಇಂದ್ರಿಯಗಳಿಂದಲೂ, ಬುದ್ಧ್ಯಾ-ಬುದ್ಧಿಯಿಂದಲೂ, ಆತ್ಮನಾ-ಪ್ರಾಣಶಕ್ತಿ ಅಂದರೆ ಸಾಮರ್ಥ್ಯದಿಂದಲೂ, ಅನುಸೃತಸ್ವಭಾವಂ-ಜೀವನ ಸ್ವರೂಪವನ್ನು ಅನುಸರಿಸಿ, ಯದ್ಯತ್-ಯಾವ ಯಾವ ಕರ್ಮಗಳನ್ನು, ಕರೋಮಿ-ಮಾಡುತ್ತೇನೆಯೋ, ಅವೆಲ್ಲವೂ, ಪರಸ್ಮೈ-ಸರ್ವೋತ್ತಮನಾದ, ನಾರಾಯಣಾಯ-ನಾರಾಯಣದೇವರಿಗೆ, ಇತಿ-ಎಂದು, ಸಮರ್ಪಯಾಮಿ-ಭಕ್ತಿಯಿಂದ ಅರ್ಪಿಸುತ್ತೇನೆ.

ನಾನು ಮಂತ್ರ ಹೇಳುವ ಕಾಲದಲ್ಲಿ, ಯದಕ್ಷರಪದಭ್ರಷ್ಟಂ-ಯಾವುದು ಅಕ್ಷರ ಮತ್ತು ಪದಗಳಿಂದ ಲೋಪ ಮಾಡಲ್ಪಟ್ಟಿದೆಯೋ, ಯಾವುದು ಮಾತ್ರಾಹೀನಂ-ಗುರು, ಲಘು, ಮೊದಲಾದ ಮಾತ್ರೆಗಳಿಂದ ರಹಿತವಾಗಿದೆಯೋ ಅಂದರೆ ಛಂದಸ್ಸು, ವೃತ್ತಗಳು ಲೋಪವಾಗಿದೆಯೋ, ಹೇ ದೇವ-ಕ್ರೀಡಾದಿ ಗುಣವಿಶಿಷ್ಟನಾದ, ನಾರಾಯಣ-ಎಲೈ ನಾರಾಯಣನೇ, ತತ್-ಅಂಥಾ ಅಪರಾಧವು, ಕ್ಷಮ್ಯತಾಂ-ಕ್ಷಮಿಸಲ್ಪಡಲಿ. ತೇ-ನಿನಗೆ, ನಮಃ-ನಮಸ್ಕಾರವು, ಅಸ್ತು-ಆಗಲಿ.

ಇಲ್ಲಿಗೆ ಋಗ್ವೇದದ ಆಶ್ವಲಾಯನಶಾಖಿಗಳಿಂದ ಕರ್ತವ್ಯವಾದ
ಪ್ರಾತಃಸಂಧ್ಯಾವಂದನೆಯ ಅರ್ಥಾನುವಾದವು
ಸಮಾಪ್ತಿಯಾಯಿತು.

ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು

ಸೂಚನೆ:—ಗಾಯತ್ರೀ ಜಪಾನಂತರ ಯಜುರ್ವೇದಿಗಳು ಪ್ರಾತಃಸಂಧ್ಯಾ-ವಂದನೆಯಲ್ಲಿ ಹೇಳತಕ್ಕ ಸೂರ್ಯೋಪಸ್ಥಾನ ಮಂತ್ರವನ್ನು ಅರ್ಥ ಸಹಿತವಾಗಿ ಯಥಾಮತಿ ವರ್ಣಿಸಲಾಗುತ್ತದೆ.

೧. ಮಿತ್ರಸ್ಯ ಚರ್ಷಣೀ ಧೃತಃ ಶ್ರವ್ರೋ ದೇವಸ್ಯಸಾನಸಿಮ್ ।
ಸತ್ಯಂ ಚಿತ್ರಶ್ರವಸ್ತಮಮ್ ॥

೨. ಮಿತ್ರೋಜನಾನ್ಯಾತಯತಿ ಪ್ರಜಾನನ್ ಮಿತ್ರೋ ದಾಧಾರ ಪೃಥಿವೀಮುತದ್ಯಾಮ್ । ಮಿತ್ರಃಕೃಷ್ಟೀರನಿಮಿಷಾಭಿಚಷ್ಟೇ ಸತ್ಯಾಯಹವ್ಯಂ ಘೃತವದ್ವಿಧೇಮ ॥

೩. ಪ್ರಸಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ ಯಸ್ತ ಆದಿತ್ಯ ಶಿಕ್ಷತಿ ವ್ರತೇನ । ನಹನ್ಯತೇ ನಜೀಯತೇ ತ್ವೋತೋನೈನಮಗುಂ-ಹೋ ಅಶ್ನೋತ್ಯಂತಿ ತೋನದೂರಾತ್ ॥

೪. ಓಂ ನಮೋ ಬ್ರಹ್ಮಣೇ, ನಮೋಸ್ತ್ವಗ್ನಯೇ, ನಮಃ ಪೃಥಿವ್ಯೈ ನಮ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಬೃಹತೇ ಕರೋಮಿ ॥

ಎಂಬ ನಾಲ್ಕು ಋಕ್ಕುಗಳನ್ನು ಹೇಳಬೇಕು. ಮೇಲಿನ ಮಂತ್ರಗಳಿಗೆ ಕ್ರಮವಾಗಿ ಅರ್ಥವನ್ನು ಮುಂದೆ ನಿರೂಪಿಸಿದಂತೆ ತಿಳಿಯಬೇಕು.

೧. ಚರ್ಷಣೀಧೃತಃ-ಮನುಷ್ಯರುಗಳನ್ನು ಉಪಲಕ್ಷಣಯಾ ಸಮಸ್ತ ಪ್ರಾಣಿಗಳನ್ನು, ಧೃತಃ-ಧರಿಸಿರುವ ಅಥವಾ ಧಾರಣಪೋಷಣ ಮಾಡುವ. ಮಿತ್ರಸ್ಯ-ಸರ್ವವನ್ನೂ ತಿಳಿದು ರಕ್ಷಣ ಮಾಡುವವನೂ, ಅಥವಾ ತನ್ನ ಜ್ಞಾನದಿಂದ ತಿಳಿಯಲ್ಪಟ್ಟ ಜಗತ್ತನ್ನು ಸಂರಕ್ಷಿಸುವವನೂ ಆದ್ದರಿಂದ ಮಿತ್ರ-ಶಬ್ದವಾಚ್ಯನಾದ ಸೂರ್ಯಾಂತರ್ಗತನಾದ, ದೇವಸ್ಯ-ಕ್ರೀಡಾದಿ ಗುಣವಿಶಿಷ್ಟನಾದ, ವ್ಯಾಪ್ತನಾದ ಶ್ರೀವಿಷ್ಣುವಿನ, ಚಿತ್ರ ಶ್ರವಸ್ತಮಮ್-ಅತಿಶಯವಾದ ಅಂದರೆ ಲೋಕವಿಲಕ್ಷಣವಾದ, ಶ್ರವಣ ಮಾಡಲಿಕ್ಕೆ ಅತ್ಯಂತ ಯೋಗ್ಯವಾದ, ಶ್ರವಃ-ಕೀರ್ತಿಯನ್ನು, ಸಾನಸಿಂ-ಕೇವಲ ಶ್ರವಣಕ್ಕೆ ಯೋಗ್ಯವಾದದನ್ನಾಗಿಯೇ ತಿಳಿದಿಲ್ಲ. ಕಿಂತು-ಮತ್ತು ಶ್ರವಣ ಮಾಡುವವರಿಗೆ ಮೋಕ್ಷಫಲವನ್ನು ಕೊಡತಕ್ಕ ಸಾಮರ್ಥ್ಯವುಳ್ಳದ್ದನ್ನಾಗಿ, ಸತ್ಯಂ-ಯಥಾರ್ಥವಾಗಿ,

ಜಾನೀಮ–ತಿಳಿದಿರುತ್ತೇವೆ. (ಜಾನೀಮ ಎಂಬ ಕ್ರಿಯಾಪದ ಅಧ್ಯಾಹಾರ ಮಾಡಿಕೊಳ್ಳಬೇಕು.)

೨. ಮಿತ್ರಃ-ಜಗತ್ಪಾಲಕನಾದ ಶ್ರೀಹರಿಯು, ಯತಃ-ಯಾವ ಕಾರಣದಿಂದ ಚೇತನರ ಯೋಗ್ಯವಾದ ಫಲಾಂತವಾದ ಕರ್ಮವನ್ನು, ಪ್ರಜಾನನ್–ಪ್ರಕೃಷ್ಟವಾಗಿ ತಿಳಿದಿರುವನಾಗಿದ್ದಾನೆಯೋ, ಅತಃ-ಆದ್ದರಿಂದ, ಜನಾನ್–ಸ್ವಭಕ್ತರನ್ನು, ಯಾತಯತಿ-ತನ್ನ ಸೇವಾರೂಪವಾದ ವ್ಯಾಪಾರಗಳಲ್ಲಿ ಆಸಕ್ತರನ್ನಾಗಿ ಮಾಡುತ್ತಾನೆ, (ಹೇಗೆಂದರೆ, ವಿಷ್ಣುವಿನ ಯಶಸ್ಸು ಚಿತ್ರ-ವಿಚಿತ್ರವಾದದ್ದು ಎಂತ ಮೊದಲಿನ ಮಂತ್ರದಲ್ಲಿ ಹೇಳಿದ್ದನ್ನೇ ದೃಷ್ಟಾಂತವಾಗಿ ಸ್ವಲ್ಪ ವಿಶದಪಡಿಸುತ್ತದೆ ಮುಂದಿನ ಮಂತ್ರಭಾಗವು.) ಮಿತ್ರಃ–ಶ್ರೀಹರಿಯು, ಪೃಥಿವೀಂ-ವಿಸ್ತಾರವಾದ ಈ ಭೂಮಿಯನ್ನೂ, ಉತ–ಮತ್ತು, ದ್ಯಾಂ-ಅಂತರಿಕ್ಷಾದಿ ಊರ್ಧ್ವಲೋಕಗಳನ್ನೂ ಅಂದರೆ ಇಡೀ ಬ್ರಹ್ಮಾಂಡವನ್ನು, ದಾಧಾರ–ಧರಿಸಿಕೊಂಡು ಪೋಷಣೆ ಮಾಡುತ್ತಾನೆ. ಮತ್ತು, ಮಿತ್ರಃ–ಪಾಲಕನಾದ ಪರಮಾತ್ಮನು, ಕೃಷ್ಟೀಃ–ಮನುಷ್ಯಪ್ರಜೆಗಳನ್ನೂ ಮತ್ತು, ಅನಿಮಿಷಾನ್-ದೇವತೆಗಳನ್ನೂ ಅಥವಾ ಮನುಷ್ಯರಾಗಿ ಅವತರಿಸಿರುವ ದೇವತೆಗಳನ್ನೂ ಕುರಿತು, ಅಭಿಚಷ್ಟೇ-ವ್ಯಾಸ, ಕಪಿಲ, ಹಯಗ್ರೀವಾದಿ ಅವತಾರಗಳಿಂದ ಸಚ್ಛಾಸ್ತ್ರಗಳನ್ನು ಉಪದೇಶ ಮಾಡುತ್ತಾನೆ. (ಇದರಿಂದ ಪರಮಾತ್ಮನ ಯಶಸ್ಸು ಜಗದಾಧಾರತ್ವೇನ ಸಚ್ಛಾಸ್ತ್ರ ಉಪದೇಶಕತ್ವೇನ ಶ್ರವಣ ಮಾಡಲ್ಪಡಬೇಕೆಂದು ಭಾವ.) ಈ ರೀತಿಯಾದ, ಸತ್ಯಾಯ–ಸಾಧುಗುಣವಿಶಿಷ್ಟನಾದ ಪರಮಾತ್ಮನಿಗೆ, ಘೃತವತ್–ತುಪ್ಪದಿಂದ ಸಹಿತವಾದ, ಹವ್ಯಂ–ಹವಿಸ್ಸನ್ನು ಅಂದರೆ ಆಹುತಿಯನ್ನು, ವಿಧೇಮ–ಕೊಡೋಣ. ಪರಮಾತ್ಮನ [illegible] ಹವಿಸ್ಸನ್ನು ಸ್ವೀಕರಿಸಲಿ ಎಂತ ಅರ್ಥ. ಶ್ರೋತೃಗಳಾದ ನಾವು ಶ್ರೀ[illegible] ಮಹಿಮಾಶ್ರವಣರೂಪವಾದ ಹವಿಸ್ಸನ್ನು ದೇವರಿಗೆ ಅರ್ಪಿಸುತ್ತೇ[illegible] ಹರಿಮಹಿಮಾ ಕೇಳಿದರೆ ತುಪ್ಪಸಹಿತವಾದ ಆಹುತಿಗಳನ್ನು [illegible]ದಲ್ಲಿ ಸ್ವೀಕರಿಸಿ ಅನುಗ್ರಹ ಮಾಡುವಂತೆ ನಮ್ಮಲ್ಲಿ ಕೃಪಾ ತೋ[illegible] ತಾತ್ಪರ್ಯ.

೩. ಹೇ ಮಿತ್ರ, ಹೇ ಆದಿತ್ಯ-ಎಲ್ಲೈ ಪಾಲಕನಾದವನೇ, ಜಗದ್ರಕ್ಷಕನಾದ್ದರಿಂದಲೂ, ಅದಿತಿಯಲ್ಲಿ ಅವತಾರ ಮಾಡಿದ್ದರಿಂದಲೂ, ಆದಿತ್ಯಶಬ್ದ-ವಾಚ್ಯನಾದ ಪರಮಾತ್ಮನೇ, ತೇ-ನಿನ್ನ ಭಕ್ತನಾದವನು, ಯಃ-ಯಾವನೋ (ನಿನ್ನ ಭಕ್ತನಾಗಿ ನಿನ್ನ ಪ್ರೀತಿಕರವಾದ ಯಜ್ಞಾದಿ ಕರ್ಮಗಳನ್ನು ಅನುಷ್ಠಾನ ಮಾಡುವವನು ಯಾವಾತನೋ), ಸಃ-ಅಂಥ, ಮರ್ತಃ-ಮನುಷ್ಯನು, ಪ್ರಯಸ್ವಾನ್-ಯಜ್ಞಫಲರೂಪವಾದ ಅನ್ನವನ್ನು, ಪ್ರಾಸ್ತು-ಚೆನ್ನಾಗಿ ಹೊಂದಲಿ. (ಇಲ್ಲಿ ಮರ್ತಃ ಎಂಬುದು ಸಮೂಹ ಏಕ-ವಚನವೆಂತ ತಿಳಿಯತಕ್ಕದ್ದು.) ಅಂಥ ನಿನ್ನ ಭಕ್ತರಾದ ಚೇತನರನ್ನು ಭವಾನ್-ನೀನು, "ವ್ರತೇನ-ಮಂತ್ರಮಧ್ಯೇ ಕ್ರಿಯಾಮಧ್ಯೇ ವಿಷ್ಣೋಃ ಸ್ಮರಣಪೂರ್ವಕಮ್ । ಯತ್ಕಿಂಚಿತ್ಕ್ರಿಯತೇ ಕರ್ಮ ತತ್ಕರ್ಮಸಫಲಂ ಕುರು ॥" ಇತ್ಯಾದಿ ಸ್ಮೃತಿವಚನಗಳಲ್ಲಿ ಹೇಳಿದಂತೆ ಯಜ್ಞಾದಿಕರ್ಮಗಳನ್ನು ಮಾಡುವ ಕಾಲದಲ್ಲಿ ವಿಷ್ಣುಸ್ಮರಣರೂಪವಾದ ನಿಯಮದಿಂದ (ವ್ರತದಿಂದ) ಶಿಕ್ಷತಿ-ಬೋಧನೆ ಮಾಡುತ್ತಿ. ನಿನ್ನ ಸ್ಮರಣಮಾಡತಕ್ಕ ಆ ಪುರುಷನು, ನ ಹನ್ಯತೇ-ದುಷ್ಕರ್ಮದಿಂದ ಸಂಹರಿಸಲ್ಪಡುವುದಿಲ್ಲ. ನ ಜೀಯತೇ-ಪರಾಜಿತನಾಗುವುದಿಲ್ಲ. ಅಂದರೆ, ದುಷ್ಕರ್ಮದ ಫಲದಿಂದ ಲಿಪ್ತನಾಗುವುದಿಲ್ಲವೆಂತ ಭಾವ. ನಿನ್ನ ಭಕ್ತನೇ ಇಂಥಾ ಮಹಿಮೆಯುಳ್ಳವನು ಆಗುತ್ತಾನೆಂದ-ಮೇಲೆ ನಿನಗೆ ಪಾಪಸಂಬಂಧವೇ ಇಲ್ಲವೆಂತ ಪುನಃ ಹೇಳತಕ್ಕದ್ದೇನಿದೆ. ಕೈಮುತ್ಯನ್ಯಾಯದಿಂದಲೇ ಸಿದ್ಧವಾಗುತ್ತದೆ ನಿನ್ನ ನಿರಂಜನತ್ವವು, ಎಂದು ಉತ್ತರಾರ್ಧಮಂತ್ರವು ಸೂಚಿಸುತ್ತದೆ. ಹೇಗೆಂದರೆ, ಉತ-ಮತ್ತು, ಏನಂ ತ್ವಾ-ಏತಾದೃಶವಾದ ಗುಣವುಳ್ಳವನಾದ್ದರಿಂದಲೇನೆ ಅಂದರೆ ಸ್ಮರಣೆಮಾತ್ರದಿಂದ ಭಕ್ತರ ಪಾಪಗಳನ್ನು ಕಳೆಯತಕ್ಕ ಮಹಿಮೆಯುಳ್ಳವನಾದ್ದರಿಂದ ನಿನ್ನನ್ನು, ಅಂಹಃ-ಪಾಪವು (ದುಷ್ಕರ್ಮವು), ಅಂತಿತಃ-ಸಮೀಪದಲ್ಲಿಯಾಗಲೀ, ನಾಶ್ನೋತಿ-ಹೊಂದುವುದಿಲ್ಲ, ದೂರಾತ್-ದೂರದಿಂದಲೂ, ನಾಶ್ನೋತಿ-ಹೊಂದುವುದಿಲ್ಲ. ಕಿಲ್ಬಿಷಗಳ ಸಂಬಂಧವು ನಿನಗೆ ಯಾವ ರೀತಿಯಿಂದಲೂ ಆಗುವುದಿಲ್ಲವೆಂತ ಭಾವ.

೪. " ಓಂ ನಮೋ ಬ್ರಹ್ಮಣೇ " ಎಂಬ ಮಂತ್ರಾರ್ಥವನ್ನು ಋಗ್ವೇದ ಸಂಧ್ಯಾ ಉಪಸ್ಥಾನ (ಪುಟ ೧೧೪-೫ರಲ್ಲಿ) ನೋಡಿ. ಅಲ್ಲಿ ' ಮಹತೇ ' ಎನ್ನುವ ಸ್ಥಳದಲ್ಲಿ " ಬೃಹತೇ " ಎಂತ ಯಜುರ್ವೇದಿಗಳು ಹೇಳಬೇಕು. ಬೃಹತೇ–ಗುಣಪೂರ್ಣನಾದ ಪರಮಾತ್ಮನಿಗೆ ಎಂದು ಅರ್ಥ. ಋಗ್ವೇದ ಸಂಧ್ಯೋಪಸ್ಥಾನಕ್ಕೂ ಯಜುರ್ವೇದ ಸಂಧ್ಯೋಪಸ್ಥಾನಕ್ಕೂ ಎಲ್ಲಿ ವ್ಯತ್ಯಾಸ ವಿರುವುದೋ ಅದನ್ನು ಮಾತ್ರ ಬರೆದು ಅರ್ಥ ಬರೆಯಲ್ಪಡುತ್ತದೆ.

## ಅಥ ದಿಙ್ನಮಸ್ಕಾರ

**ಓಂ ನಮಃ ಪ್ರಾಚ್ಯೈದಿಶೇ ಯಾಶ್ಚ ದೇವತಾಃ ........ ಓಂ ನಮಃ ಅವಾಂತರಾಯೈದಿಶೇ................ಏತಾಭ್ಯಶ್ಚ ನಮೋ ನಮಃ** (ಇವುಗಳ ಅರ್ಥವನ್ನು ಹಿಂದೆಯೇ ಬರೆದಿರುತ್ತೆ.) **ನಮೋ ನಮೋ ಗಂಗಾ-ಯಮುನಯೋರ್ಮಧ್ಯೇ ಯೇ ವಸಂತಿ । ತೇ ಮೇ ಪ್ರಸನ್ನಾತ್ಮಾನ-ಶ್ಚಿರಂ ಜೀವಿತಂ ವರ್ಧಯಂತಿ। ನಮೋ ನಮೋ ಗಂಗಾಯಮುನಯೋಃ ಮುನಿಭ್ಯಶ್ಚ ನಮೋ ನಮಃ ॥** (ಎಂತ ಹೇಳಬೇಕು.) ಇದರ ಅರ್ಥ ವೇನೆಂದರೆ, ಗಂಗಾಯಮುನಯೋಃ–ಗಂಗಾ ಯಮುನಾ ನದಿಗಳ, ಮಧ್ಯೇ–ಮಧ್ಯಪ್ರದೇಶದಲ್ಲಿ, ಯೇ–ಯಾವಯಾವ ಋಷಿಗಳು, ವಸಂತಿ ವಾಸಿಸುತ್ತಿದ್ದಾರೆಯೋ, ತೇಭ್ಯಃ–ಅವರುಗಳಿಗೆ, ನಮೋ ನಮಃ–ನಮಸ್ಕಾರವು, ನಮಸ್ಕಾರವು, (ಆದರಾದ್ವಿರುಕ್ತಿಃ)॥ ತೇ–ಆ ಋಷಿಗಳು, ಪ್ರಸನ್ನಾತ್ಮಾನಃ (ಸಂತಃ)–ಸಂತುಷ್ಟಾಂತಃಕರಣವುಳ್ಳವರಾಗಿ, ಮೇ–ನನ್ನ, ಜೀವಿತಂ–ಬದುಕುವಿಕೆಯನ್ನು (ಆಯುಷ್ಯವನ್ನು), ಚಿರಂ–ಬಹಳ ಕಾಲವಾಗಿರುವಂತೆ, ವರ್ಧಯಂತಿ–ಅಭಿವೃದ್ಧಿಗೊಳಿಸುತ್ತಾರೆ. ಗಂಗಾಯಮುನಾ ನದಿಗಳ ಮಧ್ಯೇ ಇರುವ, ಮುನಿಭ್ಯಶ್ಚ–ಋಷಿಗಳಿಗೆ, ನಮೋ ನಮಃ–ನಮಸ್ಕಾರವು.

" ಸಂಧ್ಯಾಯೈ ನಮಃ, ಗಾಯತ್ರ್ಯೈ ನಮಃ ........ನಮಸ್ಕುರ್ವಂತಿ ನ್ನಮೋ ನಮಃ" (ಎಂಬುವವರೆಗೂ ಹೇಳಬೇಕು. ಅರ್ಥ ಹಿಂದೆ ಬರೆದಿರುತ್ತೆ.)

೧. **ಪೃಥಿವ್ಯಾಸ್ತೇಜೋವಾಯುರಾಕಾಶಾತ್** ॥

ಯಾಂ ಸದಾ ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ।
ಸಾಯಂಪ್ರಾತರ್ನಮಸ್ಯಂತಿ ಸಾಮಾ ಸಂಧ್ಯಾ ಅಭಿರಕ್ಷತು ॥
ಶ್ರೀ ಸಾಮಾಸಂಧ್ಯಾ ಅಭಿರಕ್ಷತು ಓಂ ನಮಃ ॥

೨. ಬ್ರಹ್ಮಣ್ಯೋ ದೇವಕೀಪುತ್ರೋ....................ರಚ್ಯುತಃ ॥

೩. ನಮೋ ಬ್ರಹ್ಮಣ್ಯದೇವಾಯ....................ನಮೋನಮಃ ॥

೪. ಕ್ಷೀರೇಣ ಸ್ನಾಪಿತೇ ದೇವಿ............ಶರಣಂ ಗತಃ ॥
ಶ್ರೀ ದುರ್ಗೇಹಂ ಶರಣಾಗತಃ ಓಂ ನಮಃ ॥

(ಗಾಯತ್ರ್ಯುದ್ವಾಸನಮ್)

೫. ಉತ್ತಮೇ ಶಿಖರೇ....................ಯಥಾಸುಖಮ್ ॥
ಶ್ರೀಗಚ್ಛದೇವಿ ಯಥಾಸುಖಂ ಓಂ ನಮೋ ನಮಃ ॥

೬. ಸ್ತುತೋಮಯಾ ವರದಾ ವೇದಮಾತಾ ॥
ಪ್ರಚೋದಯಂತೀ ಪವನೇ ದ್ವಿಜಾತಾ ॥
ಆಯುಃ ಪೃಥಿವ್ಯಾಂ ದ್ರವಿಣಂ ಬ್ರಹ್ಮವರ್ಚಸಮ್ ॥
ಮಹ್ಯಂ ದತ್ವಾ ಪ್ರಜಾತುಂ ಬ್ರಹ್ಮಲೋಕಮ್ ॥

೭. ಸರ್ವವೇದೇಷು....................ಜನಾರ್ದನಮ್ ॥

೮. ಆಕಾಶಾತ್ ಪತಿತಂ................ಪ್ರತಿಗಚ್ಛತಿ ॥
ಶ್ರೀ ಕೇಶವಂ ಪ್ರತಿಗಚ್ಛತು ಓಂ ನಮಃ ॥

೯. ವಾಸನಾತ್ ವಾಸುದೇವೋಸಿ....................ನಮೋಸ್ತುತೇ ॥

೧೦. ನಮೋಸ್ತ್ವನಂತಾಯ....................ಧಾರಿಣೇ ನಮಃ ॥

೧೧. ಓಂ ಭದ್ರಂನೋ ಅಪಿವಾತಯಮನಃ ॥

ಓಂ ಶಾಂತಿಃ ಶಾಂತಿಃ ಶಾಂತಿಃ ಸರ್ವಾರಿಷ್ಟಶಾಂತಿರಸ್ತು............
........ಶುಭಂ ಭವತು ॥ (ನಂತರ ಗೋತ್ರೋಚ್ಚಾರಣಪೂರ್ವಕ ಅಭಿವಂದನ ಮಾಡಬೇಕು.)

ಆಂಗೀರಸ........... ................ತ್ರಯಾರ್ಷೇಯ ಪ್ರವರಾನ್ವಿತ ಆಪಸ್ತಂಭಸೂತ್ರಃ ಯಜುಃಶಾಖಾಧ್ಯಾಯೀ ........ ಶರ್ಮಾಹಂ ಭೋ ...........ಅಭಿವಾದಯಾಮಿ ॥

ಯಸ್ಯ ಸ್ಮೃತ್ಯಾಚ ನಾಮೋಕ್ತ್ಯಾ ತಪಸ್ಸಂಧ್ಯಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಮ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥
ಅನೇನ ಪ್ರಾತಃಸಂಧ್ಯಾವಂದನೇನ ........... ಪರದೋ ಭವತು ॥
ಶ್ರೀಕೃಷ್ಣಾರ್ಪಣಮಸ್ತು॥ ಕಾಯೇನ ............... ಸಮರ್ಪಯಾಮಿ ॥
ಯದಕ್ಷರ ಪದಭ್ರಷ್ಟಂ ... ...............ನಾರಾಯಣ ನಮೋಸ್ತು ತೇ ॥

ಇತಿ ಯಜುರ್ವೇದ ಪ್ರಾತಃಸಂಧ್ಯಾವಂದನ ಮಂತ್ರಾಃ ಸಂಪೂರ್ಣಾಃ

॥ ಶ್ರೀಕೃಷ್ಣಾರ್ಪಣಮಸ್ತು ॥

(೧) ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳಲ್ಲಿ ತಚ್ಛಬ್ದ-ವಾಚ್ಯರಾದ ಕ್ರಮವಾಗಿ ನಿಯಾಮಕರಾದ ಶ್ರೀಕೃಷ್ಣ, ಮತ್ಸ್ಯ, ಪರಶು-ರಾಮ, ಶ್ರೀ ಹಯಗ್ರೀವ, ವಿಶ್ವಂಭರಾದಿ ಭಗವನ್ಮೂರ್ತಿಗಳ ದೆಶೆಯಿಂದ ಪ್ರೇರಿತರಾಗಿ ಯಾವ ಚರಾಚರಾತ್ಮಕ ಭೂತಗಳು ಯಾವನನ್ನು ವಂದಿಸುತ್ತ-ವೆಯೋ ಆ ಸಂಧ್ಯಾನಾಮಕ ಪರಮಾತ್ಮನು ನನ್ನನ್ನು ರಕ್ಷಿಸಲಿ ಎಂದು ಅರ್ಥ.

(೬) ಉಮಯಾ-ಪಾರ್ವತಿಯಿಂದ, ಸ್ತುತಾ-ಸ್ತೋತ್ರ ಮಾಡಿಸಿ-ಕೊಳ್ಳಲ್ಪಟ್ಟ, ಅಥವಾ ಮಯಾ-ನನ್ನಿಂದ, ಸ್ತುತಾ, ಉ-ಸ್ತೋತ್ರಮಾಡಿಸಿ ಕೊಳ್ಳಲ್ಪಟ್ಟವಳಾಗಿಯೇ, ವರದಾ-ವರಗಳನ್ನು ಕೊಡತಕ್ಕ, ವೇದಮಾತಾ-ವೇದಗಳಿಗೆ ಮಾತೃಸ್ಥಾನೀಯಳಾದ, ದ್ವಿಜಾತಾ-ಬ್ರಾಹ್ಮಣರುಗಳನ್ನು, ಪವನೇ-ಪವಿತ್ರೀಕರಣ ಮಾಡುವುದರಲ್ಲಿ, ಪ್ರಚೋದಯಂತೀ-ಪ್ರೇರಣೆ ಮಾಡತಕ್ಕ ಗಾಯತ್ರೀದೇವಿಯಾದ, ತ್ವಂ-ನೀನು, ಮಹ್ಯಂ-ನನಗೆ, ಪೃಥಿವ್ಯಾಂ-ಭೂಮಿಯಲ್ಲಿ, ಆಯುಃ-ದೀರ್ಘಾಯುಷ್ಯವನ್ನು, ದ್ರವಿಣಂ-ವಿದ್ಯಾಖ್ಯವಾದ ವಿತ್ತವನ್ನು ಮತ್ತು, ಬ್ರಹ್ಮಲೋಕಂ-ಗುಣಪೂರ್ಣನಾದ ಪರಬ್ರಹ್ಮನ ವೈಕುಂಠಾದಿ ಲೋಕವನ್ನು ಕುರಿತು, ಪ್ರಜಾತುಂ-ಹೋಗುವು ದಕ್ಕೆ, ಬ್ರಹ್ಮವರ್ಚಸಂ-ಬ್ರಹ್ಮತೇಜಸ್ಸನ್ನು, ದತ್ವಾ-ಕೊಟ್ಟು, ಯಥಾಸುಖಂ

ಗಚ್ಛ–ಸುಖವು ಹೇಗೆ ಆಗಬೇಕೋ ಹಾಗೆ ಪ್ರಯಾಣ ಮಾಡು, ಅಥವಾ ಪ್ರಜಾತುಂ ಎಂಬ ಪಾಠದಲ್ಲಿ ನನ್ನಿಂದ ಮಾಡಲ್ಪಟ್ಟ ಗಾಯತ್ರೀ ಜಪ, ಧ್ಯಾನಾದಿಗಳಿಂದ ಪ್ರಕೃಷ್ಟವಾಗಿ ಉತ್ಪನ್ನವಾದ, ಬ್ರಹ್ಮಲೋಕಂ–ಬ್ರಹ್ಮಜ್ಞಾನ, ವೈಕುಂಠಾದಿ ಲೋಕವನ್ನು, ಮಹ್ಯಂ–ನನಗೆ, ದತ್ವಾ–ಕೊಟ್ಟು, ಸುಖವಾಗಿ ಹೊರಡು ಎಂತ ಅರ್ಥ. ೭ನೇ ಮಂತ್ರದಿಂದ ಪ್ರಾತಃಸಂಧ್ಯಾವಂದನದ ಪೂರ್ತಾ ಮಂತ್ರಾರ್ಥವು ಋಗ್ವೇದದ ಉಪಸ್ಥಾನಮಂತ್ರಗಳಲ್ಲಿ ಬರೆಯಲ್ಪಟ್ಟಿರುತ್ತೆ. ಅಲ್ಲಿ ನೋಡಿ ತಿಳಿಯತಕ್ಕದ್ದು.

ಇಲ್ಲಿಗೆ ಯಜುರ್ವೇದ ಪ್ರಾತಃಸಂಧ್ಯಾವಂದನ ಮಂತ್ರವು ಯಥಾಮತಿ ವಿವರಿಸಲ್ಪಟ್ಟದ್ದಾಯಿತು. ಶ್ರೀಕೃಷ್ಣಾರ್ಪಣಮಸ್ತು

---

## ಅಥ ಸಾಯಂಸಂಧ್ಯಾವಂದನವಿಧಿಃ

ಋಗ್ವೇದದ ಸಾಯಂಸಂಧ್ಯಾವಂದನ ಮಂತ್ರಗಳು ಪ್ರಾತಃಸಂಧ್ಯಾವಂದನದಲ್ಲಿರತಕ್ಕದ್ದೇ ಆಗಿರುತ್ತೆ, ವ್ಯತ್ಯಾಸವಿಲ್ಲ. ಆದರೆ ಸಂಕಲ್ಪದಲ್ಲಿ "ಸಾಯಂಸಂಧ್ಯಾಮುಪಾಸಿಷ್ಯೇ" ಎಂತ ಹೇಳಬೇಕು. ಪ್ರಥಮಮಾರ್ಜನಾನಂತರದಲ್ಲಿ "ಸೂರ್ಯಶ್ಚೇತ್ಯಸ್ಯ ..." ಎನ್ನುವ ಮಂತ್ರದಲ್ಲಿ 'ಸೂರ್ಯ' ಶಬ್ದಕ್ಕೆ ಬದಲಾಗಿ 'ಅಗ್ನಿಶ್ಚ' ಎಂತ ಹೇಳಬೇಕು. 'ಸೂರ್ಯೇಜ್ಯೋತಿಷಿ' ಎನ್ನುವುದಕ್ಕೆ ಬದಲಾಗಿ 'ಸತ್ಯೇಜ್ಯೋತಿಷಿ' ಎಂತ ಹೇಳಬೇಕು.

ಅರ್ಘ್ಯವನ್ನು ಪಶ್ಚಿಮಾಭಿಮುಖವಾಗಿ ಕೊಡತಕ್ಕದ್ದು.

ಕಾಲಾತೀತ ಪ್ರಾಯಶ್ಚಿತ್ತಾರ್ಘ್ಯವನ್ನು ಮಾತ್ರ ಬೇರೆ ಮಂತ್ರದಿಂದ ಕೊಡತಕ್ಕದ್ದು. ಅದನ್ನು ಇಲ್ಲಿ ಕೊಡಲಾಗಿದೆ:

**ಹರಿಃ ಓಮ್ ॥ ವೋಷ್ವಾದ್ಯದುರ್ಹಣಾವಾನ್ ಸಾಯಂಕರದಾರೇ ಅಸ್ಮತ್ । ಅಶ್ರೀರ ಇವಜಾಮಾತಾ ಓಮ್ ॥**

ಪದಚ್ಛೇದ: ವೋ, ಇತಿ, ಸು, ಅದ್ಯ, ದುಃ, ಹಣಾವಾನ್, ಸಾಯಂ, ಕರತ್ ಆರೇ, ಅಸ್ಮತ್, ಅಶ್ರೀರಃ, ಇವ, ಜಾಮಾತಾ.

ಅರ್ಥ: ದುರ್ಹಣಾವಾನ್-ಶತ್ರುಗಳಿಂದ ಸಹಿಸಲಿಕ್ಕೆ ಆಗದಿರುವಂತೆ ಹೊಡೆಯುತಕ್ಕ ಇಂದ್ರನೇ, ಅದ್ಯ-ಈಗ, ಅಸ್ಮದಾರೆ-ನಮ್ಮಗಳ ಸಮೀಪವನ್ನು ಕುರಿತು, ಆಗಚ್ಛತು-ಬರತಕ್ಕವನಾಗು. ಸು-ಅತಿಶಯವಾಗಿ, ಸಾಯಂ-ಹಗಲಿನ ಅವಸಾನಕಾಲವನ್ನು ಅಂದರೆ ಸಾಯಂಕಾಲವನ್ನು, ಮೋಽಕರತ್-ಮಾಡಬೇಡ, ಅಂದರೆ ನನ್ನ ಸಮೀಪಕ್ಕೆ ಬರಲು ಸಾಯಂಕಾಲ ಪರ್ಯಂತ ವಿಳಂಬ ಮಾಡಬೇಡವೆಂತ ತಾತ್ಪರ್ಯ, ಅದು ಹೇಗೆಂದರೆ ದೃಷ್ಟಾಂತದಿಂದ ವಿವರಿಸುತ್ತದೆ. ಅಶ್ರೀರಃ-ಗುಣಗಳಿಂದ ರಹಿತನಾದ ಕುತ್ಸಿತನಾದ, ಜಾಮಾತಾ ಇವ-ಅಳಿಯನು ಹೇಗೆ ಅನೇಕಾವರ್ತಿ ಆಹ್ವಾನಿಸಲ್ಪಟ್ಟಾಗ್ಯೂ ಸಾಯಂಕಾಲ ಪರ್ಯಂತವಾಗಿಯೂ ಮನೆಗೆ ಬರದಂತೆ ಕಾಲವಿಳಂಬ ಮಾಡುತ್ತಾನೆಯೋ ಹಾಗೆ, ತ್ವಂ-ನೀನು ನನ್ನ ಬಳಿಗೆ ಬರಲು ಕಾಲವಿಳಂಬವನ್ನು ಮಾಡಬೇಡ ಎಂತ ಅರ್ಥ.

ನಂತರ ಹಸ್ತದಲ್ಲಿ ಉದಕವನ್ನು ಹಾಕಿಕೊಂಡು

**ಉತ್ತಿಷ್ಠೋತ್ತಿಷ್ಠ ಗಂತವ್ಯಂ ಪುನರಾಗಮನಾಯ ಚ ।**
**ಉತ್ತಿಷ್ಠದೇವಿಸ್ಥಾತವ್ಯಂ ಪ್ರವಿಶ್ಯ ಹೃದಯಂ ಮಮ ॥**

ಎಂತ ಪ್ರದಕ್ಷಿಣಾಕಾರವಾಗಿ ನೀರನ್ನು ಸುತ್ತುಗಟ್ಟಬೇಕು. ಅಸಾವಾದಿತ್ಯೋ ಬ್ರಹ್ಮ ಎಂದು ಹೇಳಿ ಆಚಮನ ಮಾಡತಕ್ಕದ್ದು. ನಂತರ "ಅಪಸರ್ಪಂತು" ಇತ್ಯಾದಿನಾ ಗಾಯತ್ರೀಜಪ ಮುಗಿಸಿ, ಸಂಧ್ಯೋಪಸ್ಥಾನವನ್ನು ಪಶ್ಚಿಮಾಭಿಮುಖವಾಗಿ ಮಾಡತಕ್ಕದ್ದು.*

ಇಲ್ಲಿಗೆ ಋಗ್ವೇದ ಸಾಯಂಸಂಧ್ಯಾವಂದನವು ಮುಗಿದಿರುತ್ತೆ.



* "ಓಮಿತ್ಯೇಕಾಕ್ಷರಂ..." ಎಂದು ಆರಂಭಿಸಿ "ಮಧ್ಯೇ ಕೃಷ್ಣವರ್ಣಾ ಅಗ್ನಿರ್ಮುಖಂ" ಇತ್ಯಾದಿ ಹೇಳಬೇಕು. ನಂತರ ಜಪ ಮತ್ತು ಉಪಸ್ಥಾನ ಮಾಡತಕ್ಕದ್ದು.

## ಅಥ ಯಜುರ್ವೇದ ಸಾಯಂಸಂಧ್ಯಾವಂದನಂ

ಇದೂ ಸಹ ಪ್ರಾತಃಸಂಧ್ಯೆಯಂತೆಯೇ ಸರಿ. "ಸಾಯಂಸಂಧ್ಯಾ-ಮುಪಾಸಿಷ್ಯೇ" ಎಂತ ಸಂಕಲ್ಪಮಾಡಬೇಕು. ಇಲ್ಲಿಯೂ "ಸೂರ್ಯಶ್ಚ" ಎನ್ನುವ ಕಡೆ "ಅಗ್ನಿಶ್ಚ" ಎಂತಲೂ "ಸೂರ್ಯೋ ಜ್ಯೋತಿಷಿ" ಎನ್ನುವ ಕಡೆ "ಸತ್ಯೇ ಜ್ಯೋತಿಷಿ" ಎಂತಲೂ ಹೇಳಬೇಕು. ಉಳಿದ ಮಂತ್ರಗಳು ಪ್ರಾತಃ-ಸಂಧ್ಯೆಯ ಹಾಗೆಂದು ತಿಳಿಯಲ್ಪಡಬೇಕು. ಅರ್ಘ್ಯ ಪಶ್ಚಿಮಾಭಿಮುಖವಾಗಿ ಕೊಡಬೇಕು. ಗಾಯತ್ರೀಜಪಾನಂತರ ಸಂಧ್ಯೋಪಸ್ಥಾನ ಮಂತ್ರ ಮಾತ್ರ ಬೇರೆಯಾಗಿರುತ್ತೆ.

ಅದನ್ನು ಬರೆದು ಅರ್ಥ ಬರೆಯಲ್ಪಡುತ್ತದೆ.

### ಅಥ ಉಪಸ್ಥಾನ ಮಂತ್ರ

(ಪಶ್ಚಿಮಾಭಿಮುಖವಾಗಿ ನಿಂತು ಮಾಡಬೇಕು.)

೧. ಇಮಂ ಮೇ ವರುಣಶ್ರುಧೀಹವ ಮದ್ಯಾಚಮೃಡಯ । ತ್ವಾಮವ-ಸ್ಯುರಾ ಚಕೇ ॥

೨. ತತ್ವಾಯಾಮಿ ಬ್ರಹ್ಮಣಾ ವಂದಮಾನಃ ತದಾಶಾಸ್ತೇ ಯಜ-ಮಾನೋ ಹವಿರ್ಭಿಃ । ಅಹೇಡಮಾನೋ ವರುಣೇಹಬೋಧ್ಯುರು-ಶಗುಂಸಮಾನ ಆಯುಃ ಪ್ರಮೋಷೀಃ ॥

೩. ಯಚ್ಚಿದ್ಧಿತೇ ವಿಶೋ ಯಥಾ ಪ್ರದೇವ ವರುಣ ವ್ರತಮ್। ಮಿನೀ-ಮಸಿದ್ಯವಿದ್ಯವಿ ॥

೪. ಯತ್ಕಿಂಚೇದಂ ವರುಣದೈವ್ಯೇಜನೇಽಭಿದ್ರೋಹಂ ಮನುಷ್ಯಾ-ಶ್ಚರಾಮಸಿ । ಅಚಿತ್ತೀ ಯತ್ತವ ಧರ್ಮಾಯುಯೋಪಿಮ ಮಾನ-ಸ್ತಸ್ಮಾದೇನಸೋ ದೇವರೀರಿಷಃ ॥

೫. ಕಿತವಾಸೋಯದ್ರಿಪುರ್ನದಿವಿಯದ್ವಾಘಾಸತ್ಯಮುತಯನ್ನವಿದ್ಮ ॥ ಸರ್ವಾತಾವಿಷ್ಯ ಶಿಥಿರೇವ ದೇವಾಥಾತೇಸ್ಯಾಮ ವರುಣಪ್ರಿಯಾಸಃ । ಓಂ ನಮಃ ಪ್ರತೀಚ್ಯೈದಿಶೇ ................ ನಮೋ ನಮಃ ಎಂದು ಆರಂಭಿಸಿ ಚತುಸ್ಸಾಗರಪರ್ಯಂತಂ ............ ಅಭಿವಾದಯಾಮಿ ॥ (ಎಂತ ಹೇಳಬೇಕು.)

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ..............ಸಾಯಂಸಂಧ್ಯಾವಂದನೇನ ಭಗವಾನ್........ಪ್ರೀತೋ ಭವತು ಶ್ರೀಕೃಷ್ಣಾರ್ಪಣಮಸ್ತು ॥ ಕಾಯೇನ...........ಸಮರ್ಪಯೇತತ್ ॥ ಆಚಮ್ಯ, ಮಧ್ಯೇ ಮಂತ್ರ............ನಾಮತ್ರಯ ಮಂತ್ರಜಪಂ ಕರಿಷ್ಯೇ ॥ ಅಚ್ಯುತಾಯನಮಃ .........ಅಚ್ಯುತಾನಂತಗೋವಿಂದೇಭ್ಯೋ ನಮಃ ॥

॥ ಇತಿ ಯಜುರ್ವೇದೀಯ ಸಾಯಂಸಂಧ್ಯಾವಂದನಂ ಸಂಪೂರ್ಣಂ ॥

೧. ಹೇ ವರುಣ-ವರಣೀಯನಾದ ಅಂದರೆ ಸ್ತುತ್ಯನಾದ ಷಡ್ಗುಣೈಶ್ವರ್ಯಪೂರ್ಣನಾದ ಪರಮಾತ್ಮನೇ, ಅದ್ಯ-ಈಗ, ಮೇ-ನನ್ನ, ಇಮಂ-ಈ, ಹವಂ-ಆಹ್ವಾನವನ್ನು, ಶ್ರುಧಿ-ಶ್ರವಣ ಮಾಡು. ಚ-ಮತ್ತು, ಮೃಡಯ-ಸಂರಕ್ಷಣೆ ಮಾಡು. ಅಧಿಕಾರಿಯಾದ ನಾನು, ಆತ್ಮನಃ-ತನಗೆ, ಅವಸ್ಯುಃ-ಸಂರಕ್ಷಣೆಯನ್ನು ಅಪೇಕ್ಷಿಸತಕ್ಕವನಾಗಿ, ತ್ವಾಂ-ನಿನ್ನನ್ನು, ಆಚಕೇ-ಕಾಮಿಸುತ್ತೇನೆ.

೨. ಯತ ಏವ ಅಂತ ಅಧ್ಯಾಹಾರ ಮಾಡಿಕೊಂಡು ಈ ಮಂತ್ರಕ್ಕೆ ಅರ್ಥ ಹೇಳಬೇಕು. ಯತ ಏವ-ಯಾವ ಕಾರಣದಿಂದ, ಬ್ರಹ್ಮಣಾ-ವೇದದಿಂದ, ವಂದಮಾನಃ-ಸ್ತುತಿಯನ್ನು ಮಾಡತಕ್ಕ, ಯಜಮಾನಃ-ಮೋಕ್ಷಾಧಿಕಾರಿಯಾದ ಜೀವನು, ಹವಿರ್ಭಿಃ-ಹವಿಸ್ಸುಗಳನ್ನು ಕೊಡುವುದರಿಂದ ಅಥವಾ ಸ್ತೋತ್ರರೂಪವಾದ ಹವಿಸ್ಸುಗಳನ್ನು ಕೊಡುವುದರಿಂದ, ತದ್ರಕ್ಷಣಂ-ತನ್ನ ರಕ್ಷಣೆಯನ್ನು ಅಂದರೆ ಭವಬಂಧನದಿಂದ ಬಿಡುಗಡೆಯನ್ನು, ಆಶಾಸ್ತೇ-ಅಪೇಕ್ಷಾ ಮಾಡುತ್ತಾನೆಯೋ, ಅತ ಏವ-ಆದ್ದರಿಂದಲೇ ನಾನೂ ಕೂಡ, ತತ್-ವ್ಯಾಪ್ತನಾದ, ತ್ವಾ-ನಿನ್ನನ್ನು, ಆಯಾಮಿ-ಮೊರೆಯನ್ನು (ಅಂದರೆ ಶರಣಾಗತಿಯನ್ನು) ಹೊಂದುತ್ತೇನೆ, ಎಂದು ಅಭಿಪ್ರಾಯವು. ಹೇ ವರುಣ-ಎಲ್ಲೈ ವರುಣಾಂತರ್ಯಾಮಿ ವಾಸುದೇವನೇ, ತ್ವಂ-ನೀನು, ಮಾಂ-ನನ್ನನ್ನು, ಅಹೇಡಮಾನಃ-ಅಲ್ಪನಾದ ಮನುಷ್ಯನೆಂದು ತಿರಸ್ಕಾರವನ್ನು ಮಾಡದೇ, ಇಹ-ಈ ಜನ್ಮದಲ್ಲೇ ಭಕ್ತನೆಂದು ತಿಳಿದು ನನ್ನ ವಿಜ್ಞಾಪನೆಯನ್ನು, ಬೋಧಿ-ತಿಳಿಯತಕ್ಕವನಾಗು ಅಥವಾ ಕೇಳತಕ್ಕವನಾಗು, ಹೇ ಉರುಶಂಸ-

ಉತ್ಕೃಷ್ಟರಾದ ಬ್ರಹ್ಮಾದಿಗಳಿಂದ ಸ್ತುತ್ಯನಾದವನೇ, ನಃ-ನಮ್ಮಗಳ, ಆಯುಃ-ಜ್ಞಾನವೆಂಬ ಆಯುಸ್ಸನ್ನು, ಮಾ ಪ್ರಮೋಷೀಃ-ಅಪಹಾರ ಮಾಡಬೇಡ. (ಏತಕ್ಕೆಂದರೆ, ಜ್ಞಾನವಂತನಾಗಿ ಬದುಕುವುದೇ ಬದುಕು, ಜ್ಞಾನವಿಲ್ಲದೆ ಗೂಬೆಗಳ ಹಾಗೆ ಎಷ್ಟು ಕಾಲ ಬದುಕಿದರೂ ಅದು ಬದುಕಿದ ಪ್ರಾಯುವಲ್ಲ, ವ್ಯರ್ಥವೆಂತ "ಮೋಘಾಯುಃ" ಎಂಬ ಗೀತೋಕ್ತಿಯು ಇರುವುದರಿಂದ.)

೩. ಹೇ ದೇವ-ಎಲೈ ಕ್ರೀಡಾದಿ ಗುಣವಿಶಿಷ್ಟನಾದ, ವರುಣ-ವರುಣ ಶಬ್ದವಾಚ್ಯನಾದ ಪರಮಾತ್ಮನೇ, ವಿಶಃ-ಸಜ್ಜನರಾದ ವೈಶ್ಯರು ತಮಗೆ ಸ್ವಾಮಿಯಾದ ರಾಜನಿಗೆ ಹೇಗೆ ಪರಾಕನ್ನು ಮಾಡುತ್ತಾರೆಯೋ ಅಂದರೆ ಕಾಣಿಕೆಗಳನ್ನು ಒಪ್ಪಿಸೋಣವೇ ಮೊದಲಾದ ಸೇವೆಗಳನ್ನು ಸಲ್ಲಿಸುತ್ತಾರೆಯೋ, ಕಥಾ-ಹಾಗೆ, ವಯಂ-ನಾವು, ತೇ-ನಿನ್ನ ಸಂಬಂಧಿಯಾದ, ಯಚ್ಚಿತ್-ಯತ್ಕಿಂಚಿತ್ ಅಲ್ಪವಾದ, ವ್ರತಂ-ಶ್ರವಣಮನನರೂಪ ಸೇವಾದಿಗಳನ್ನು, ದ್ಯವಿದ್ಯವಿ-ದಿನದಿನದಲ್ಲಿಯೂ, ಪ್ರಮಿನೀಮಸಿ-ಖಂಡಾಗಿ ಮಾಡುತ್ತೇವೆ, ಹಿ-ನಿಶ್ಚಯವು.

೪. ಹೇ ವರುಣ-ಎಲೈ ವರುಣಾಂತರ್ಗತ ಶ್ರೀಹರಿಯೇ, ದೈವ್ಯೇ-ದೈವೀಸಂಪತ್ತುಳ್ಳ, ಜನೇ-ಸಜ್ಜನರಲ್ಲಿ ಅಥವಾ ದೇವಲೋಕವಾಸಿಗಳಾದ ದೇವತೆಗಳಲ್ಲಿ, ಯತ್ಕಿಂಚ ಸ್ವಲ್ಪವಾದ ಅಥವಾ ಅಧಿಕವಾದ, ಇದಂ-ಈ, ಅಭಿದ್ರೋಹಂ-ಅಪರಾಧವನ್ನು, ಮನುಷ್ಯಾಃ-ಮನುಷ್ಯಯೋನಿಯಲ್ಲಿ ಜನಿಸಿರುವ, ವಯಂ (ಅಧ್ಯಾಹಾರ)-ನಾವುಗಳು, ಅಚಿತ್ತೀ-ಅಜ್ಞಾನಪೂರ್ವಕವಾಗಿ, ಚರಾಮಸಿ-ಮಾಡುತ್ತೇವೆ. ಯತ್-ಯಾವುದು, ತವ-ನಿನ್ನ ಸಂಬಂಧಿಯಾದ ಅಂದರೆ ನಿನಗೆ ಪ್ರೀತಿಕರವಾದ, ಧರ್ಮ-ಭಾಗವತಧರ್ಮವೋ, ತತ್-ಅಂಥಾ ಕರ್ಮವನ್ನು, ಯುಯೋಪಿಮ-ಲೋಪ ಮಾಡುತ್ತೇವೆ. ಅಂದರೆ ಅನುಷ್ಠಾನ ಮಾಡುವುದಿಲ್ಲ. ಹೇ ದೇವ-ಕ್ರೀಡಾದಿ ಗುಣವುಳ್ಳ ಶ್ರೀಹರೇ, ತಸ್ಮಾತ್-ಆ, ಏನಸಃ-ಪಾಪದ ದೆಸೆಯಿಂದ, ನಃ-ನಮ್ಮಗಳನ್ನು, ಮಾ ರೀರಿಷಃ-ಹಿಂಸೆಯನ್ನು ಮಾಡಬೇಡ, ಅಂದರೆ ಧರ್ಮಭ್ರಷ್ಟರೆಂದು ನಮ್ಮನ್ನು ಕೃಪಾಸಮುದ್ರನಾದ ನೀನು ಹಿಂಸೆ ಮಾಡಬೇಡ, ಅಪರಾಧ ಕ್ಷಮಿಸಿ ಸನ್ಮಾರ್ಗಗಾಮಿಗಳಾಗುವಂತೆ ಅನುಗ್ರಹಿಸೆಂದು ಅಭಿಪ್ರಾಯ.

೫. ಹಿಂದಿನ ಮಂತ್ರದಲ್ಲಿ ಭಾಗವತಧರ್ಮವನ್ನು ಲೋಪ ಮಾಡುತ್ತೇವೆ ಎಂದು ಹೇಳಿದ್ದನ್ನು ಸದೃಷ್ಟಾಂತವಾಗಿ ಈ ಮಂತ್ರದ ಮೊದಲನೇ ಪಾದವು ವಿವರಿಸುತ್ತದೆ. ದಿವಿ-ದ್ಯೂತಾಕ್ರೀಡದಲ್ಲಿ, ನ-ಹೇಗೆ (ಇಲ್ಲಿ ನಕಾರವು ಉಪಮಾರ್ಥಕವಾದದ್ದು), ಕಿತವಾಸಃ-ವಂಚಕರಾದ ಧೂರ್ತರು, ಸ್ವಾರ್ಥ-ಸಾಧನಪರರಾಗಿ, ಯತ್-ಯಾವ ಪರರ ಅರ್ಥವನ್ನು, ರಿಪುಃ-ಮೋಸದಿಂದ ಅಪಹಾರ ಮಾಡುತ್ತಾರೆಯೋ, ತಥಾ-ಹಾಗೆ, ವಯಮಪಿ-ನಾವುಗಳೂ ಕೂಡ ನಿನ್ನ ಪೂಜೆಯನ್ನು ಲೋಪಗೊಳಿಸುತ್ತೇವೆ, ಜ್ಞಾನಿಯಂತೆ ನಟಿಸಿ, ಇಂಥಾ ಅಪರಾಧವನ್ನೂ ಕ್ಷಮಿಸೆಂದು ಪೂರ್ವಮಂತ್ರಕ್ಕೆ ಸೇರಿಸಿ ಅನ್ವಯವನ್ನು ಮಾಡಿಕೊಳ್ಳಬೇಕು. ಘ ಶಬ್ದವು ಪಾಪವಾಚಕವಾದದ್ದು. ಯದ್ವಾ-ಅಥವಾ, ಘಾ-ಪೂರ್ವೋಕ್ತವಾದ ಪಾಪಕರ್ಮವು, ಸತ್ಯಂ-ತಿಳಿದು ಮಾಡಲ್ಪಟ್ಟಿವೆಯೋ, ವಾ-ಅಥವಾ, ಯತ್ ನ ವಿದ್ಮ-ತಿಳಿಯಲ್ಪಡದೆ ಆಚರಿಸಲ್ಪಟ್ಟಿವೆಯೋ ಅಂಥಾ, ಸರ್ವಾ-ಸಮಸ್ತವಾದ, ತಾ-(ಸರ್ವಾಣಿ ತಾನಿ ಎಂತ ಪದಚ್ಛೇದವನ್ನು ಮಾಡಿಕೊಳ್ಳತಕ್ಕದ್ದು.) ಆ ಪಾಪಗಳನ್ನು, ಶಿಥಿರಾ ಇವ-ಶಿಲೆಯನ್ನೋಡದಿಯಲ್ಲಿ, ವಿಷ್ಯ-ನಾಶಗೊಳಿಸುವನಾಗು. ಅಂದರೆ, ಕಲ್ಲುಗಳನ್ನು ಸುತ್ತಿಗೆಯಿಂದ ಒಡೆದು ನಾಶಗೊಳಿಸುವಂತೆ ನಾಶಗೊಳಿಸು ಎಂತ ಅಭಿಪ್ರಾಯ. ಹೇ ದೇವ ವರುಣ-ಎಲೈ ಕಾಂತಿಯುಕ್ತನಾದ ವರುಣನೇ, ಅಥ-ನೀನು ನಮ್ಮ ಪಾಪಗಳನ್ನು ನಿವಾರಣೆ ಮಾಡಿದ ಮೇಲೆ, ವಯಂ-ನಾವು, ತೇ-ನಿನ್ನ, ಪ್ರಿಯಾಸಃ-ಪ್ರೀತಿವಿಷಯರಾದವರು, ಸ್ಯಾಮ-ಆಗುತ್ತೇವೆ.

ಸಾಯಂಕಾಲ ದಿಙ್ನಮಸ್ಕಾರವನ್ನು ಪಶ್ಚಿಮದಿಕ್ಕಿನಿಂದ ಆರಂಭಿಸಬೇಕು.

ಓಂ ನಮಃ ಪ್ರತೀಚ್ಯೈ ದಿಶೇ........ಅಭಿವಾದಯಾಮಿ ಎಂತ ಹೇಳಿ ಯಸ್ಯ ಸ್ಮೃತ್ಯಾ ಚ........ಶ್ರೀಕೃಷ್ಣಾರ್ಪಣಮಸ್ತು|| ಕಾಯೇನ........ ಸಮರ್ಪಯಾಮಿ || ಎಂದು ಯಜುರ್ವೇದ ಸಾಯಂಸಂಧ್ಯಾವಂದನವನ್ನು ಮುಗಿಸತಕ್ಕದ್ದು. ಅನಂತರದಲ್ಲಿ ಈ ಕೆಳಗೆ ಬಂದಿರುವ ಮಂತ್ರವನ್ನು ಉಚ್ಚರಿಸಿ ತ್ರಿಸಂಧ್ಯೆಗಳಲ್ಲಿಯೂ ತಾವು ಕೂತಿದ್ದ ಸ್ಥಳವನ್ನು ಪ್ರೋಕ್ಷಿಸಿ ಹೃದಯವನ್ನು ಸ್ಪರ್ಶ ಮಾಡತಕ್ಕದ್ದು. ಈ ಮಂತ್ರದಿಂದ ಪ್ರೋಕ್ಷಣವನ್ನು ಮೂರು ಶಾಖೆಗಳವರೂ ಅನುಷ್ಠಾನ ಮಾಡಬೇಕು.

**ಹರಿಃ ಓಮ್ ॥ ಅದ್ಯಾನೋ ದೇವಸವಿತಃ ಪ್ರಜಾವತ್ಸಾವೀಃ ಸೌಭಗಮ್ । ಪರಾದುಷ್ವಪ್ನಿಯಂ ಸುವ । ವಿಶ್ವಾನಿ ದೇವಸವಿತಃ ದುರಿತಾನಿ ಪರಾಸುವ । ಯದ್ ಭದ್ರಂ ತನ್ನ ಆಸುವ ॥ ಹರಿಃ ಓಮ್**

ಇದರ ಅರ್ಥ : ಹೇ ಸವಿತಃ-ಎಲ್ಲ ಜಗತ್ಪ್ರಸವಕರ್ತೃಕನಾದ, ದೇವ-ನಾರಾಯಣನೇ, ನಃ-ನಮ್ಮಗಳ, ಪ್ರಜಾವತ್ಸಾ-ಪುತ್ರರು ಶಿಷ್ಯರು ಪಶುಗಳೇ ಮೊದಲಾದವನ್ನು, ಅದ್ಯ-ಈಗ, ಆವೀಃ-ಸಂರಕ್ಷಿಸು, ನಃ-ನಮಗೆ, ಸೌಭಗಂ-ಮಂಗಳವನ್ನು, ದೇಹಿ-ಕೊಡು. ದುಷ್ವಪ್ನಿಯಂ-ದುಃಸ್ವಪ್ನದಿಂದ ಸೂಚಿತವಾದ ಅನಿಷ್ಟಗಳನ್ನು, ಪರಾಸುವ-ಪರಿಹರಿಸು. ಯತ್-ಯಾವದು, ಭದ್ರಂ-ಮಂಗಳಕರವಾದದ್ದೋ, ತತ್-ಅದನ್ನು, ನಃ-ನಮ್ಮಗಳಿಗೆ, ಆಸುವ-ಸೃಷ್ಟಿಸಿಕೊಡು.

ಮುಮುಕ್ಷುಗಳಾದ ದ್ವಿಜರು ಸಂಧ್ಯಾವಂದನವನ್ನು ಆಮರಣಾಂತವಾಗಿ ಒಂದು ದಿನವೂ ತಪ್ಪದೇ ಮಾಡಬೇಕು. "ಶುಚಿರ್ವಾಪ್ಯಶುಚಿರ್ವಾಪಿ, ಕಾಲೇ ಸಂಧ್ಯಾವಿಧೀಯತೇ" ಎಂಬ ವಚನದ ಆಧಾರದಿಂದ ಶುಚಿಯಾಗಿರಲೀ ಅಶುಚಿಯಾಗಿರಲೀ ಕಾಲಕ್ಕೆ ಸರಿಯಾಗಿ ಸಂಧ್ಯಾವಂದನವನ್ನು ಆಚರಿಸತಕ್ಕದ್ದೆಂದು ಅರ್ಥವಾಗುತ್ತದೆ. ಇದರ ಅಭಿಪ್ರಾಯವೇನೆಂದರೆ, ರೋಗಾದಿಗಳಿಂದಾಗಲೀ ಅಥವಾ ವಯೋಧರ್ಮದಿಂದಾಗಲೀ, ಸ್ನಾನಾದಿಗಳನ್ನು ಮಾಡಲು ಜಲಾಭಾವದಿಂದಲಾಗಲೀ ಆಗದಿದ್ದ ಸಂದರ್ಭದಲ್ಲಿ ಅಶುಚಿಯೆಂದು ತಿಳಿದು ಸಂಧ್ಯಾವಂದನವನ್ನು ಬಿಡಬಾರದು. ಮಂತ್ರಸ್ನಾನ ಅಥವಾ ಧ್ಯಾನ-ಸ್ನಾನವನ್ನು ಮಾಡಿಕೊಂಡು ಸಂಧ್ಯಾಕರ್ಮ ಮಾಡಬೇಕೆಂದು ತಾತ್ಪರ್ಯ. ಇನ್ನು ಮಾರ್ಗದಲ್ಲಿ ಪ್ರಯಾಣ ಮಾಡುತ್ತಿರುವಾಗ ಸಂಧ್ಯಾಕಾಲ ಪ್ರಾಪ್ತವಾದರೆ, ಬಂಧನದಲ್ಲಿದ್ದರೆ, ಅಶುಚಿಯಾಗಿದ್ದರೆ ನೀರೇ ಇಲ್ಲದಿದ್ದರೆ ಮನಸಾ ಸಂಧ್ಯಾಮಂತ್ರಗಳನ್ನು ಸ್ಮರಿಸಿ ಮಣ್ಣಿನ ಧೂಳನ್ನು ಕೈಯಲ್ಲಿ ತೆಗೆದುಕೊಂಡು ಸೂರ್ಯದೇವನಿಗೆ ಅರ್ಘ್ಯವನ್ನು ಕೊಡಬೇಕು ಎಂತ ಈ ಮುಂದಿನ ಪ್ರಮಾಣ ಹೇಳುತ್ತದೆ.

ಜಲಾಭಾವೇ ಮಹಾಮಾರ್ಗೇ ಬಂಧನೇತ್ಯಶುಚಾವಪಿ ।
ಉಭಯೋಃ ಸಂಧ್ಯಯೋಃ ಕಾಲೇ ರಜಸಾಮರ್ಘ್ಯಮುತ್ಸೃಜೇತ್॥
—ಇತಿ ಯೋಗ ಯಾಜ್ಞವಲ್ಕ್ಯಃ

ವ್ಯಾಸಸ್ಮೃತಿಯಲ್ಲಿ ಹೀಗೆ ಹೇಳಿರುತ್ತೆ—

ದೇಶಕ್ಷೋಭೇ ಮಹಾಪತ್ತೌ ಮಾರ್ಜನಾರ್ಘ್ಯಾದ್ಯಸಂಭವೇ ।
ಸಂಧ್ಯಾಗತಂ ಸಹಸ್ರಾಂಶುಂ ಮಂತ್ರೈಃಕುರ್ಯಾದುಪಸ್ಥಿತಿಮ್ ॥ ಇತಿ॥

ದೇಶವು ಭೂಕಂಪಾದಿಗಳಿಂದಲೋ, ರಾಜರ ಪರಸ್ಪರ ಕಲಹದಿಂದಲೋ, ಅಲ್ಲೋಲಕಲ್ಲೋಲವಾದಾಗ, ಮಹಾ ವಿಪತ್ತಿನ ಕಾಲದಲ್ಲಿ, ಮಾರ್ಜನಾ ಅಂದರೆ ಪ್ರೋಕ್ಷಣ, ಅರ್ಘ್ಯಾದಿಗಳನ್ನು ಕೂಡ ಮಾಡಲು ಅನನುಕೂಲ ವಾದಾಗ ಕೇವಲ ಮಂತ್ರಗಳಿಂದಲೇ ಸಂಧ್ಯಾ ಆಚರಿಸಬೇಕೆಂದು ಅರ್ಥ. ಅಂತೂ ಬಿಡಬಾರದೆಂಬುದರಲ್ಲಿ ಮುಖ್ಯ ತಾತ್ಪರ್ಯವು ಸಮಸ್ತ ಸಾತ್ವಿಕ ಧರ್ಮಶಾಸ್ತ್ರಗಳಿಗೆ ಉಂಟು.

ರಾಷ್ಟ್ರಕ್ಷೋಭೇ ನೃಪಕ್ರೋಧೇ ರೋಗಾರ್ತೇ ಶಾವಸೂತಕೇ ।
ಸಂಧ್ಯಾವಂದನ ವಿಚ್ಛಿತ್ತಿಃ ನ ದೋಷಾಯ ಕದಾಚನ ॥

ದೇಶವಿಪ್ಲವ, ರಾಜರ ಕೋಪ ಇವುಗಳು ಉಂಟಾದಾಗ, ರೋಗಗ್ರಸ್ಥರಾದಾಗ, ಮೃತಾಶೌಚ, ಜಾತಾಶೌಚಗಳು ಪ್ರಾಪ್ತವಾದಾಗ ಸಂಧ್ಯಾವಂದನಕ್ಕೆ ಲೋಪ ಬಂದರೆ ಯಾವ ಕಾಲಕ್ಕೂ ಅಧಿಕಾರಿಯಾದ ಜೀವನಿಗೆ ಪಾಪಕ್ಕೆ ಕಾರಣ ವಾಗುವುದಿಲ್ಲ. (ಅಂದರೆ, ಪಾಪಲೇಪವಿಲ್ಲವೆಂತ ತಿಳಿಯಬೇಕು.) ಮೃತ-ಸೂತಕ, ಜಾತಾಶೌಚಗಳಲ್ಲಿ ಸಂಧ್ಯಾವಂದನ ಬಿಡಬಹುದೆಂದು ಮೇಲಿನ ವಾಕ್ಯಕ್ಕೆ ಅರ್ಥವಾಗುತ್ತದೆ. ಹಾಗೆ ತಿಳಿಯಬಾರದು. ಆಗಲೂ ಸಂಧ್ಯಾ-ಕರ್ಮವನ್ನು ಆಚರಿಸಲೇಬೇಕು. ಆದರೆ ಮಂತ್ರಗಳಲ್ಲಿಯೂ ತಂತ್ರಗಳಲ್ಲಿಯೂ ಕೆಲವಕ್ಕೆ ಮಾತ್ರಾ ಲೋಪಪ್ರಸಕ್ತಿ ಬರುತ್ತದೆ. ಆದರಿಂದ ದೋಷವಿಲ್ಲವೆಂತ ಮೇಲಿನ ವಾಕ್ಯದ ಅಭಿಪ್ರಾಯ. ಹಾಗಾದರೆ ಅಶೌಚಾದಿಗಳಲ್ಲಿ ಹೇಗೆ ಸಂಧ್ಯಾ ವಂದನಕರ್ಮ ಆಚರಿಸಲ್ಪಡಬೇಕು ಎಂತ ಶಂಕಾ ಬಂದರೆ ಅದಕ್ಕೆ ಉತ್ತರ ಈ ರೀತಿಯಾಗಿರುತ್ತೆ.

ಅರ್ಘ್ಯಾಂತಂ ಮಾನಸೀ ಸಂಧ್ಯಾ ಅರ್ಘ್ಯಮಾತ್ರಂ ಸಮಂತ್ರಕಮ್ ।
ಅರ್ಘ್ಯಾಂತೇ ದಶಗಾಯತ್ರೀ ನೋಪಸ್ಥಾನಂ ನ ತರ್ಪಣಮ್ ॥ ಇತಿ ॥

ಇದರ ಅರ್ಥ: ಆಚಮನದಿಂದ ಆರಂಭಿಸಿ ಅರ್ಘ್ಯಪ್ರದಾನದವರೆಗೆ ಇರತಕ್ಕ ಮಂತ್ರಗಳನ್ನು ಮನಸ್ಸಿನಲ್ಲೇ ಸ್ಮರಿಸಿ ಕರ್ಮ ಮಾಡಬೇಕು. ಅನಂತರ ಸೂರ್ಯನಿಗೆ ಅರ್ಘ್ಯವನ್ನು ಕೊಡುವಾಗ ಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸಿ ಕೊಡಬೇಕು. ಆಮೇಲೆ ನ್ಯಾಸ, ಧ್ಯಾನಾದಿಗಳನ್ನು ಬಿಟ್ಟು ಕೇವಲ ಗಾಯತ್ರೀಮಂತ್ರವನ್ನು ಮನಸ್ಸಿನಲ್ಲಿ ಹತ್ತು ಆವರ್ತಿ ಜಪಿಸಬೇಕು. ಸೂರ್ಯೋಪಸ್ಥಾನವನ್ನಾಗಲೀ, ತರ್ಪಣವನ್ನಾಗಲೀ ಆಚರಣೆ ಮಾಡಕೂಡದು.

ಪ್ರಬಲವಾದ ಕಾರಣದಿಂದಾಗಲೀ ಅಥವಾ ಆಕಸ್ಮಿಕ ವಿಸ್ಮೃತಿಯಿಂದಾಗಲಿ ಹಗಲಿನಲ್ಲಿ ಆಚರಿಸಬೇಕಾಗಿದ್ದ ಸಂಧ್ಯಾದಿಕರ್ಮಗಳು ಬಿಟ್ಟುಹೋಗಿದ್ದರೆ ಆ ಕರ್ಮಗಳನ್ನು ರಾತ್ರಿ ಪ್ರಥಮ ಯಾಮದಲ್ಲಿ ಕ್ರಮವಾಗಿ ಮಾಡಲೇಬೇಕೆಂದು ಚಾತುರ್ಮಾಸ್ಯಮಾಹಾತ್ಮ್ಯೆಯಲ್ಲಿ ಶ್ರೀ ಬಾದರಾಯಣರು ಹೇಳಿರುತ್ತಾರೆ. ಅಷ್ಟೇ ಅಲ್ಲ, ಇತರ ಸ್ಮೃತಿಗಳಲ್ಲಿಯೂ ಪ್ರಮಾಣಗಳು ಹೇರಳವಾಗಿವೆ. ಇಲ್ಲಿ ವಿಸ್ತರಭಯದಿಂದ ಒಂದನ್ನು ಮಾತ್ರ ಉದಾಹರಿಸಿದೆ.

ದಿವೋದಿತಾನಿ ಕರ್ಮಾಣಿ ಪ್ರಮಾದಾದಕೃತಾನಿ ವೈ।
ಶರ್ವರ್ಯಾಃ ಪ್ರಥಮೇ ಯಾಮೇ ತಾನಿ ಕುರ್ಯಾದ್ಯಥಾಕ್ರಮಮ್ ॥ ಇತಿ

॥ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು॥

## ಅಥ ಋಗ್ವೇದೀಯ ಮಾಧ್ಯಾಹ್ನಿಕ ಸಂಧ್ಯಾ

ಸೂರ್ಯೋದಯಾರಭ್ಯ ಸೂರ್ಯಾಸ್ತಮಾನಪರ್ಯಂತ ಕಾಲವನ್ನು ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ನ, ಸಾಯಾಹ್ನ ಎಂದು ಐದು ಭಾಗವಾಗಿ ವಿಭಾಗಿಸಿ, ಮಧ್ಯಾಹ್ನ ಎಂದರೆ ಪ್ರಾಯಃ ೧೨ ಘಳಿಗೆಯಿಂದ ೧೮ ಘಳಿಗೆಯೊಳಗೆ ಮಾಧ್ಯಾಹ್ನಿಕ ಸಂಧ್ಯಾ ವಂದನ ಮಾಡಬೇಕು. ಅದರಲ್ಲೂ ೧೫ರಿಂದ ೧೬ ಘಳಿಗೆಯೊಳಗೆ ಉತ್ತಮ ಕಾಲ. ಸಾಯಂಕಾಲ ಸೂರ್ಯಾಸ್ತಮಯ ಪರ್ಯಂತ ಗೌಣಕಾಲವೆಂದು ತಿಳಿಯತಕ್ಕದ್ದು. ಆಪತ್ಕಾಲದಲ್ಲಿ ಸಾಯಂಸಂಧ್ಯೋತ್ತರ ಮಾಧ್ಯಾಹ್ನಿಕವನ್ನು ಮಾಡಬೇಕು, ಬಿಡಬಾರದು.

ಸೂರ್ಯಾಸ್ತಮಯಾನಂತರ ಮಾಧ್ಯಾಹ್ನಿಕ ಮಾಡುವ ಸಂದರ್ಭದಲ್ಲಿ "ಉದುತ್ಯ"ವೆಂದು ಕರೆಯಲ್ಪಡುವ ಸೌರಮಂತ್ರನನ್ನು ಗಟ್ಟಿಯಾಗಿ ಉಚ್ಚಾರ ಮಾಡದಂತೆ ಮನಸ್ಸಿನಲ್ಲೇ ಸ್ಮರಿಸಬೇಕು.

## ಸಂಕಲ್ಪ

ಆಚಮ್ಯ, ಪ್ರಾಣಾನಾಯಮ್ಯ, ಸಂಕಲ್ಪ್ಯ,

........ಶುಭತಿಥೌ, ಸೂರ್ಯಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣಪ್ರೇರಣಯಾ, ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಮಾಧ್ಯಾಹ್ನಿಕಸಂಧ್ಯಾಮುಪಾಸಿಷ್ಯೇ ॥ ಇತಿ ಸಂಕಲ್ಪ್ಯ.

ಆಪೋಹಿಷ್ಠೇತಿತ್ರ್ಯರ್ಚಸ್ಯಸೂಕ್ತಸ್ಯ....ಮಾರ್ಜನೇ ವಿನಿಯೋಗಃ।
ಆಪೋ ಹಿ ಷ್ಠಾ ಮಯೋಭುವಃ..........ಜನಯಥಾ ಚ ನಃ ॥

ಅಪಃ ಪುನಂತ್ವಿತ್ಯಸ್ಯ ಮಂತ್ರಸ್ಯ, ಪೂತಋಷಿಃ, ಆಪೋ ದೇವತಾ ಅಷ್ಟುಪ್ಛಂದಃ । ಅಪಾಂ ಪ್ರಾಶನೇ ವಿನಿಯೋಗಃ ॥ ಹರಿಃ ಓಮ್ ॥

೧. ಆಪಃ ಪುನಂತು ಪೃಥಿವೀಂ ಪೃಥಿವೀಪೂತಾ ಪುನಾತು ಮಾಂ।
ಪುನಂತುಬ್ರಹ್ಮಣಸ್ಪತಿರ್—ಬ್ರಹ್ಮಪೂತಾ ಪುನಾತು ಮಾಮ್ ॥

೨. ಯದುಚ್ಛಿಷ್ಟಮಭೋಜ್ಯಂ ತು ಯದ್ವಾ ದುಶ್ಚರಿತಂ ಮಮ।
ಸರ್ವಂ ಪುನಂತು ಮಾಮಾಪೋಽಸತಾಂ ಚ ಪ್ರತಿಗ್ರಹಂ ಸ್ವಾಹಾ ॥

ಎಂದು ಅಭಿಮಂತ್ರಿತವಾದ ಉದಕವನ್ನು ಪ್ರಾಶನ ಮಾಡಬೇಕು. ನಂತರ ಆಚಮನ ಮಾಡಬೇಕು.

ಅರ್ಥ: ಆಪಃ ಪುನಂತು ಎಂಬ ಮಂತ್ರಕ್ಕೆ ಪೂತನಾಮಕ ನಾರಾಯಣನು ಋಷಿ, ಅಪ್ಪಬ್ದವಾಚ್ಯ ಪರಮಾತ್ಮನು ದೇವತಾ, ಅಷ್ಟುಪ್ ಛಂದಸ್ಸು, ಉದಕಪ್ರಾಶನ ಮಾಡುವುದರಲ್ಲಿ ವಿನಿಯೋಗಿಸತಕ್ಕದ್ದು.

ಅಥ ಮಂತ್ರಾರ್ಥಃ :— ೧. ಆಪಃ-ಉದಕಗಳು, ತದಭಿಮಾನಿ-ದೇವತಾಗಳು ಮತ್ತು ತದಂತರ್ಗತ ಭಗವನ್ಮೂರ್ತಿಗಳು, ಪೃಥಿವೀಂ-ಯಾವ ಸ್ಥಳದಲ್ಲಿ ನಾನು ಕುಳಿತು ಸಂಧ್ಯಾವಂದನೆ ಮಾಡುತ್ತಿದ್ದೇನೆಯೋ ಆ ಸ್ಥಳ

ವನ್ನೂ, ಅಥವಾ ಪೃಥಿವೀ ಶಬ್ದದಿಂದ ಉಪಲಕ್ಷಿತವಾದ ಮಹಾಭೂತಾತ್ಮಕ ವಾದ, ವಿಕಾರಾತ್ಮಕವಾದ ಈ ನನ್ನ ದೇಹವನ್ನು, ಪುನಂತು-ಪವಿತ್ರವನ್ನಾಗಿ ಮಾಡಲಿ. ಪೂತಾ-ಸ್ವಯಂ ಪವಿತ್ರವಾದ, ಪೃಥಿವೀ-ಭೂಮಿ ಅಥವಾ ಭೂದೇವತೆಯು, ಪ್ರಸಿದ್ಧನಾದವನೂ ಮತ್ತು ಮಹತ್ತಾದವನೂ ಆದ್ದರಿಂದ ಪೃಥಿವೀಶಬ್ದವಾಚ್ಯ ನಾರಾಯಣನು, ಮಾಂ-ನನ್ನನ್ನು, ಪುನಾತು-ಪವಿತ್ರವನ್ನಾಗಿ ಮಾಡಲಿ. ಬ್ರಹ್ಮಣಃ-ಬ್ರಾಹ್ಮಣವರ್ಣಕ್ಕೂ ಅಥವಾ ವೇದಸಮೂಹಕ್ಕೂ, ತದಭಿಮಾನಿಗಳಾದ ಚತುರ್ಮುಖಬ್ರಹ್ಮನಿಗೂ, ಪತಿಃ-ಪಾಲಕನಾದ ಪರಮಾತ್ಮನು, ಮಾಂ-ನನ್ನನ್ನು, ಪುನಂತು-ಪುನೀತನನ್ನಾಗಿ ಮಾಡಲಿ. ಛಾಂದಸವಾದ್ದರಿಂದ ಕ್ರಿಯಾಪದದ ವಚನ ವ್ಯತ್ಯಾಸವಾಗಿರುತ್ತೆ, ಅಥವಾ ಬ್ರಹ್ಮಣಸ್ಪತಿಃ ಎನ್ನುವ ಕಡೆ ಪ್ರಥಮಾ ವಿಭಕ್ತಿ ದ್ವಿತೀಯಾರ್ಥದಲ್ಲಿ ಪ್ರಯೋಗವಾಗಿರುತ್ತೆ. ಆಗ ಪೂರ್ವೋಕ್ತವಾದ ತ್ರಿವಿಧವಾದ ಉದಕಗಳು. ಬ್ರಹ್ಮಣಃ-ವೇದವನ್ನು, ಪತಿಂ-ಉಪದೇಶ ಮಾಡುವುದರಿಂದ, ಪತಿಶಬ್ದವಾಚ್ಯರಾದ ನನ್ನ ಗುರುಗಳನ್ನು, ಪುನಂತು-ಪವಿತ್ರವನ್ನಾಗಿ ಮಾಡಲಿ. ಸಃ ಬ್ರಹ್ಮಣಸ್ಪತಿಃ-ಅಂಥ ಪವಿತ್ರರಾದ ನಮ್ಮ ಆಚಾರ್ಯರು ತದಂತರ್ಯಾಮಿ ಶ್ರೀಹರಿಯು ನನ್ನನ್ನು ಪವಿತ್ರೀಕರಿಸಲಿ. ಬ್ರಹ್ಮಪೂತಾ—ಬ್ರಹ್ಮ-ವೇದದಿಂದ. ಪೂತಾ-ವೇದೋಚ್ಚಾರಣಪೂರ್ವಕ ಅಭಿಮಂತ್ರಣಾದಿಗಳಿಂದ ಪವಿತ್ರವಾದ ಪೃಥಿವಿಯು, ಅಥವಾ, ಬ್ರಹ್ಮ-ನನ್ನ ಹೃದಯವರ್ತಿಯಾದ ಪರಬ್ರಹ್ಮನಿಂದ ಅಥವಾ ತಪಸ್ಸಿನಿಂದ, ಪೂತಾ-ಪವಿತ್ರಳಾದ, ಪೃಥಿವೀ-ಪ್ರಸಿದ್ಧಳಾದ, ವಾಗಭಿಮಾನಿಯಾದ ಸರಸ್ವತೀ ಮತ್ತು ಉಮಾದೇವಿಯು, ಮಾಂ-ನನ್ನನ್ನು ಪುನಾತು-ಪವಿತ್ರನನ್ನಾಗಿ ಮಾಡಲಿ.

೨. ಯತ್ ಉಚ್ಛಿಷ್ಟಂ-ಜಿಹ್ವಾಚಾಪಲ್ಯದಿಂದ ಉಚ್ಛಿಷ್ಟವಾದ ಅಂದರೆ ಎಂಜಲಾದ ಪದಾರ್ಥವನ್ನು ಭಕ್ಷಣ ಮಾಡಿದ್ದರಿಂದ ಬರತಕ್ಕ ಪಾಪವನ್ನೂ, ಅಭೋಜ್ಯಂ-ಭಗವದನರ್ಪಿತವಾದ, ಅನೃತದಿಂದ ಆರ್ಜಿತವಾದ, ಅನಗ್ನಿಕರಾದವರ ಮನೆಯವರದಾದ, ಕೂದಲು ಕ್ರಿಮಿಗಳಿಂದ ಯುಕ್ತವಾದ ಅನ್ನವನ್ನು ತಿಂದದ್ದರಿಂದ ಬರುವ ಪಾಪವನ್ನೂ, ಯದ್ವಾ-ಅಥವಾ, ಮಮ-ನನ್ನ, ದುಶ್ಚರಿತಂ-ದುರಾಚಾರವನ್ನು ಅಂದರೆ ನಿಷಿದ್ಧವಾದಂತಹ

ಮೈಥುನಾದಿ ವಾಕ್ಪಾಣಿಪಾದಶಿಶ್ನೋದರ ಚಾಪಲ್ಯದಿಂದ ಮಾಡಲ್ಪಟ್ಟ ಪಾಪವನ್ನೂ, ಚ–ಮತ್ತು, ಅಸತಾಂಚ–ಅಯೋಗ್ಯಜನಗಳ ದೆಸೆಯಿಂದ, ಅಯೋಗ್ಯವ್ಯಾಪಾರಗಳಿಂದ ಆರ್ಜಿತವಾದ ಧನವನ್ನು, ಪ್ರತಿಗ್ರಹಂ–ದಾನಸ್ವೀಕಾರಮಾಡೋಣವನ್ನು ಅಂದರೆ ಅದರಿಂದ ಬರತಕ್ಕ ಪಾಪವನ್ನೂ, ಆಪಃ–ಆಪಶ್ಶಬ್ದವಾಚ್ಯನಾದ ಶ್ರೀಹರಿಯು, ಸರ್ವಂ–ಪೂರ್ವೋಕ್ತವಾದ ಸಮಸ್ತ ಪಾಪವನ್ನು, ಪುನಂತು–ನನ್ನ ದೆಸೆಯಿಂದ ಹೋಗಲಾಡಿಸಿ ಪವಿತ್ರವನ್ನಾಗಿ ಮಾಡಲಿ. ಅದಕ್ಕೋಸ್ಕರವಾಗಿ, ಅಂದರೆ ಪಾಪಪರಿಹಾರಕ್ಕಾಗಿ ಅಭಿಮಂತ್ರಿತವಾದ ಈ ಜಲವು, ಸ್ವಾಹಾ–ನನ್ನ ಮುಖದಲ್ಲಿರುವ ಆಹವನೀಯಾಗ್ನಿಯಲ್ಲಿ, ಹುತಮಸ್ತು–ಹುತವಾಗಲಿ, ಎಂದು ಪ್ರಾಶನ ಮಾಡಿ ಆಚಮನ ಮಾಡಬೇಕು. ಮೇಲಿನ ಮಂತ್ರದಲ್ಲಿ ದುಶ್ಚರಿತಂ ಎಂತ ಹೇಳಿದ್ದರಿಂದಲೇ ಅಸಜ್ಜನರಿಂದ ದಾನಸ್ವೀಕಾರವೂ ದೋಷವೆಂತ ಹೇಳಿದಹಾಗಾಯಿತು ಅಂದಮೇಲೆ ಪುನಃ ಅಸತಾಂ ಪ್ರತಿಗ್ರಹಂ ಎಂತ ಏಕೆ ಹೇಳಬೇಕಾಗಿತ್ತು ಎಂದು ಸಂಶಯ ಬಂದರೆ ಅದಕ್ಕೆ ಉತ್ತರ ಹೀಗೆ ತಿಳಿಯತಕ್ಕದ್ದು. ಏನೆಂದರೆ, ಇತರ ದುಷ್ಕರ್ಮಗಳಕ್ಕಿಂತಲೂ ಅಸತ್ಪ್ರತಿಗ್ರಹವು ಹೆಚ್ಚು ಪಾಪವೆಂತಲೂ ದಾತೃ ಮತ್ತು ಪ್ರತಿಗೃಹೀತೃ ಇವರಿಬ್ಬರಿಗೂ ಐಹಿಕ ಮತ್ತು ಆಮುಷ್ಮಿಕಗಳಲ್ಲಿ ಅನರ್ಥಪ್ರದವೆಂದು ಸೂಚಿಸಲು ಪ್ರತ್ಯೇಕವಾಗಿ ಹೇಳಲ್ಪಟ್ಟಿರುತ್ತೆ. ಹೀಗೆಯೇ ಶ್ರೀ ಮನುವು ನಿರೂಪಣೆ ಮಾಡಿರುತ್ತಾನೆ.

" ಅತಪಾಸ್ತ್ವನಧೀಯಾನಃ ಪ್ರತಿಗ್ರಹಪರೋದ್ವಿಜಃ ।
ಅಂಭಸ್ಯಶ್ಮಪ್ಲವೇನೈವ ಸಹತೇನೈವಮಜ್ಜತಿ ॥ "

ಅನ್ಯತ್ರಾಪಿಃ " ವಿದ್ಯಾತಪೋಭ್ಯಾಂ ಹೀನೇನ ನ ತು ಗ್ರಾಹ್ಯಃ ಪ್ರತಿಗ್ರಹಃ
ಗೃಹ್ಣನ್ಪ್ರದಾತಾರಮಧೋ—ನಯತ್ಯಾತ್ಮಾನಮೇವ ಚ ॥ "

ಇತ್ಯಾದಿ

ತಪಸ್ಸು ಮಾಡದಿರುವ, ಅಧ್ಯಯನ ಮಾಡದಿರುವ ಬ್ರಾಹ್ಮಣನು ದಾನಸ್ವೀಕಾರ ಮಾಡುವುದರಲ್ಲಿ ಆಸಕ್ತನಾದರೆ, ನೀರಿನಲ್ಲಿ ಕಲ್ಲಿನ (ಪಾಷಾಣ) ದೋಣಿಯಲ್ಲಿ ದಾಟಲು ಹೋದವನಂತೆ ಅದರಿಂದ ಸಹಿತವಾಗಿ ಮುಳುಗುತ್ತಾನೆ. ವಿದ್ಯಾ, ತಪಸ್ಸುಗಳಿಂದ ರಹಿತನಾದವನಿಂದ ದಾನವು ಸ್ವೀಕರಿಸಲ್ಪಡ

ಬಾರದು. ಏಕೆಂದರೆ, ಸ್ವೀಕರಿಸತಕ್ಕವನು ದಾನ ಕೊಡತಕ್ಕವನನ್ನು ನರಕಕ್ಕೆ ಹಾಕುವುದಲ್ಲದೆ ತನ್ನನ್ನೂ ನರಕಾದ್ಯನರ್ಥಕ್ಕೆ ಗುರಿ ಮಾಡಿಕೊಳ್ಳುತ್ತಾನೆಂತ ತಾತ್ಪರ್ಯ. ನಂತರ ಪ್ರಾತಃಸಂಧ್ಯಾವಂದನೆಯಲ್ಲಿ ಹೇಳಿರುವ ವಿಧಿಯಿಂದ ಪುನರ್ಮಾರ್ಜನ ಮಾಡಿಕೊಳ್ಳಬೇಕು.

ಆಪೋಹಿಷ್ಠೇತಿ ನವರ್ಚಸ್ಯ ಸೂಕ್ತಸ್ಯ ........... ವಿನಿಯೋಗಃ ||
ಓಂ ಆಪೋ ಹಿ ಷ್ಠಾಮಯೋಭುವಃ ........ ಚಾಂತರಿಕ್ಷಮಥೋ ಸ್ವಃ ||
ಆಚಮ್ಯ, ಪುನಃ ಪ್ರಾಣಾಯಾಮ ಮಾಡಿ
ಪೂರ್ವೋಕ್ತ ಏವಂ ಗುಣ.............ಶುಭತಿಥೌ................ಪ್ರೀತ್ಯರ್ಥಂ ಮಾಧ್ಯಾನ್ಹಿಕ ಸಂಧ್ಯಾರ್ಘ್ಯಪ್ರದಾನಮಹಂ ಕರಿಷ್ಯೇ|| ಇತಿ ಸಂಕಲ್ಪ್ಯ

ಹಂಸಶ್ಶುಚಿಷದಿತ್ಯಸ್ಯ ಮಂತ್ರಸ್ಯ ಗೌತಮಪುತ್ರೋ ವಾಮದೇವ ಋಷಿಃ | ಸೂರ್ಯೋ ದೇವತಾ ಜಗತೀ ಛಂದಃ ಮಾಧ್ಯಾನ್ಹಿಕ ಸಂಧ್ಯಾರ್ಘ್ಯಪ್ರದಾನೇ ವಿನಿಯೋಗಃ || ಹರಿಃ ಓಂ ||

೧) ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ
ವೇದಿಷದತಿಥಿರ್ದುರೋಣಸತ್ |
ನೃಷದ್ವರಸದೃತ ಸದ್ವ್ಯೋಮ ಸದಬ್ಜಾ
ಗೋಜಾಋತಜಾ ಅದ್ರಿಜಾಋತಮ್ ||

(ಈ ಮಂತ್ರದಿಂದ ಪ್ರಥಮಾರ್ಘ್ಯವನ್ನು ಕೊಡಬೇಕು.)

ಆಕೃಷ್ಣೇನ ಹಿರಣ್ಯಸ್ತೂಪಃ, ಸವಿತಾ ತ್ರಿಷ್ಟುಪ್, ಮಾಧ್ಯಾನ್ಹಿಕ ಸಂಧ್ಯಾರ್ಘ್ಯಪ್ರದಾನೇ ವಿನಿಯೋಗಃ || ಹರಿಃ ಓಂ ||

೨) ಆಕೃಷ್ಣೇನರಜಸಾ ವರ್ತಮಾನೋ ನಿವೇಶಯನ್ನಮೃತಂ
ಮರ್ತ್ಯಂ ಚ | ಹಿರಣ್ಯಯೇನಸವಿತಾರಥೇನಾ ದೇವೋ-
ಯಾತಿ ಭುವನಾನಿ ಪಶ್ಯನ್ ||

(ಎಂತ ಎರಡನೇ ಆವರ್ತಿ ಅರ್ಘ್ಯ ಕೊಡಬೇಕು.)

ಗಾಯತ್ರ್ಯಾಃ ವಿಶ್ವಾಮಿತ್ರ ಋಷಿಃ, ಸವಿತಾದೇವತಾ, ಗಾಯತ್ರಿ ಛಂದಃ, ಮಾಧ್ಯಾನ್ಹಿಕಸಂಧ್ಯಾರ್ಘ್ಯಪ್ರದಾನೇ ವಿನಿಯೋಗಃ || ಹರಿಃ ಓಂ ||

೩) ಓಂಭೂರ್ಭುವಸ್ಸ್ವಃ। ತತ್ಸವಿತುರ್ವರೇಣ್ಯಂ। ಭರ್ಗೋ ದೇವಸ್ಯ ಧೀಮಹಿ। ಧಿಯೋಯೋನಃ ಪ್ರಚೋದಯಾತ್॥
(ಎಂತ ಮೂರನೇ ಅರ್ಘ್ಯವನ್ನು ಕೊಡತಕ್ಕದ್ದು.)

ಪ್ರಾತರ್ದೇವಿತ್ಯಸ್ಯ ಮಂತ್ರಸ್ಯ ಅಕ್ಷೋಕ ಋಷಿಃ, ಬ್ರಹ್ಮಾ ದೇವತಾ, ತ್ರಿಷ್ಟುಪ್ ಛಂದಃ ಮಾಧ್ಯಾಹ್ನಿಕಸಂಧ್ಯಾ ಕಾಲಾತಿಕ್ರಮ ದೋಷಪ್ರಾಯಶ್ಚಿತ್ತಾರ್ಘ್ಯಪ್ರದಾನೇ ವಿನಿಯೋಗಃ ॥ ಹರಿಃ ಓಂ ॥

೪) ಪ್ರಾತರ್ದೇವೀಮದಿತಿಂ ಜೋಹವೀಮಿ
ಮಧ್ಯಂದಿನ ಉದಿತಾ ಸೂರ್ಯಸ್ಯ। ರಾಯೇ
ಮಿತ್ರಾವರುಣಾಸರ್ವತಾತೇಳೆ। ತೋಕಾ
ಯತನಯಾಯಶಂ ಯೋಃ॥

(ಎಂದು ಕಾಲಾತಿಕ್ರಮ ಪ್ರಾಯಶ್ಚಿತ್ತಾರ್ಘ್ಯವನ್ನು ಕೊಡಬೇಕು.)

ಏಹಿ ತ್ವಂ ದೇವಿ ಶೀಘ್ರಂ ವೈ ಗಾಯತ್ರೀ ಬ್ರಹ್ಮರೂಪಿಣೀ।
ಜಪಾನುಷ್ಠಾನಸಿದ್ಧ್ಯರ್ಥಂ ಪ್ರವಿಶ್ಯ ಹೃದಯಂ ಮಮ॥
ಅಸಾವಾದಿತ್ಯೋ ಬ್ರಹ್ಮ॥

೧) "ಹಂಸಃ ಶುಚಿಷತ್........" ಎಂಬ ಋಙ್ಮಂತ್ರಕ್ಕೆ ಗೌತಮರ ಮಕ್ಕಳಾದ ವಾಮದೇವರೆಂಬುವರು ಋಷಿಗಳು, ಹಂಸನಾಮಕ ಸೂರ್ಯನು ದೇವತೆಯು, ಜಗತೀನಾಮಕ ಛಂದಸ್ಸು, ಸೂರ್ಯಾರ್ಘ್ಯಪ್ರದಾನದಲ್ಲಿ ವಿನಿಯೋಗವು ಎಂದು ತಿಳಿಯಬೇಕು.

ಮಂತ್ರಾರ್ಥ :— ಷಡ್ಗುಣೈಶ್ವರ್ಯಪೂರ್ಣನಾದ ಭಗವಂತನಲ್ಲಿ ಭಕ್ತಿ ಅಂದರೆ, ನಿರ್ವ್ಯಾಜವಾದ ಅಚಲವಾದ ಪ್ರೇಮವು ಉದಯಿಸುವುದಕ್ಕಾಗಿ ಹಂಸನಾಮಕ ಶ್ರೀಹರಿಯ ಮಹಿಮೆಯನ್ನು ಈ ಮಂತ್ರವು ವರ್ಣಿಸುತ್ತದೆ.

ಹಂಸಃ— "ಹಂಸಃಸೂರ್ಯೇಖಗೇವಿಷ್ಣೌ" ಎಂದು ಕೋಶ ಇರುವುದ ರಿಂದ ; ಸೂರ್ಯನು ತದಂತರ್ಯಾಮಿ ಶ್ರೀಹರಿಯು ದೋಷವರ್ಜಿತನಾದುದ ರಿಂದಲೂ, ಸಾರರೂಪನು ಅಂದರೆ ಸರ್ವೋತ್ತಮನು ಆದ್ದರಿಂದಲೂ, ಹಂಸ-ಶಬ್ದವಾಚ್ಯನಾಗಿರುತ್ತಾನೆ ಅಥವಾ ಆವಹನೀಯಾದಿ ಪಂಚಾಗ್ನಿಗಳಲ್ಲಿ ಅಥವಾ ಸರ್ವತ್ರದಲ್ಲಿ ವ್ಯಾಪಕನಾಗಿ ಅನಿರುದ್ಧಾದಿ ರೂಪಗಳಿಂದ ಇರುವುದರಿಂದಲೂ,

ಜಗತ್ಸಂಹಾರಕನಾದ್ದರಿಂದಲೂ, ಸರ್ವವನ್ನೂ ತಿಳಿಯತಕ್ಕವನಾದ್ದರಿಂದಲೂ ಹಂಸನೆಂದೆನಿಸುತ್ತಾನೆ. (ಹಂತೀತಿ ಹಂ, ಸರತಿ ಜಾನಾತಿ ಸರ್ವಮಿತಿ ಸಃ, ಹಂಚಾಸೌಸಶ್ಚೇತಿ ಹಂಸ ಇತಿ ರೂಪಂ)

**ಶುಚಿಷತ್**— ಶುಚಿಯಾದ ಪುಣ್ಯಕರವಾದ ದ್ವಾರಕಾದಿ ಕ್ಷೇತ್ರಗಳಲ್ಲಿ ಇರುವನಾದ್ದರಿಂದ ಶುಚಿಷತ್ ಎಂದು ಕರೆಯಲ್ಪಡುತ್ತಾನೆ ಅಥವಾ ಶುಚಿರ್-ಭೂತನಾದ ಅಂದರೆ ಅಜ್ಞಾನಾದಿ ದೋಷರಹಿತನಾದ ಪರಶುಕ್ಲತ್ರಯರಲ್ಲಿ ಒಬ್ಬನಾದ ಮುಖ್ಯಪ್ರಾಣನ ಅಂತರ್ಯಾಮಿಯು ಶ್ರೀಹರಿಯು.

**ವಸುಃ**— ಉತ್ತಮ ಸುಖರೂಪನೂ, ಜಗತ್ತನ್ನು ತನ್ನೊಳಗೆ ಇಟ್ಟು-ಕೊಂಡಿರುವವನು ಅಥವಾ ಸರ್ವತ್ರ ವಾಸಮಾಡಿಕೊಂಡಿರುವವನು ಎಂದರ್ಥ

**ಅಂತರಿಕ್ಷಸತ್**—"ಯೋ ಅಂತರಿಕ್ಷೇ ತಿಷ್ಠನ್" ಇತಿ ಶ್ರುತೇಃ. ಅಂತರಿಕ್ಷದಲ್ಲಿ ಇರತಕ್ಕವನು ಅಥವಾ ಅಂತಃ-ಒಳಗೆ, ಈಕ್ಷಣಂ-ದೃಷ್ಟಿಯು ಯಾರಿಗುಂಟೋ ಅಂಥವರ, ಅಂದರೆ ಧ್ಯಾನಮಾಡತಕ್ಕ ಋಷಿಗಳ ಧ್ಯಾನಕ್ಕೆ ಗೋಚರನಾಗಿ, ಸತ್-ಇರತಕ್ಕವನು ಎಂದು ಅರ್ಥ.

**ಹೋತಾ**— ಹೋತೃವಿನ ಒಳಗಿದ್ದು ಹೋಮ ಮಾಡತಕ್ಕವನು ಅಥವಾ ಸರ್ವೇಂದ್ರಿಯಗಳಲ್ಲಿ ವಿಷಯವನ್ನು ಹೋಮ ಮಾಡತಕ್ಕವನು ಮತ್ತು ಅನುಭವಿಸತಕ್ಕವನು ಶ್ರೀಹರಿಯು. ಆದ್ದರಿಂದ ಹೋತೃಶಬ್ದ-ವಾಚ್ಯನು.

**ವೇದಿಷತ್**— ಅಗ್ನಿಕುಂಡಗಳಲ್ಲಿ ಪೂಜ್ಯನಾಗಿ ಇರುವವನು ಮತ್ತು ಪೃಥಿವ್ಯಾದಿ ಸಕಲ ತತ್ವಗಳಲ್ಲಿ ವ್ಯಾಪಿಸಿರುವವನು ಎಂದು ಅಭಿಪ್ರಾಯ.

**ಅತಿಥಿಃ**— ಅತಿಶಯವಾದ ಅನ್ನವುಳ್ಳವನು ಅಥವಾ ಅನ್ನ ಕೊಡತಕ್ಕ ವಾಮನರೂಪಿಯಾದವನು. (ಆದ್ದರಿಂದಲೇ ಪ್ರಾತಃಕಾಲದಲ್ಲಿ ಶ್ರೀವಾಮನ ಸ್ತೋತ್ರವನ್ನು ಪಠಿಸಿದರೆ ಸುಖವಾಗಿ ಅನ್ನಪ್ರಾಪ್ತಿ ಆಗುತ್ತದೆಂದು ಶಿಷ್ಟರು ಸಂಪ್ರದಾಯ ಹಾಕಿರುತ್ತಾರೆ.) ಅತಿಥಿರೂಪಿಯಾದವನು.

**ದುರೋಣಸತ್**—ಯಜ್ಞಗಳಲ್ಲಿ ಸೋಮರಸನನ್ನು ಇಡತಕ್ಕ ದ್ರೋಣ ಕಲಶದಲ್ಲಿ ಇರತಕ್ಕವನು, ಅತಿಥಿರೂಪದಿಂದ ಪರಗೃಹದಲ್ಲಿರತಕ್ಕವನು, ಅಥವಾ ದುಃಖದಿಂದ ಅಂದರೆ ಬಹಳ ಪ್ರಯತ್ನದಿಂದ ರಕ್ಷಿಸಲ್ಪಡತಕ್ಕ, ಈ ದೇಹಾಖ್ಯಗೃಹದೊಳಗೆ ನಿಯಾಮಕತಯಾ ಇರತಕ್ಕವನು ಎಂದು ಅರ್ಥ.

**ನೃಷತ್**—ಮನುಷ್ಯರೊಳಗೆ ವೈಶ್ವಾನರನಾಮಕನಾಗಿ ಇರುವವನು, ಉಪಲಕ್ಷಣಯಾ ಸಮಸ್ತ ಪ್ರಾಣಿಗಳ ಜಠರಾಗ್ನಿ ನಿಯಾಮಕನಾಗಿ ಇರುವವನು.

**ವರಸತ್**—ಶ್ರೇಷ್ಠರಾದ ಬ್ರಹ್ಮಾದಿಗಳಲ್ಲಿರತಕ್ಕವನು. ಶ್ರೇಷ್ಠವಾದ ಗಂಗಾದಿ ತೀರ್ಥಗಳಲ್ಲಿರತಕ್ಕವನು ಎಂದು "ಸ ಏವ ದ್ರವರೂಪೇಣ ಗಂಗಾಂಭೋ ನಾತ್ರಸಂಶಯಃ" ಎಂಬ ಪ್ರಮಾಣವು ತಿಳಿಸುತ್ತದೆ.

**ಋತಸತ್**—ಜ್ಞಾನವನ್ನು ಉಂಟುಮಾಡುವ ವೇದಗಳಲ್ಲಿ ನಿಷ್ಪಾದಕನಾಗಿ ಇರುವವನು.

**ವ್ಯೋಮಸತ್**—ಅವ್ಯಾಕೃತಾಕಾಶದಲ್ಲಿಯೂ ತದಭಿಮಾನಿನೀ ರಮಾದೇವಿಯಲ್ಲಿಯೂ, ಸರ್ವರ ಹೃದಯಾಕಾಶದಲ್ಲಿಯೂ ಇರುವವನು ಎಂದು ತಿಳಿಯತಕ್ಕದ್ದು, ಅಥವಾ ಅಂತರಿಕ್ಷದಲ್ಲಿ ಸೂರ್ಯಾತ್ಮನಾಗಿ ಇರತಕ್ಕವನು, ಅಥವಾ ಅಂತರಿಕ್ಷದಲ್ಲಿರುವ ಗ್ರಹಗಳಿಗೆ ಧಾರಕನಾಗಿ ಶಿಂಶುಮಾರರೂಪನಾಗಿರತಕ್ಕವನು ಎಂದು ಅಭಿಪ್ರಾಯ.

**ಅಬ್ಜಾ**—ಉದಕದಲ್ಲಿ ಹುಟ್ಟುವ ಕಮಲಾದಿ ಪದಾರ್ಥಗಳಲ್ಲಿರುವವನು, ಅಥವಾ ಉದಕದಲ್ಲಿ ಮತ್ಸ್ಯ, ಕೂರ್ಮ, ವರಾಹಾದಿ ಅವತಾರಗಳನ್ನು ತಾಳಿದವನು ಎಂದು ಮತ್ತೊಂದು ಅರ್ಥ.

**ಗೋಜಾ**—ಗೋವಿನಿಂದ ಹುಟ್ಟತಕ್ಕ ಕ್ಷೀರಾದಿಗಳಲ್ಲಿಯೂ ಅಥವಾ ಭೂಮಿಯಲ್ಲಿ ಸಿಕ್ಕುವ ವಜ್ರಾದಿ ರತ್ನಗಳಲ್ಲಿಯೂ, ಸಸ್ಯಗಳಲ್ಲಿಯೂ ನಿಯಾಮಕನಾಗಿ ಇರತಕ್ಕವನು.

**ಋತಜಾ**—ಮುಕ್ತರಾದವರಲ್ಲಿರುವವನು ಮತ್ತು ಮುಕ್ತರ ಜ್ಞಾನಕ್ಕೆ ನಿಯಾಮಕನಾಗಿ ಇರುವವನು.

**ಅದ್ರಿಜಾ**—ಪರ್ವತಗಳಲ್ಲಿ ಹುಟ್ಟಿದ ವಸ್ತುಗಳಲ್ಲಿ ಇರತಕ್ಕವನು.

**ಋತಂ**—ಮುಖ್ಯವಾಗಿ ವೇದಪ್ರತಿಪಾದ್ಯನು, ಉಪಾಸನಾತ್ಮಕವಾದ ಯಜ್ಞವನ್ನು ಸೃಷ್ಟಿ ಮಾಡತಕ್ಕವನು. ಆದ್ದರಿಂದ ಋತಂ ಎಂದು ಕರೆಯಲ್ಪಡುತ್ತಿ. ಅಥವಾ ಸಮಸ್ತ ವೇದಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ನಿನ್ನ ಮಹಿಮೆಗಳೆಲ್ಲವೂ ಋತಂ-ಪಾರಮಾರ್ಥಿಕ ಸತ್ಯವಾದದ್ದೇ ಹೊರತು

ವ್ಯಾವಹಾರಿಕಸತ್ಯವಲ್ಲವೆಂದು ಮುಖ್ಯಾಭಿಪ್ರಾಯು. ಮತ್ತು ನನ್ನಲ್ಲಿರುವ ಸಮಸ್ತ ಪಾಪಗಳನ್ನು ಪರಿಹರಿಸುವ ಸಾಮರ್ಥ್ಯವು ನಿನಗಿರುವುದು. ಋತಂ-ಸತ್ಯವು, ಮಿಥ್ಯಾಭೂತವಲ್ಲ. ಆದ್ದರಿಂದ ನನ್ನ ಪಾಪಗಳನ್ನು ಪರಿಹರಿಸಿ ಸತ್ಯವಾಗಿಯೂ ನನ್ನನ್ನು ರಕ್ಷಿಸು ದೇವಾ! ಎಂತ ಪ್ರಾರ್ಥನಾಮಾಡುತ್ತೇನೆ. (ಯಜುರ್ವೇದದಲ್ಲಿ ಬೃಹತ್ ಎಂದು ಒಂದು ಪದ ಹೆಚ್ಚಿಗೆ ಇರುತ್ತೆ. ಅದಕ್ಕೆ ಮಹದ್ರೂಪಿಯಾದವನೆಂತ ಅರ್ಥ.)

(2) ಸವಿತಾ–ಸೂರ್ಯನು, ಕೃಷ್ಣೇನ–ಕಪ್ಪಾದ, ರಜಸಾ–ಕಣಗಳಿಂದ, ಅಂದರೆ ತಮಸ್ಸಿನ ಕಣಗಳಿಂದ ಆವೃತವಾದ ಅಂತರಿಕ್ಷಲೋಕದಿಂದ (ಅಂದರೆ ಸೂರ್ಯೋದಯಾತ್ ಪೂರ್ವದಲ್ಲಿ ಅಂತರಿಕ್ಷವು ಕತ್ತಲೆಯಿಂದ ಕೂಡಿರುತ್ತೆ. ಆ ಕತ್ತಲೆಯನ್ನು ಹೋಗಲಾಡಿಸಲು ಅಂತರಿಕ್ಷಮಾರ್ಗದಿಂದ) ಆವರ್ತಮಾನ-ಸಂಚಾರ ಮಾಡುತ್ತಾ, ಅಮೃತಂ–ದೇವತೆಗಳನ್ನು ಮತ್ತು ಅವರಿಗೆ ವಾಸಯೋಗ್ಯವಾದ ಸ್ವರ್ಗಲೋಕವನ್ನು, ಮರ್ತ್ಯಂ–ಮರಣಶೀಲರಾದ ಮನುಷ್ಯರನ್ನು ಮತ್ತು ಭೂಲೋಕವನ್ನು, ನಿವೇಶಯನ್–ತಮ್ಮ ತಮ್ಮ ಕಾರ್ಯೋನ್ಮುಖರಾಗುವಂತೆ ಮಾಡುವದಕ್ಕೋಸ್ಕರ ತನ್ನ ಕಿರಣಗಳನ್ನು ಪ್ರವೇಶಗೊಳಿಸುತ್ತಾ, ದೇವಃ–ಸೂರ್ಯದೇವನು, ಹಿರಣ್ಯಯೇನ-ಭಂಗಾರಮಯವಾದ, ರಥೇನ-ರಥದಲ್ಲಿ ಕೂತು, ಭುವನಾನಿ-ಲೋಕಗಳನ್ನು, ಪಶ್ಯನ್–ನೋಡುತ್ತಾ, ಆಯಾತಿ–ಬರುತ್ತಾನೆ ಅಂದರೆ ಸಂಚರಿಸುತ್ತಾನೆಂದು ಸೂರ್ಯನ ಪರವಾದ ಅರ್ಥ. (ಇದರಿಂದ ಸೂರ್ಯಗ್ರಹವು ಸಂಚಾರ ಮಾಡುವುದಿಲ್ಲವೆಂಬ ಆಧುನಿಕರ ಪಾಶ್ಚಾತ್ಯರ ವಾದವು ನಿರಸ್ತವಾದಂತಾಯಿತು.) ಇನ್ನು ಈ ಮಂತ್ರಕ್ಕೆ ಪರಮಾತ್ಮಪರ ಅರ್ಥ ಬರೆಯಲ್ಪಡುತ್ತೆ:—

ಸವಿತಾ–ಜಗತ್ಸರ್ಜಕನಾದ, ದೇವಃ–ಕಾಂತಿಯುಕ್ತನಾದ ಸೂರ್ಯಾಂತರ್ಗತನಾದ ಶ್ರೀಹರಿಯು, ಕೃಷ್ಣೇನ–ದೋಷಯುಕ್ತವಾದ, ರಜಸಾ–ರಾಗಾದಿಗಳಿಂದ ಕೂಡಿರುವ ಮನಸ್ಸಿನಿಂದ, ಆವರ್ತಮಾನಃ–ಸಂಸಾರದಲ್ಲಿ ತಿರುಗುತ್ತಿರುವ, ಮರ್ತ್ಯಂ–ಮರಣಶೀಲರಾದ ಮನುಷ್ಯರನ್ನು, ಅಮೃತಂ-ಮೋಕ್ಷವನ್ನು, ಆ-ಚೆನ್ನಾಗಿ, ನಿವೇಶಯನ್–ಹೊಂದಿಸುವದಕ್ಕೋಸ್ಕರ, ಭುವನಾನಿ–ಸರ್ವಲೋಕವನ್ನು ಅಂದರೆ ಸಮಸ್ತ ಜೀವರುಗಳ ಯೋಗ್ಯತೆಗಳನ್ನು, ಪಶ್ಯನ್–ನೋಡತಕ್ಕವನಾಗಿ, ಹಿರಣ್ಯಯೇನ ರಥೇನ–ಭಂಗಾರದ

ರಥದಲ್ಲಿ ಕೂತು, ಆಯಾತಿ-ಬರುತ್ತಾನೆ. (ಅಂದರೆ ಈ ದೇಹಾಖ್ಯ ರಥದಲ್ಲಿ ಇದ್ದು ಸಂಚರಿಸುತ್ತಾನೆ. "ಏಷವೈ ದೇವರಥಃ" ಇದು ಪರಮಾತ್ಮನ ರಥ ಎಂದು ದೇಹವನ್ನು ತಿಳಿದು ಉಪಾಸನಾ ಮಾಡತಕ್ಕದ್ದು.)

(3)ನೇದು ಗಾಯತ್ರಿಯಿಂದ ಅರ್ಘ್ಯ ಕೊಡಬೇಕು. ಗಾಯತ್ರೀ ಅರ್ಥವನ್ನು ಹಿಂದೆ ಬರೆದಿರುತ್ತೆ. ಅಲ್ಲಿ ನೋಡಬೇಕು.

(4) ಪ್ರಾತರ್ದೇವೀ...... ಎಂಬ ಮಂತ್ರಕ್ಕೆ ಅಕ್ಷೋಕರೆಂಬುವರು ಋಷಿಗಳು. ಬ್ರಹ್ಮಾ ದೇವತಾ, ತ್ರಿಷ್ಟುಪ್ ಛಂದಸ್ಸು. ಮಾಧ್ಯಾಹ್ನಿಕ ಸಂಧ್ಯಾಕಾಲಾತಿಕ್ರಮದೋಷದಲ್ಲಿ ಪ್ರಾಯಶ್ಚಿತ್ತಾರ್ಘ್ಯದಲ್ಲಿ ಹೇಳಲ್ಪಡಬೇಕು

ಪದವಿಭಾಗ:— ಪ್ರಾತಃ, ದೇವೀಮ್, ಅದಿತಿಮ್, ಜೋಹವೀಮಿ, ಮಧ್ಯಂದಿನೇ, ಉತ್, ಇತಾ, ಸೂರ್ಯಸ್ಯ, ರಾಯೇ, ಮಿತ್ರಾವರುಣಾ, ಸರ್ವತಾತೌ, ಈಳೇ, ತೋಕಾಯ, ತನಯಾಯ, ಶಂ, ಯೋಃ॥

ಅರ್ಥ:—ಅಹಂ-ನಾನು, ಪ್ರಾತಃ-ಪ್ರಾತಃಕಾಲದಲ್ಲಿ, ಅದಿತಿಂ-ದೇವಮಾತೆಯಾದ, ದೇವೀಂ-ಪ್ರಕಾಶಮಾನಳಾದ ಕಶ್ಯಪರ ಪತ್ನಿಯನ್ನು, ಮತ್ತು ಆಕೆಯ ಅಂತರ್ಯಾಮಿಯಾದ, ದೇವೀಂ-ಪ್ರಕಾಶಮಾನವಾದ, ಅದಿತಿಂ-ಪ್ರಳಯದಲ್ಲಿ ಚರಾಚರಾತ್ಮಕ ಪ್ರಪಂಚವನ್ನು ಭಕ್ಷಣ ಮಾಡತಕ್ಕ ಶ್ರೀ-ಅದಿತಿಶಬ್ದವಾಚ್ಯವಾದ ರೂಪವನ್ನು, ಜೋಹವೀಮಿ-ಪ್ರಾರ್ಥನೆಗಾಗಿ ಆಹ್ವಾನಿಸುತ್ತೇನೆ. ತಥಾ-ಹಾಗೆಯೇ, ಮಧ್ಯಂದಿನೇ-ಮಧ್ಯಾಹ್ನಕಾಲದಲ್ಲಿ, ಸೂರ್ಯಸ್ಯ ಉದಿತಾ-ಸೂರ್ಯನ ಸಮೃದ್ಧಿಕಾಲೇ ಅಂದರೆ ಸೂರ್ಯನು ನೆತ್ತಿಯ ಮೇಲೆ ಪ್ರಕಾಶಿಸುತ್ತಿರುವ ಕಾಲದಲ್ಲಿ—ಮಾಧ್ಯಂದಿನ ಸವನದಲ್ಲಿ ಜೋಹ-ವೀಮಿ-ಆಹ್ವಾನಮಾಡುತ್ತೇನೆ. ಹೇ ಮಿತ್ರಾವರುಣಾ-ಎಲೈ ಮಿತ್ರ ಮತ್ತು ವರುಣನಾಮಕ ದೇವತೆಗಳೇ, ತದಂತರ್ಗತ ಎಲೈ ಪರಮಾತ್ಮನೇ, ಯುವಾಂ-ನಿಮ್ಮಗಳನ್ನು, ರಾಯೇ-ಧನಪ್ರಾಪ್ತಿಗೋಸ್ಕರ ಅಥವಾ ಜ್ಞಾನಾಖ್ಯ ಧನ-ಪ್ರಾಪ್ತಿಗೋಸ್ಕರ, ಸರ್ವ-ತಾತೌ-ಸರ್ವ ಯಜ್ಞದಲ್ಲಿ, ಈಳೇ-ಸ್ತೋತ್ರಮಾಡುತ್ತೇನೆ. ಮತ್ತು ತೋಕಾಯ-ಸತ್ಸಂತಾನಕ್ಕೋಸ್ಕರವೂ, ತನಯಾಯ-ತತ್ಪುತ್ರನಿಗೋಸ್ಕರವೂ ಅಂದರೆ ಪೌತ್ರರಿಗೋಸ್ಕರವೂ, ಶಂ-ಅರಿಷ್ಟಶಮನಕ್ಕೋಸ್ಕರವೂ, ಯೋಃ-ಸುಖವನ್ನು ಯೋಜನೆ ಮಾಡುವುದಕ್ಕೂ ಕೂಡ. ಈಳೆ-ಸ್ತೋತ್ರ ಮಾಡುತ್ತೇನೆ ಎಂದು ಅರ್ಥವು.

ಹೇ ದೇವಿ-ಎಲೈ ಕ್ರೀಡಾದಿ ಗುಣವಿಶಿಷ್ಟಳೇ, ಗಾಯತ್ರೀ-ಗಾನ ಮಾಡತಕ್ಕ ಭಕ್ತರ ಪಾಪಗಳನ್ನು ಪರಿಹಾರ ಮಾಡತಕ್ಕವಳಾದ್ದರಿಂದ ಗಾಯತ್ರೀಶಬ್ದವಾಚ್ಯಳಾದ, ಬ್ರಹ್ಮರೂಪಿಣಿ-ಗುಣಪೂರ್ಣವಾದ ರೂಪವುಳ್ಳ ಎಲೈ ಗಾಯತ್ರಿಯೇ, ತ್ವಂ-ನೀನು, ಜಪಾನುಷ್ಠಾನಸಿದ್ಧ್ಯರ್ಥಂ-ನಾನು ಮಾಡತಕ್ಕ ಜಪಾದಿಗಳು ಸಿದ್ಧಿಯಾಗುವುದಕ್ಕಾಗಿ, ಮಮ ಹೃದಯಂ-ನನ್ನ ಹೃತ್ಕಮಲವನ್ನು, ಪ್ರವಿಶ್ಯ-ಪ್ರವೇಶ ಮಾಡಿ, ಶೀಘ್ರಂ-ವೇಗವಾಗಿ, ಏಹಿ-ಬರುವಳಾಗು ಅಂದರೆ ನನ್ನ ಹೃದಯದಲ್ಲಿ ತಕ್ಷಣ ವ್ಯಕ್ತಳಾಗು ಎಂತ ಅರ್ಥ.

ಇನ್ನು ಕೆಲವು ಋಷಿಮತದಂತೆ ಕಾಲಾತೀತ ಪ್ರಾಯಶ್ಚಿತ್ತಾರ್ಘ್ಯವನ್ನು ಕೊಡಲು ಈ ಮುಂದಿನ ಮಂತ್ರವನ್ನು ಹೇಳುವುದೂ ಉಂಟು :

ಓಂ ಉತಾಯಾತಂ ಸಂಗವೇ ಪ್ರಾತರಹ್ನೋ ಮಧ್ಯಂದಿನೇ।
ಉದಿತಾ ಸೂರ್ಯಸ್ಯ ದಿವಾನಕ್ತಮವಸಾ ಶಂತಮೇನ ॥
ನೇದಾನೀಂ ಪೀತಿರಶ್ವಿನಾತತಾನ ॥

ಪದವಿಭಾಗ :— ಉತ, ಆ, ಯಾತಂ, ಸಂಗವೇ, ಪ್ರಾತಃ, ಅಹ್ನಃ, ಮಧ್ಯಂದಿನೇ । ಉತ್, ಇತಾ, ಸೂರ್ಯಸ್ಯ, ದಿವಾ, ನಕ್ತಂ, ಅವಸಾ, ಶಂತಮೇನ । ನ, ಇದಾ ನೀಂ, ಪೀತಿಃ, ಅಶ್ವಿನಾ, ಆ, ತತಾನ ॥

ಎಲೈ ಅಶ್ವಿನೀದೇವತೆಗಳಿರಾ, ಉತ-ಮತ್ತು, ಆಯಾತಂ-ಬರತಕ್ಕವರಾಗಿರಿ. ಗೋವುಗಳು ರಾತ್ರೀಕಾಲದಲ್ಲಿ ಹಿಮತೃಣಗಳನ್ನು ಭಕ್ಷಣ ಮಾಡಿ ಸಂಗವಕಾಲದಲ್ಲಿ ಕ್ಷೀರವನ್ನು ದೋಹನಮಾಡಲು ಹಾಲುಕರೆವ ಸ್ಥಳಕ್ಕೆ ಹೇಗೆ ಬರುತ್ತವೆಯೋ ಹಾಗೆ ನೀವುಗಳೂ, ಪ್ರಾತಃ-ಪ್ರಾತಃಕಾಲದಲ್ಲೂ, ಸಂಗವೇ-ಸಂಗವಕಾಲದಲ್ಲೂ, ಅಹ್ನಃ ಮಧ್ಯಂದಿನೇ-ಮಧ್ಯಾಹ್ನಕಾಲದಲ್ಲಿ, ಸೂರ್ಯಸ್ಯ-ಸೂರ್ಯನ, ಉದಿತಾ-ಸಮೃದ್ಧಿಕಾಲದಲ್ಲಿ, ತಥಾ-ಹಾಗೆಯೇ, ದಿವಾನಕ್ತಂ-ಹಗಲು ರಾತ್ರಿಗಳಲ್ಲಿಯೂ, ಸಾಯಂಕಾಲದಲ್ಲೂ, ಉಪಲಕ್ಷಣಯಾ ಸದಾ ಕಾಲದಲ್ಲೂ, ಶಂತಮೇನ-ಅತ್ಯಂತ ಸುಖಕರವಾದ, ಅವಸಾ-ರಕ್ಷಣೆ ಮಾಡತಕ್ಕ ಹವಿಸ್ಸಿನ ನಿಮಿತ್ತದಿಂದ, ಆಯಾತಂ-ಬರುವರಾಗಿರಿ.

ಇದಾನೀಂ–ಇದುವರೆಗೂ ಇತರ ದೇವತೆಗಳಿಗೆ, ಪೀತಿಃ–ಪಾನವನ್ನು, ಅಶ್ವಿನಾ–ಅಶ್ವಿನೀದೇವತೆಗಳನ್ನು ಬಿಟ್ಟು, ನಾತತಾನ–ಕೊಟ್ಟಿರುವುದಿಲ್ಲ. ಅಂದರೆ ಹೇ ದೇವತೆಗಳಿರಾ, ನಿಮಗಾಗಿ ಮೀಸಲಾಗಿರತಕ್ಕ ಹವಿಸ್ಸನ್ನು ಸ್ವೀಕರಿಸಲು ಬನ್ನಿರಿ ಎಂದು ಅಭಿಪ್ರಾಯ.

**ಓಂ ಉದುತ್ಯಂ ಜಾತವೇದಸಮಿತಿ ತ್ರಯೋದಶರ್ಚಸ್ಯ ಸೂಕ್ತಸ್ಯ ಕಣ್ವಪುತ್ರಃ ಪ್ರಸ್ಕಣ್ವಋಷಿಃ ಸೂರ್ಯೋ ದೇವತಾ ನವಾದ್ಯಾ ಗಾಯತ್ರ್ಯಃ ಅಂತ್ಯಾಶ್ಚತುಸ್ರೋ ಅನುಷ್ಟುಭಃ ಉದ್ಯನ್ನದ್ಯೇತಿತ್ರಯಂ ತೃಚೋ ರೋಗಘ್ನಃ ಉಪನಿಷದಂತ್ಯಾರ್ಧರ್ಚಃ ದ್ವಿಷಘ್ನಃ ಸೂರ್ಯೋಪಸ್ಥಾನೇ ವಿನಿಯೋಗಃ ॥**

ಅರ್ಥ— ಉದುತ್ಯಂ ಜಾತವೇದಸ ಎಂಬ ಹದಿಮೂರು ಋಕ್ಕುಗಳುಳ್ಳ ಈ ಸೌರಸೂಕ್ತಕ್ಕೆ ಕಣ್ವಋಷಿಗಳ ಪುತ್ರರಾದ ಪ್ರಸ್ಕಣ್ವರೆಂಬುವವರು ಋಷಿಗಳು. ಸೂರ್ಯನಾಮಕ ಪರಮಾತ್ಮನು ಪ್ರತಿಪಾದ್ಯದೇವತೆಯು (ಅಮುಖ್ಯತಯಾ ಸಂಜ್ಞಾಕಶಿ ಸೂರ್ಯನೂ ದೇವತೆಯು). ಈ ಹದಿಮೂರು ಋಕ್ಕುಗಳ ಮಧ್ಯದಲ್ಲಿ ಮೊದಲಿನ ಒಂಬತ್ತು ಋಕ್ಕುಗಳು ಗಾಯತ್ರೀಛಂದಸ್ಸುಳ್ಳದ್ದು. ಕೊನೆಯ ನಾಲ್ಕು ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು. ಉದ್ಯಂನದ್ಯೇತಿ ಎಂಬುವ ಋಕ್ಕಿನಿಂದ ಮೂರು ಋಕ್ಕುಗಳು ಪಠನ ಮಾಡುವವರ ರೋಗಗಳನ್ನೆಲ್ಲಾ ಪರಿಹರಿಸುವ ಸಾಮರ್ಥ್ಯವುಳ್ಳದ್ದು. ಈ ಮಂತ್ರದ ಕೊನೆಯ ಅರ್ಧ ಋಕ್ಕು ಶತ್ರುಗಳನ್ನು ನಾಶಮಾಡತಕ್ಕದ್ದಾಗಿದೆ. ಇಂಥಾ ಮಹಿಮೋಪೇತವಾದ ಮಂತ್ರವನ್ನು ಸೂರ್ಯೋಪಸ್ಥಾನದಲ್ಲಿ (ಅಂದರೆ ಪ್ರಾರ್ಥನೆಯಲ್ಲಿ) ವಿನಿಯೋಗ ಮಾಡಬೇಕು ಎಂತ ಹೇಳಿ ಮಂತ್ರ ಪಠಿಸಬೇಕು.

**ಹರಿಃ ಓಂ ॥ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ದೃಶೇ ವಿಶ್ವಾಯ ಸೂರ್ಯಮ್ ॥ ೧ ॥**

ಕೇತವಃ–ಭಗವನ್ಮಹಿಮೋಪದೇಶಕರಾದ ವಿಷ್ಣುಭಕ್ತರು (ಭಗವಂತನ ರಥೋತ್ಸವಗಳಲ್ಲಿ ಅಥವಾ ಮಹಾರಾಜರು ದಿಗ್ವಿಜಯ ಮಾಡುವ ಕಾಲದಲ್ಲಿ ಪೂರ್ವಭಾವಿಯಾಗಿ ಮುಂದೆ ಬರುತ್ತಿರುವ ಧ್ವಜಾದಿ ವೈಭವವನ್ನು ನೋಡಿದ ಕೂಡಲೇ ದೇವರು ಬರುತ್ತಾ ಇದೆ ಅಥವಾ ರಾಜನು ಬರುತ್ತಾ ಇದ್ದಾನೆ ಎಂಬ

ವ್ಯವಹಾರಜ್ಞಾನವು ಉಂಟಾಗುತ್ತದೆ. ಆದ್ದರಿಂದ ವಿಷ್ಣುಭಕ್ತರು, ಧ್ವಜಾದಿಗಳು ದೇವರ ಮತ್ತು ರಾಜನಿಗೆ ಜ್ಞಾಪಕವಾದದ್ದು. ಆದ್ದರಿಂದ ಗೌಣ್ಯಾ-ವೃತ್ತಿಯಿಂದ ಕೇತುಶಬ್ದವಾಚ್ಯರು ಭಗವದ್ಭಕ್ತರು. ಸೂರ್ಯನಿಗೆ ಪ್ರಜ್ಞಾಪಕವಾದ್ದರಿಂದ ಸೂರ್ಯನ ಕಿರಣಗಳು ಕೇತುಶಬ್ದವಾಚ್ಯವಾದವುಗಳು.) ಅರುಣೋದಯಕಾಲದಲ್ಲಿ ಆಕಾಶದಲ್ಲಿ ಮೊದಲು ವ್ಯಾಪಿಸಿ ಕಾಣಿಸತಕ್ಕ ಕಿರಣಗಳು ಹೇಗೆ ಸೂರ್ಯನ ಉದಯಜ್ಞಾನವನ್ನು ಉಂಟುಮಾಡುತ್ತವೆಯೋ ಹಾಗೆ ಲೋಕದಲ್ಲಿ ದರ್ಶನ ಕೊಟ್ಟು, ವಿಶ್ವಾಯ-ಸರ್ವಸಜ್ಜನರುಗಳಿಗೆ, ದೃಶೇ-ಮೋಕ್ಷಕ್ಕೆ ಸಾಧನವಾದ ಜ್ಞಾನ ಉಪದೇಶಕ್ಕೋಸ್ಕರ, ತ್ಯಂ-ವ್ಯಾಪ್ತನಾದ ಮತ್ತು ಜ್ಞಾನಸ್ವರೂಪಿಯಾದ, ಜಾತವೇದಸಂ-ಸರ್ವವನ್ನೂ ಸಾಕಲ್ಯೇನ ತಿಳಿದಿರತಕ್ಕ, ದೇವಂ-ಕ್ರೀಡಾ, ಕಾಂತಿ ಮೊದಲಾದ ಗುಣವಿಶಿಷ್ಟನಾದ, ಸೂರ್ಯಂ ಜ್ಞಾನಿಗಮ್ಯನಾದ ಶ್ರೀಹರಿಯನ್ನು, ಉದ್ವಹಂತಿ-ಸರ್ವೋತ್ತ-ಮತ್ವೇನ ಉಪದೇಶವನ್ನು ಮಾಡುತ್ತಾರೆ. ಉ-ಪ್ರಸಿದ್ಧಿಯು ಅಥವಾ ನಿಶ್ಚಯವು. (ಎಲ್ಲಿ ಪ್ರಸಿದ್ಧಿ ಎಂದರೆ "ಆತ್ಮೇತಿತೂಪಗಚ್ಛಂತಿ, ಗ್ರಾಹಯಂತಿ ಚ" ಇತ್ಯಾದಿ ಸೂತ್ರಗಳಲ್ಲಿಯೂ, "ದರ್ಶನಾದೇವಸಾಧವಃ" ಇತ್ಯಾದಿ ಭಾಗವತ ವಾಕ್ಯಗಳಲ್ಲಿಯೂ ಪ್ರಸಿದ್ಧಿ ಎಂತ ತಿಳಿಯಬೇಕು.) ಉದುತ್ಯಂ ಎನ್ನುವಲ್ಲಿ ಉತ್, ಉ, ತಂ ಎಂತ ಪರಿಚ್ಛೇದ ಮಾಡತಕ್ಕದ್ದು. ಸೂರ್ಯಪರ ಅರ್ಥ: ಸೂರ್ಯನ ಕಿರಣಗಳು ಪ್ರಸಿದ್ಧನಾದ ನಮಗೆ ಕಾಣುತ್ತಿರುವ ಸೂರ್ಯನನ್ನು, ವಿಶ್ವಾಯ ದೃಶೇ-ಸಮಸ್ತ ಜನಗಳಿಗೆ ಜಗತ್ತಿನ ಜ್ಞಾನ ಹುಟ್ಟಿಸಲೋಸುಗ, ಉದ್ವಹಂತಿ-ಮೇಲಕ್ಕೆ ಧರಿಸುತ್ತವೆ ಎಂದು ಅ-ಮುಖ್ಯಾರ್ಥ.

ಅಪತ್ಯೇ ತಾಯವೋ ಯಥಾ ನಕ್ಷತ್ರಾ್ರಯಂತ್ಯಕ್ತುಭಿಃ ।
ಸೂರಾರ್ಯ ವಿಶ್ವಚಕ್ಷಸೇ ॥

ಅರ್ಥ: ನಕ್ಷತ್ರಾಃ-ಅಲ್ಪಸಾಮರ್ಥ್ಯದಿಂದ ಕೂಡಿರುವರಾದ್ದರಿಂದ ನಕ್ಷತ್ರಶಬ್ದವಾಚ್ಯರಾದ ದುರ್ಜನರಾದ, ತ್ಯೇ-ಪ್ರಸಿದ್ಧರಾದ, ತಾಯವಃ ಕಳ್ಳರುಗಳು, ವಿಶ್ವಚಕ್ಷಸೇ-ಸರ್ವಜ್ಞನಾದ, ಸೂರ್ಯಾಯ-ಚೆನ್ನಾಗಿ ಉದಯಿಸಿದ ಸೂರ್ಯನನ್ನು (ದ್ವಿತೀಯಾರ್ಥೇ ಚತುರ್ಥೀ), ದೃಷ್ಟ್ವಾ-ನೋಡಿ,

ಅಕ್ತುಭಿಃ ಸಹ-ತಮ್ಮ ಮೋಸ ಮಾಡತಕ್ಕ ಮಾಯಾವಿದ್ಯೆಗಳಿಂದ ಸಹಿತರಾಗಿ, ಯಥಾ-ಹೇಗೆ, ಅಪಯಂತಿ-ಓಡಿಹೋಗುತ್ತಾರೋ ಹಾಗೆಯೇ, ನಕ್ಷತ್ರಾಃ-ದುರ್ಜನರಂತೆ ನಮಗೆ ಕೇಡನ್ನುಂಟುಮಾಡುವುದರಿಂದ ನಕ್ಷತ್ರಶಬ್ದವಾಚ್ಯವಾದ ಕ್ರೋಧಾದಿಗಳು, ಅಕ್ತುಭಿಃ ಸಹ-ನಮ್ಮನ್ನು ಮೋಹಗೊಳಿಸುವ ಮಾಯಾದಿಗಳಿಂದ ಸಹಿತವಾಗಿ, ವಿಶ್ವಚಕ್ಷಸೇ ಸೂರಾಯ-ಸರ್ವಜ್ಞನಾದ ಪರಮಾತ್ಮನನ್ನು ನೋಡಿ, ಅಂದರೆ ಸಜ್ಜನರ ಉಪದೇಶದಿಂದ ನಮ್ಮ ಹೃದಯದಲ್ಲಿ ಪರಮಾತ್ಮನು ಉದಯಿಸುತ್ತಾ ಇರಲಿಕ್ಕಾಗಿ ಅಂದರೆ ವ್ಯಕ್ತನಾಗುತ್ತಿರಲಾಗಿ, ಅಪಯಂತಿ-ಓಡಿಹೋಗುತ್ತವೆ. (ಅಂದರೆ ಕಾಮಕ್ರೋಧಾದಿಗಳು ನಿರ್ಮೂಲವಾಗುತ್ತದೆಂತ ತಾತ್ಪರ್ಯ.)

ಅಥವಾ ನಕ್ಷತ್ರಾಃ-ಪುತ್ರರಿಲ್ಲದವರು (ಕ್ಷತ್ರ ಶಬ್ದಕ್ಕೆ ಪುತ್ರರೆಂದು ಅರ್ಥ. ಕ್ಷತಾತ್ ತ್ರಾಯತೇ ಇತಿ ಪುತ್ರಃ ಎಂಬ ವ್ಯುತ್ಪತ್ತಿಯಿಂದ) ಯಥಾ-ಹೇಗೆ, ಅಪತ್ಯೇ-ಪುತ್ರಾರ್ಥವಾಗಿ ಯಜ್ಞಾದಿಗಳಿಂದ ಶ್ರೀಹರಿಯನ್ನು ಸೇವಿಸುತ್ತಾರೋ ಹಾಗೆ, ತೇ-ಪ್ರಸಿದ್ಧರಾದ, ಆಯವಃ-ಜ್ಞಾನಿಗಳು, ಅಕ್ತುಭಿಃ-ಸ್ವರೂಪಸುಖದಿಂದ ಸುಖಪಡಲು ಅಂದರೆ ಮೋಕ್ಷಕ್ಕಾಗಿ, ಸೂರಾಯ-ಅತ್ಯಂತ ರಮಣೀಯನಾದ, ವಿಶ್ವಚಕ್ಷಸೇ-ಸರ್ವತ್ರ ನೇತ್ರಗಳುಳ್ಳ ಅಂದರೆ ಸರ್ವಜ್ಞನಾದ ಶ್ರೀಹರಿಯನ್ನು ಸೇವಿಸಿ, ಯಂತಿ-ಹೋದುತ್ತಾರೆ. ಇದು ಮುಖ್ಯಾರ್ಥವು.

ಸೂರ್ಯನ ಪರ: (ಪ್ರಸಿದ್ಧರಾದ ಕಳ್ಳರು ಸೂರ್ಯನನ್ನು ನೋಡಿ ಹೇಗೆ ಓಡಿಹೋಗುತ್ತಾರೋ ಹಾಗೆ ನಕ್ಷತ್ರಗಳು ಜಗತ್ತಿಗೆ ಪ್ರಕಾಶಕನಾದ ಸೂರ್ಯನು ಉದಯಿಸುತ್ತಿರುವುದನ್ನು ನೋಡಿ, ಅಕ್ತುಭಿಃ-ರಾತ್ರಿಯಿಂದ ಸಹಿತವಾಗಿ, ಅಪಯಂತಿ-ಅದೃಶ್ಯವಾಗುತ್ತವೆ. ಅಂದರೆ ಸೂರ್ಯೋದಯವಾದ ಕೂಡಲೇ ನಕ್ಷತ್ರಗಳು ಕಣ್ಣಿಗೆ ಕಾಣಿಸುವುದಿಲ್ಲ ಎಂತ ತಾತ್ಪರ್ಯ. ಇದು ಸೂರ್ಯನ ಪರವಾದ ಅಮುಖ್ಯಾರ್ಥವು.)

ಅದೃಶ್ರಮಸ್ಯ ಕೇತವೋ ವಿರಶ್ಮಯೋ ಜನಾಂ ಅನು ।
ಭ್ರಾಜಂತೋ ಅಗ್ನಯೋ ಯಥಾ ॥ ೩ ॥

ಅರ್ಥ: ಭ್ರಾಜಂತಃ-ಪ್ರಕಾಶಮಾನವಾದ, ಅಗ್ನಯಃ-ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಅಗ್ನಿಗಳು, ಯಥಾ-ಹೇಗೆ ಪದಾರ್ಥಗಳನ್ನು ಪ್ರಕಾಶಗೊಳಿಸುತ್ತವೆಯೋ, ತಥಾ-ಹಾಗೆ, ಅಸ್ಯ-ಈ ಸೂರ್ಯನ, ಕೇತವಃ-ಕಿರಣಗಳು, ರಶ್ಮಯಃ-ಪ್ರಕೃಷ್ಟಜ್ಞಾನಪಕರಾದ ರಶ್ಮಿಶಬ್ದವಾಚ್ಯರಾದ ವಿಷ್ಣು-ಭಕ್ತರುಗಳು, ಜನಾನ್-ಸಜ್ಜನರುಗಳನ್ನು ಅಥವಾ ಜಗತ್ತನ್ನು, ಅನು-ಕ್ರಮೇಣ, ವ್ಯದೃಶಂ-ಪ್ರಕಾಶಗೊಳಿಸುತ್ತಾರೆ. ಅಂದರೆ ಸೂರ್ಯನ ಕಿರಣಗಳು ಕ್ರಮೇಣ ಸೂರ್ಯಾಗಮನವನ್ನೂ ಮತ್ತು ವಿಷ್ಣುಭಕ್ತರು ಹೃದಯವರ್ತಿಯಾದ ಶ್ರೀಹರಿಯನ್ನು ಕ್ರಮೇಣ ಉಪದೇಶಾದಿಗಳಿಂದ ವ್ಯಕ್ತಮಾಡಿಸುತ್ತಾರೆಂತ ತಾತ್ಪರ್ಯವು.

ತರಣಿರ್ವಿಶ್ವದರ್ಶತೋಜ್ಯೋತಿಷ್ಕೃದಸಿ ಸೂರ್ಯ ।
ವಿಶ್ವಮಾಭಾಸಿರೋಚನಮ್ ॥ ೪ ॥

ಅರ್ಥ: ಇದುವರೆವಿಗೂ ಪರೋಕ್ಷವಾಗಿ ಶ್ರೀಹರಿಯನ್ನು ಸ್ತೋತ್ರ ಮಾಡಿ, ಈ ನಾಲ್ಕನೇ ಮಂತ್ರದಿಂದ ಅಪರೋಕ್ಷನಾಗಿ ಸ್ತೋತ್ರಮಾಡುತ್ತಾನೆ ವೇದಪುರುಷನು. ಹೇ ಸೂರ್ಯ-ಎತ್ತೈ ಜ್ಞಾನಿಗಮ್ಯನಾದ ಸೂರ್ಯನೇ, ತ್ವಂ-ನೀನು, ಸಂಸಾರಜಲಧಿಯ ತಾರಣ ಅಂದರೆ ದಾಟಿಸತಕ್ಕವನಾದ್ದರಿಂದ ತರಣಿಃ-ತರಣಿಶಬ್ದವಾಚ್ಯನು ಆಗಿದ್ದಿ. ವಿಶ್ವದರ್ಶತಃ-ಸರ್ವರಿಂದಲೂ ದರ್ಶನೀಯನು ಅನಲಾಗಿ ನೋಡಲ್ಪಡತಕ್ಕವನು ಆಗಿದ್ದಿ. ಅಥವಾ ಸಮಸ್ತ ಜಗತ್ತನ್ನು ಪ್ರಕಾಶಗೊಳಿಸತಕ್ಕವನು ಆಗಿದ್ದಿ. ಜ್ಯೋತಿಷ್ಕೃತ್-ಅಂತರಿಕ್ಷ-ಲೋಕದಲ್ಲಿ ಇರುವ ಜ್ಯೋತಿರ್ಮಯವಾದ ಸೂರ್ಯಾದಿ ಗ್ರಹಗಳನ್ನು ವಿಕಾರಗೊಳಿಸುವವನು, ಅಸಿ-ಆಗಿದ್ದಿ. ಅಥವಾ ಹೃದಯದಲ್ಲಿ ಜ್ಞಾನ-ಜ್ಯೋತಿಯನ್ನು ಹುಟ್ಟಿಸತಕ್ಕವನು ಆಗಿದ್ದಿ. ಮತ್ತು ಪ್ರಕಾಶಸ್ವರೂಪನಾದ ನೀನು, ವಿಶ್ವಂ-ಸಮಸ್ತ ಜಗತ್ತನ್ನು, ರೋಚನಂ ಯಥಾ ಭವತಿ ತಥಾ-ಮನೋಹರವಾದದ್ದು ಹೇಗೆ ಆಗಬೇಕೋ ಹಾಗೆ, ಆಭಾಸಿ-ಚೆನ್ನಾಗಿ ಪ್ರಕಾಶಗೊಳಿಸುತ್ತಿ ಎಂದು ತಾತ್ಪರ್ಯ.

ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ ಉದೇಷಿ
ಮಾನುಷಾನ್ । ಪ್ರತ್ಯಙ್ವಿಶ್ವಂ ಸ್ವರ್ದೃಶೇ ॥ ೫ ॥

**ಪರಮಾತ್ಮನ ಪರ ಅರ್ಥ:** ಹೇ ಸೂರ್ಯ-ಎಲೈ ಜ್ಞಾನಿಗಮ್ಯನಾದ ಸೂರ್ಯನೇ, ತ್ವಂ-ನೀನು, ದೇವಾನಾಂ-ದೇವತೆಗಳ, (ಮಧ್ಯೇ ಎಂತ ಅಧ್ಯಾಹಾರ ಮಾಡಿ, ಅರ್ಥ ಹೇಳಬೇಕು) ಹೃದಯದಲ್ಲಿ, ವಿಶಃ-ಪ್ರವೇಶ ಮಾಡಿರತಕ್ಕವನಾಗಿದ್ದಿ. ದೇವತೆಗಳ ಹೃದಯದಲ್ಲಿದ್ದರೂ ನೀನು, ಪ್ರತ್ಯಙ್-ಪೃಥಕ್ಕಾಗಿ ಅನಲಾಗಿ ಭಿನ್ನನಾಗಿದ್ದುಕೊಂಡೇ, ಉದೇಷಿ-ಅಪರೋಕ್ಷಜ್ಞಾನಕ್ಕೆ ವಿಷಯನಾಗಿರುತ್ತಿ. ಮತ್ತು ಪ್ರತ್ಯಙ್-ಭಿನ್ನನಾಗಿಯೇ, ಮಾನುಷಾನ್ ಪ್ರತಿ-ಸಜ್ಜನರುಗಳನ್ನು ಕುರಿತು, ಉದೇಷಿ-ವ್ಯಕ್ತನಾಗುತ್ತಿ. ಸ್ವರ್ದೃಶೇ-ನೀನು ಸ್ವತಂತ್ರ ಎಂಬ ಜ್ಞಾನ ಹುಟ್ಟಿಸಲೋಸುಗ, ವಿಶ್ವಂ-ಸಮಸ್ತ ಬ್ರಹ್ಮಾಂಡವನ್ನು, ಪ್ರತಿ-ಕುರಿತು, ಪ್ರತ್ಯಙ್-ಭಿನ್ನನಾಗಿದ್ದು, ಉದೇಷಿ-ಉದಯನಾಗುತ್ತಿ, ಅಂದರೆ ವ್ಯಕ್ತನಾಗುತ್ತಿ.

**ಸೂರ್ಯನ ಪರ ಅನುಖ್ಯಾರ್ಥ:** ಎಲೈ ಸೂರ್ಯನೇ ನೀನು, ದೇವಾನಾಂ-ದೇವತೆಗಳ ಮಧ್ಯದಲ್ಲಿ, ವಿಶಃ-(ಮರುತೋವೈ ದೇವಾನಾಂ ವಿಶಃ, ಅಂದರೆ ೪೯ ಮರುತ್ತುಗಳು ದೇವತೆಗಳಲ್ಲಿ ವೈಶ್ಯರೆನಿಸುತ್ತಾರೆ. ಆದುದರಿಂದ) ವೈಶ್ಯರೆನಿಸಿದ ಮರುದ್ದೇವತೆಗಳನ್ನು ಕುರಿತು, ಪ್ರತ್ಯಙ್-ಅಭಿಮುಖವಾಗಿಯೇ ಯಾವಾಗಲೂ, ಉದೇಷಿ-ಹುಟ್ಟುತ್ತಿ. (ಉದಯಿಸುತ್ತಿ), ಮಾನುಷಾನ್ ಪ್ರತಿಪ್ರತ್ಯಙ್ ಉದೇಷಿ-ಮನುಷ್ಯಲೋಕವನ್ನು ಕುರಿತು ಅಭಿಮುಖವಾಗಿ ಹುಟ್ಟುತ್ತಿ. ವಿಶ್ವಂ-ವ್ಯಾಪ್ತವಾದ, ಸ್ವರ್ದೃಶೇ-ಸ್ವರ್ಗವನ್ನು ನೋಡಲು, ಪ್ರತ್ಯಙ್-ಅಭಿಮುಖವಾಗಿ, ಉದೇಷಿ-ಉದಯಿಸುತ್ತಿ, ಅಂದರೆ ಭೂರಾದಿ ತ್ರಿಲೋಕಗಳಲ್ಲಿರತಕ್ಕ ಪ್ರಜೆಗಳಿಗೆ ಅಭಿಮುಖವಾಗಿ ಸೂರ್ಯೋದಯವಾಗುತ್ತದೆಂತ ಅಭಿಪ್ರಾಯ. ॥ ೫ ॥

**ಯೇನಾ ಪಾವಕಚಕ್ಷಸಾ ಭುರಣ್ಯಂತಂಜನಾನನು ।**
**ತ್ವಂ ವರುಣ ಪಶ್ಯಸಿ ॥ ೬ ॥**

**ಪರಮಾತ್ಮನ ಪರ ಅರ್ಥ:** ಹೇ ಪಾವಕ-ನಿನ್ನ ಸ್ಮರಣೆ ಮಾಡಿದ ಸಜ್ಜನರುಗಳ ದೋಷವನ್ನು ಪರಿಹರಿಸತಕ್ಕ ಎಲೈ ಪರಮಾತ್ಮನೇ, ಹೇ ವರುಣ-ಉತ್ಕೃಷ್ಟ ಸುಖರೂಪಿಯೇ, ತ್ವಂ-ನೀನು, ಜನಾನ್-ಸ್ವಭಕ್ತರುಗಳನ್ನು, ಅನು-ಅವರವರ ಯೋಗ್ಯತೆಗೆ ಅನುಸಾರವಾಗಿ, ಭುರಣ್ಯಂ-ನಿನ್ನ

ಭಕ್ತರನ್ನಾಗಿಯೂ, ಅಥವಾ ನಿನ್ನನ್ನು ಸಂತೋಷಪಡಿಸತಕ್ಕವರನ್ನಾಗಿಯೂ ಮಾಡಲು, ಯೇನ-ಯಾವ, ಚಕ್ಷಸಾ-ಪ್ರಕಾಶದಿಂದ ಅಥವಾ ಪ್ರಸಾದದಿಂದ (ಅಂದರೆ ಅನುಗ್ರಹದಿಂದ), ಪಶ್ಯಸಿ-ನೋಡುತ್ತೀಯೋ, ತಂ-ಅಂಥ ಪ್ರಸಾದ ವನ್ನು ಸ್ತೋತ್ರ ಮಾಡುತ್ತೇನೆಂತ ಅರ್ಥ.

**ಸೂರ್ಯನ ಪರ ಅರ್ಥ:** ಹೇ ಪಾವಕ-ಕಿರಣಗಳಿಂದ ಸರ್ವವನ್ನೂ ಶುದ್ಧಿ ಮಾಡತಕ್ಕವನೇ, ಹೇ ವರುಣ-ಪರ್ಜನ್ಯನಾಮಕನಾಗಿ ಮಳೆಯನ್ನು (ವೃಷ್ಟಿ) ಸುರಿಸುವ ಸೂರ್ಯನೇ, ತ್ವಂ-ನೀನು, ಜನಾನ್-ಜಾತವಾದ ಪ್ರಾಣಿ ಗಳನ್ನು, ಭುರಣ್ಯಂ-ಧಾರಣ ಮಾಡಿಕೊಂಡಿರುವ ಲೋಕವನ್ನು, ಅನು-ಕ್ರಮವಾಗಿ, ಯೇನ-ಯಾವ, ಚಕ್ಷಸಾ-ಪ್ರಕಾಶದಿಂದ, ಪಶ್ಯಸಿ-ನೋಡುತ್ತೀಯೋ ಅಂದರೆ ಪ್ರಕಾಶಗೊಳಿಸುತ್ತೀಯೋ, ತಂ-ಅಂಥಾ ಪ್ರಕಾಶವನ್ನು ಸ್ತೋತ್ರಮಾಡುತ್ತೇವೆ ಎಂದು ಅರ್ಥ. ॥ ೬ ॥

ವಿದ್ಯಾಮೇಷಿರಜಸ್ಪೃಥ್ವ ಹಾಮಿಮಾನೋ ಅಕ್ತುಭಿಃ ।
ಪಶ್ಯನ್ ಜನ್ಮಾನಿ ಸೂರ್ಯ ॥ ೭ ॥

**ಪರಮಾತ್ಮನ ಪರ ಅರ್ಥ:** ಹೇ ಸೂರ್ಯ-ಎಲ್ಲೈ ಜ್ಞಾನಿಗಮ್ಯನಾದ ಶ್ರೀಹರಿಯೇ, ತ್ವಂ-ನೀನು, ರಜಃ-ಭಕ್ತಿಯಿಂದ ದೇವರನ್ನು ರಂಜನ ಮಾಡುವ ಅಂದರೆ ಒಲಿಸತಕ್ಕವರಾದ ಭಕ್ತಜನರುಗಳ, ಅಕ್ತುಭಿಃ-ಕರ್ಮಾನು-ಸಾರದಿಂದ ಪ್ರಾಪ್ತವಾದ, ಜನ್ಮಾನಿ-ಜನ್ಮಗಳನ್ನು, ಪಶ್ಯನ್‌ಸನ್-ನೋಡ ತಕ್ಕವನಾಗಿ ದಯೆಯಿಂದ, ಅಹಾ-(ಓ ಹಾಕ್ ತ್ಯಾಗೇ ಎಂಬ ಧಾತುವಿನ ಅನುಸಾರವಾಗಿ) ನನ್ನ ಭಕ್ತರು ಎಲ್ಲೇ ಇರಲಿ ಅವರನ್ನು ಉದ್ಧಾರಮಾಡದೇ ಬಿಡುವವನು ನಾನಲ್ಲ, ಅಂದರೆ ಉದ್ಧಾರ ಮಾಡತಕ್ಕವನು ನಾನು ಎಂಬು ದನ್ನು ವ್ಯಕ್ತಗೊಳಿಸುವನಾಗಿ, ಮಿಮಾನಃ-ಮೊದಲು ಶಾಸ್ತ್ರಜ್ಞಾನವನ್ನು ಉತ್ಪಾದನ ಮಾಡತಕ್ಕವನಾಗಿ ನಂತರ, ಪೃಥು-ವಿಸ್ತಾರವಾದ ಅಥವಾ ವಿಶೇಷಾಕಾರವಾದ, ವಿದ್ಯಾಂ-ಅಪರೋಕ್ಷಜ್ಞಾನವನ್ನು ಕೊಡಲು, ಏಷಿ-ಇಚ್ಛೆಯನ್ನು ಮಾಡುತ್ತೀ ಎಂದು ಮುಖ್ಯಾರ್ಥ.

**ಸೂರ್ಯನ ಪರ ಅರ್ಥ:** ಹೇ ಸೂರ್ಯ-ಎಲ್ಲೈ ಸೂರ್ಯನೇ, ಪೃಥು-ವಿಸ್ತೀರ್ಣವಾದ, ರಜಃ-ರಜೋಗುಣದಿಂದ ಕೂಡಿರತಕ್ಕ ಪೃಥಿವಿಯನ್ನೂ,

ದ್ಯಾಂ-ಅಂತರಿಕ್ಷವನ್ನೂ, ವ್ಯೇಷಿ-ವಿಶೇಷವಾಗಿ ಹೊಂದುತ್ತಿ, ಏನು ಮಾಡ-ತಕ್ಕವನಾಗಿ ಅಂದರೆ, ಅಕ್ತುಭಿಃ-ರಾತ್ರಿಗಳಿಂದ, ಸಹ-ಸಹಿತವಾಗಿ, ಅಹಾ-ಹಗಲುಗಳನ್ನು, ಮಿಮಾನಃ-ಉತ್ಪಾದನ ಮಾಡತಕ್ಕವನಾಗಿ, ಜನ್ಮಾನಿ-ಜನ್ಮಗಳನ್ನು ಹೊಂದಿರತಕ್ಕ ಭೂತಗಳನ್ನು ಅಂದರೆ ಪ್ರಾಣಿಗಳನ್ನು, ಪಶ್ಯನ್-ನೋಡತಕ್ಕವನಾಗಿ ಸಂಚಾರ ಮಾಡುತ್ತಿ ಎಂದು ಅರ್ಥ. ॥ ೭ ॥

**ಸಪ್ತತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ।**
**ಶೋಚಿಷ್ಕೇಶಂ ವಿಚಕ್ಷಣ ॥ ೮ ॥**

**ಪರಮಾತ್ಮನ ಪರ ಅರ್ಥ :** ಹೇ ಸೂರ್ಯ-ಎಲೈ ವಿದ್ವದ್ಗಮ್ಯನೇ, ಹೇ ದೇವ-ಎಲೈ ಪ್ರಕಾಶಸ್ವರೂಪನೇ, ಹೇ ವಿಚಕ್ಷಣ-ಸಕಲ ಕಾರ್ಯಗಳಲ್ಲಿ ಕುಶಲನೇ, ಶೋಚಿಷ್ಕೇಶಂ-ತೇಜೋಮಯವಾದ ಕೇಶಗಳುಳ್ಳ ಕೇಶವಶಬ್ದ-ವಾಚ್ಯನಾದ, ತ್ವಾ-ನಿನ್ನನ್ನು, ರಥೇ-ಭಕ್ತರೆಂಬ ರಥದಲ್ಲಿ, ಸಪ್ತ-ಏಳಾದ, ಹರಿತಃ-ಕುದುರೆಗಳು ಅಂದರೆ "ಇಂದ್ರಿಯಾಣಿ ಹಯಾನಾಹುಃ" ಎಂದು ಕಠೋಪನಿಷತ್ತಿನಲ್ಲಿ ಹೇಳಿದ ಪ್ರಕಾರ ಪಂಚಜ್ಞಾನೇಂದ್ರಿಯಗಳು, ಮನಸ್ಸು ಮತ್ತು ಸಾಕ್ಷೀ ಹೀಗೆ ಏಳು ಇಂದ್ರಿಯಗಳು ಮತ್ತು ಅವುಗಳಿಂದ ಉಂಟಾದ ಏಳು ವಿಧವಾದ ಜ್ಞಾನಗಳು, ವಹಂತಿ-ಧರಿಸಿರುತ್ತವೆ. ಅಂದರೆ ನಿನ್ನನ್ನು ಹೃದಯದಲ್ಲಿ ವ್ಯಕ್ತಗೊಳಿಸುತ್ತವೆಂದು ಅಭಿಪ್ರಾಯ.

**ಸೂರ್ಯನ ಪರ ಅರ್ಥ :** ಎಲೈ ಪ್ರಕಾಶಮಾನನಾದ, ಕುಶಲನಾದ, ಸೂರ್ಯದೇವನೇ, ಶೋಚಿಷ್ಕೇಶಂ-ತೇಜಸ್ಸೇ ಕೇಶವಾಗಿ ಉಳ್ಳ, ತ್ವಾಂ-ನಿನ್ನನ್ನು, ಸಪ್ತ-ಏಳಾದ, ಹರಿತಃ-ಹರಿತವರ್ಣದ ಕುದುರೆಗಳು ಅಥವಾ ವಿಶ್ವವ್ಯಾಪಕವಾದ ಕಿರಣಗಳು, ರಥೇ-ರಥದಲ್ಲಿ, ವಹಂತಿ-ಧರಿಸುತ್ತವೆ, ಎಂತ ಅಭಿಪ್ರಾಯ.

**ಅಯುಕ್ತಸಪ್ತಶುಂಧ್ಯುವಸೂರೋರಥಸ್ಯನಪ್ತ್ಯಃ।**
**ತಾಭಿರ್ಯಾತಿಸ್ವಯುಕ್ತಿಭಿಃ ॥ ೯ ॥**

(ಈ ಒಂಭತ್ತು ಮಂತ್ರಗಳನ್ನು ಉಚ್ಚರಿಸುವವರೆಗೂ ಬಲಭುಜವನ್ನು ಬಲಗೈಯಿಂದಲೂ, ಎಡಭುಜವನ್ನು ಎಡಗೈಯಿಂದಲೂ ಮುಟ್ಟಿಕೊಂಡಿರ ಬೇಕು.)

**ಪರಮಾತ್ಮನ ಪರ ಅರ್ಥ:** ಸೂರಃ-ಸರ್ವಪ್ರೇರಕನಾದ ಶ್ರೀಹರಿಯು ರಥಸ್ಯ-ಭಕ್ತರ ದೇಹವೆಂಬ ತನ್ನ ರಥಕ್ಕೆ (ಏಷವೈ ದೇವರಥಃ ಅಥ ದೇವರಥಃ ಇತ್ಯಾದಿ ಶ್ರುತಿಗಳಲ್ಲಿ ಹೇಳಿರತಕ್ಕ ರಥಕ್ಕೆ) ನಪ್ತ್ಯಃ-ಕೆಳಗೆ ಹಾಕದೇ ಇರತಕ್ಕ, ಸಪ್ತ-ಏಳಾದ, ಅಂದರೆ ಸಪ್ತಸ್ವರೂಪಗಳುಳ್ಳ, ಶುಂಧ್ಯುವಃ-ಶೋಧಕಗಳಾದ ಏಳು ಇಂದ್ರಿಯಾಖ್ಯ ಅಥವಾ ತಜ್ಜನ್ಯವಾದ ಜ್ಞಾನಾಖ್ಯ ಹೆಣ್ಣುಕುದುರೆಗಳನ್ನು, ಅಯುಕ್ತ-ಕಟ್ಟಿರುತ್ತಾನೆ. ಸ್ವಯುಕ್ತಿಭಿಃ-ತನ್ನಿಂದ ಯೋಜಿಸಲ್ಪಟ್ಟ, ತಾಭಿಃ-ಆ ಇಂದ್ರಿಯಗಳಿಂದ ಅಥವಾ ಬುದ್ಧಿಗಳಿಂದ, ಯಾತಿ-ಭಕ್ತರ ದೇಹಾಖ್ಯ ರಥದಲ್ಲಿ ಹೊಂದಲ್ಪಡುತ್ತಾನೆ. ಅಂದರೆ ಜ್ಞಾನಕ್ಕೆ ವಿಷಯನಾಗುತ್ತಾನೆಂತ ಆಶಯ.

**ಸೂರ್ಯನ ಪರ ಅರ್ಥ :** ಸರ್ವಪ್ರೇರಕನಾದ ಸೂರ್ಯನು ತನ್ನ ರಥಕ್ಕೆ ಕೆಳಗೆ ಪಾತವನ್ನು ಉಂಟುಮಾಡದಿರುವ, ಶೋಧಕಗಳಾದ ಏಳು ಹೆಣ್ಣು-ಕುದುರೆಗಳನ್ನು, ಅಯುಕ್ತ-ಕಟ್ಟಿರುತ್ತಾನೆ. ಸ್ವಯುಕ್ತಿಭಿಃ-ತನ್ನಿಂದ ಕಟ್ಟಲ್ಪಟ್ಟ, ತಾಭಿಃ-ಆ ಕುದುರೆಗಳಿಂದ, ಯಾತಿ ಲೋಕಗಳನ್ನು ಪ್ರಕಾಶಗೊಳಿಸುತ್ತಾ ಪ್ರಯಾಣ ಮಾಡುತ್ತಾನೆ. ॥ ೯ ॥

**ಉದ್ವಯಂತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಮ್ ।**
**ದೇವಂ ದೇವತ್ರಾ ಸೂರ್ಯಮಗನ್ಮಜ್ಯೋತಿರುತ್ತಮಮ್ ॥ ೧೦ ॥**

**ಪರಮಾತ್ಮನ ಪರ ಅರ್ಥ :** ವಯಂ-ಸ್ತೋತ್ರ ಮಾಡತಕ್ಕ ನಾವುಗಳು, ತಮಸಃ-ಕತ್ತಲೆ ಅಥವಾ ಪಾಪದ ದೆಶೆಯಿಂದ, ಉತ್‌ಪರಿ-ಮೇಲೆ ಇರತಕ್ಕ ಅಂದರೆ ಪಾಪದ ಸಂಬಂಧವಿಲ್ಲದ, ಅಥವಾ ಕತ್ತಲೆಯನ್ನು ಅತಿ-ಕ್ರಮಿಸಿ ಇರತಕ್ಕ, ಉತ್ತರಂ-ಉತ್ಕೃಷ್ಟವಾದ, ಜ್ಯೋತಿಃ-ಕಾಂತಿರೂಪನಾದ, ದೇವತ್ರಾ-ದೇವತೆಗಳನ್ನು, ಉಪಲಕ್ಷಣಯಾ ಭಕ್ತಜನಗಳನ್ನು ರಕ್ಷಿಸತಕ್ಕ, ದೇವಂ-ಜ್ಞಾನಾದಿ ಗುಣಯುಕ್ತನಾದ, ಸೂರ್ಯಂ-ಸೂರ್ಯನನ್ನು, ಪಶ್ಯಂತಃ-ಧ್ಯಾನದಲ್ಲಿ ನೋಡತಕ್ಕವರಾಗಿ, ಉತ್ತಮಂ-ಸರ್ವೋತ್ತಮನಾದ, ಜ್ಯೋತಿಃ-ಪ್ರಕಾಶಸ್ವರೂಪನಾದ, ಸೂರ್ಯಂ-ಜ್ಞಾನಿಗಮ್ಯನಾದ ಶ್ರೀಹರಿಯನ್ನು, ಅಗನ್ಮ-ಹೊಂದುತ್ತೇವೆ.

**ಸೂರ್ಯನ ಪರ :** ನಾವುಗಳು, ತಮಸಃ- ಕತ್ತಲೆಯ ಅಥವಾ ರಾಹು-ಮಂಡಲಕ್ಕಿಂತ, ಉತ್‌ಪರಿ-ಮೇಲುಭಾಗದಲ್ಲಿರತಕ್ಕ, ಉತ್ತರಂ-ಉತ್ಕೃಷ್ಟನಾದ, ಜ್ಯೋತಿಃ-ಕಾಂತಿಸ್ವರೂಪನಾದ, ದೇವತ್ರಾ-ಗ್ರಹದೇವತೆಗಳಲ್ಲಿ, ದೇವಂ-ಅಧಿಕ ಕಾಂತಿಶೀಲನಾದ, (ಜ್ಯೋತಿಶ್ಶ್ರೇಷ್ಠೋ ದಿವಾಕರಃ) ಸೂರ್ಯನನ್ನು, ಪಶ್ಯಂತಃ-ನೋಡತಕ್ಕವರಾಗಿ, (ಅಂದರೆ ಅರ್ಚಿರಾದಿ ಮಾರ್ಗಗಳಿಂದ ತಿಳಿಯತಕ್ಕವರಾಗಿ) ಉತ್ತಮಂ-ಶ್ರೇಷ್ಠನಾದ, ಜ್ಯೋತಿಃ-ಪ್ರಕಾಶಸ್ವರೂಪನಾದ, ಸೂರ್ಯಂ-ಸೂರ್ಯಮಂಡಲವನ್ನು, ಅಗನ್ಮ-ಹೊಂದುತ್ತೇವೆ ಎಂದು ಅಭಿಪ್ರಾಯ.

**ಉದ್ಯನ್ನದ್ಯಮಿತ್ರಮಹ ಆರೋಹನ್ನುತ್ತರಾಂ ದಿವಮ್ ।**
**ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥೧೧॥**

**ಪರಮಾತ್ಮ ಪರ:** ಹೇ ಮಿತ್ರಮಹ-ಅನಿಮಿತ್ತಬಂಧುವಾದ್ದರಿಂದ ಸರ್ವರಿಂದ ಪೂಜ್ಯನಾದ, ಸೂರ್ಯ-ಸರ್ವಪ್ರೇರಕನಾದ ಎಲೈ ಸೂರ್ಯನೇ, ಅದ್ಯ-ಈಗ, ಉದ್ಯನ್-ಹೃದಯದಲ್ಲಿ ವ್ಯಕ್ತನಾಗತಕ್ಕವನಾಗಿ, ಉತ್ತರಾಂ-ಉತ್ತಮವಾದ, ದಿವಂ-ಸ್ವರ್ಗವನ್ನು ಉಪಲಕ್ಷಣಯಾ ಮಹರಾದಿ ಊರ್ಧ್ವಲೋಕಗಳನ್ನು, ತನ್ನ ಭಕ್ತರುಗಳನ್ನು ಆರೋಹನ್-ಹೊಂದಿಸುವ, ತ್ವಂ-ನೀನು, ಮಮ-ನನ್ನ, ಹರಿಮಾಣಂ-ಜ್ಞಾನನಾಶಕವಾದ ಅಥವಾ ಅಪರೋಕ್ಷಜ್ಞಾನಕ್ಕೆ ಪ್ರತಿಬಂಧಿಯಾಗಿರುವ, ಹೃದ್ರೋಗಂ ಚ-ಮನಸ್ಸಿನಲ್ಲಿರುವ ಅಜ್ಞಾನಾಖ್ಯ ರೋಗವನ್ನು ಅಥವಾ ಕಾಮಾದಿ ದೋಷಗಳನ್ನೂ ಕೂಡ, ನಾಶಯ-ಪರಿಹರಿಸು.

**ಶುಕೇಷು ಮೇ ಹರಿಮಾಣಂ ರೋಪಣಾಕಾಸು ದಧ್ಮಸಿ ।**
**ಅಥೋ ಹಾರಿದ್ರವೇಷುಮೇ ಹರಿಮಾಣಂ ನಿದಧ್ಮಸಿ ॥ ೧೨ ॥**

**ಪರಮಾತ್ಮನ ಪರ:** ಎಲೈ ಪರಮಾತ್ಮನೇ ತ್ವಂ-ನೀನು, ಮೇ-ನನ್ನ ಸಂಬಂಧಿಯಾದ, ಹರಿಮಾಣಂ-ಮಿಥ್ಯಾಜ್ಞಾನವನ್ನು ಅಂದರೆ ಅಜ್ಞಾನಾಖ್ಯ ರೋಗವನ್ನು, ಶುಕೇಷು-ದುಃಖಸ್ವರೂಪಿಗಳಾದ ಅಥವಾ ಕ್ರೋಧಾದಿಗಳಿಂದ ಕೂಡಿರುವ, ರೋಪಣಾಕಾಸು-ಜಗತ್ತು ಬ್ರಹ್ಮನಲ್ಲಿ ಆರೋಪಿತವಾದದ್ದು ಎಂದು ತಿಳಿದಿರುವ ಮನಸ್ಸುಳ್ಳ ಮಾಯಾವಾದಿಗಳಲ್ಲಿ, ದಧ್ಮಸಿ-

ಇಡತಕ್ಕವನಾಗು. ಅಥೋ–ಮತ್ತು, ಮೇ–ನನ್ನ, ಹರಿಮಾಣಂ–ಅಜ್ಞಾನ ವನ್ನು ಅಥವಾ ಉಪದ್ರವಕಾರಿಯಾದ, ಮನಃ–ಕಾಲಸ್ಯವನ್ನು, ಹಾರಿದ್ರ-ವೇಷು–ಪಾಪಿಜನಗಳಲ್ಲಿ, ನಿದಧ್ಮಸಿ–ನಿತರಾಂ ಇಡತಕ್ಕವನಾಗು, ನನ್ನನ್ನು ಪರಿಶುದ್ಧನನ್ನಾಗಿ ಮಾಡು ಎಂತ ಅರ್ಥ.

**ಸೂರ್ಯನ ಪರ :** ಎಲೈ ಸೂರ್ಯನೇ ತ್ವಂ–ನೀನು, ಮೇ–ನನ್ನ ಶರೀರ-ಗತವಾದ, ಹರಿಮಾಣಂ–ಕಾಂತಿಯನ್ನು ಅಪಹಾರ ಮಾಡುತ್ತಿರುವ, ಹರಿತ್-ವರ್ಣರೂಪವಾದ, ರೋಗವನ್ನು ಅಂದರೆ ಹಸಿರು ಬಣ್ಣವನ್ನು, ಶುಕೇಷು–ಶೋಭನವಾದ ಕುತ್ತಿಗೆಯುಳ್ಳ ಗಿಳಿಗಳಲ್ಲಿಯೂ, ರೋಪಣಾಕಾಸು–ಸಾರಿಕಾ ಪಕ್ಷಿಗಳಲ್ಲಿಯೂ, ದಧ್ಮಸಿ–ಇಡತಕ್ಕವನಾಗು. ಅಥೋ–ಅನಂತರದಲ್ಲಿ, ಮೇ–ನನ್ನ, ಹರಿಮಾಣಂ–ಹಸಿರು ಬಣ್ಣವನ್ನು, ಹಾರಿದ್ರವೇಷು–ಅರಿದಳದ ಗಿಡ ಗಳಲ್ಲಿ, ನಿದಧ್ಮಸಿ–ನಿತರಾಂ ಸ್ಥಾಪಿಸು. ಅಂದರೆ ನನ್ನ ದೇಹಗತವಾದ ಕಾಮಾಲೆ, ಕ್ಷಯಾದಿ ಸಮಸ್ತ ರೋಗಗಳನ್ನು ಪರಿಹರಿಸು ಎಂತ ಅಭಿಪ್ರಾಯ.

**ಉದಗಾದಯಮಾದಿತ್ಯೋ ವಿಶ್ವೇನ ಸಹಸಾ ಸಹ ।**
**ದ್ವಿಷಂತಂ ಮಹ್ಯಂ ರಂಧಯನ್ಮೋ ಅಹಂ ದ್ವಿಷತೇ ರಧಂ ॥೧೩॥**

**ಪರಮಾತ್ಮನ ಪರ :** ಅಯಂ–ಪುರೋವರ್ತಿಯಾದ, ಆದಿತ್ಯಃ–ಅದಿತಿದೇವಿಯಲ್ಲಿ ಅವತರಿಸಿದ ಅಥವಾ ಆದಾನಾದಿಕರ್ತನಾದ ಸೂರ್ಯಾಂತರ್ಗತ ವಾಮನದೇವರು, ವಿಶ್ವೇನ–ಪೂರ್ಣವಾದ, ಸಹಸಾ–ಬಲದಿಂದ, ಸಹ–ಸಹಿತ ವಾಗಿ, ಅಥವಾ ಪೂರ್ಣ ಬಲವುಳ್ಳ ವಾಯುದೇವರಿಂದ ಸಹಿತನಾಗಿ, ಮಹ್ಯಂ–ನನ್ನನ್ನು, ದ್ವಿಷಂತಂ–ದ್ವೇಷ ಮಾಡತಕ್ಕ ಶತ್ರುಗಳನ್ನು, ರಂಧಯನ್–ಹಿಂಸೆ ಮಾಡತಕ್ಕವನಾಗಿ, ಉದಗಾತ್ – ಉದಯಿಸತಕ್ಕವನಾಗಿರುತ್ತಾನೆ. ತಸ್ಮಾತ್–ಆದ್ದರಿಂದ, ದ್ವಿಷತೇ–ನನ್ನ ದ್ವೇಷ ಮಾಡತಕ್ಕವರಿಗೆ, ಅಹಂ–ನಾನು, ರಧಂ–ಹಿಂಸೆಯನ್ನು, ಮೋ–ಮಾಡುವುದಿಲ್ಲ. ಶ್ರೀಹರಿಯೇ ಶಿಕ್ಷಿಸು ತ್ತಾನೆಂತ ಅರ್ಥ.

**ಸೂರ್ಯನ ಪರ:** ಈ ಎದುರಿಗೆ ಕಾಣುತ್ತಿರುವ ಸೂರ್ಯನು ವಿಶ್ವೇನ, ಸಹಸಾ, ಸಹ–ಸಂಪೂರ್ಣವಾದ ಕಾಂತಿಯಿಂದ ಸಹಿತವಾಗಿ ನನ್ನನ್ನು ದ್ವೇಷ ಮಾಡತಕ್ಕ ಉಪದ್ರವಕಾರಿಗಳಾದ ಶತ್ರುಗಳನ್ನು, ರಂಧಯನ್–ಹಿಂಸೆಗೊಳಿ

ಸುತ್ತಾ, ಉದಗಾತ್–ಉದಯಿಸುತ್ತಾನೆ. ಆದ್ದರಿಂದ ನಾನು ನನ್ನ ದ್ವೇಷಿಗಳಿಗೆ ಹಿಂಸೆಯನ್ನು ಮಾಡುವುದಿಲ್ಲ. ನನ್ನ ಶತ್ರುಗಳನ್ನು ಶಿಕ್ಷಿಸುವವನು ದೇವರೇ ಹೊರತು ನನ್ನ ಕರ್ತವ್ಯವಲ್ಲವೆಂತ ಅಭಿಪ್ರಾಯ.

(೧೦ನೇ ಮಂತ್ರದಿಂದ ೧೩ನೇ ಮಂತ್ರ ಪೂರ್ತಾ ಕೈಜೋಡಿಸಿಕೊಂಡು ಹೇಳಬೇಕು.)

**ಚಿತ್ರಂ ದೇವಾನಾಮಿತಿ ಷಳರ್ಚಸ್ಯ ಸೂಕ್ತಸ್ಯ ಅಂಗೀರಸಪುತ್ರೋ ಕುತ್ಸಋಷಿಃ, ಸೂರ್ಯೋ ದೇವತಾ, ತ್ರಿಷ್ಟುಪ್ ಛಂದಃ, ಸೂರ್ಯೋಪಸ್ಥಾನೇ ವಿನಿಯೋಗಃ ||**

ಚಿತ್ರಂ ದೇವಾನಾಂ ಎಂಬ ಆರು ಋಕ್ಕಿನ ಈ ಸೂಕ್ತಕ್ಕೆ ಅಂಗೀರಸರ ಮಕ್ಕಳಾದ ಕುತ್ಸರೆಂಬುವರು ಋಷಿಗಳು. ಸೂರ್ಯಾಂತರ್ಗತನಾದ ಶ್ರೀಹರಿಯು ಪ್ರತಿಪಾದ್ಯದೇವತೆಯು. ತ್ರಿಷ್ಟುಪ್ ಛಂದಸ್ಸು. ಸೂರ್ಯಪ್ರಾರ್ಥನಾದಲ್ಲಿ ಹೇಳಲ್ಪಡತಕ್ಕದ್ದು.

**ಓಂ ಚಿತ್ರಂದೇವಾನಾಮುದಗಾದನೀಕಂ**
**ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
**ಆಪ್ರಾದ್ಯಾವಾಪೃಥಿವೀ ಅಂತರಿಕ್ಷಂ**
**ಸೂರ್ಯಆತ್ಮಾ ಜಗತಸ್ತಸ್ಥುಷಶ್ಚ** || ೧ ||

**ಪರಮಾತ್ಮನ ಪರ:** ದೇವಾನಾಂ–ಚತುರ್ಮುಖಬ್ರಹ್ಮನೇ ಮೊದಲಾದ ದೇವತೆಗಳಿಗೆ, ಅನೀಕಂ–ಚೇಷ್ಟಕವಾದ ಅಂದರೆ ಪ್ರೇರಕನಾದ, ಚಿತ್ರಂ–ನಾನಾ ವಿಧವಾದ ಆಶ್ಚರ್ಯಕರವಾದ ಸೂರ್ಯಶಬ್ದವಾಚ್ಯ ಪರಮಾತ್ಮನ ಸ್ವರೂಪವು, ಮಿತ್ರಸ್ಯ–ಸೂರ್ಯನಿಗೂ, ವರುಣಸ್ಯ–ವರುಣದೇವರಿಗೂ, ಅಗ್ನೇಶ್ಚ–ಅಗ್ನಿಗೂ ಕೂಡ, ಉಪಲಕ್ಷಣದಿಂದ ಸಮಸ್ತ ದೇವತೆಗಳಿಗೂ, ಸಜ್ಜನರಿಗೂ, ಚಕ್ಷುಃ–ಜ್ಞಾನಪ್ರದವಾದದ್ದು ಅಥವಾ ಪ್ರೇರಕವಾದದ್ದು. ದ್ಯಾವಾಪೃಥಿವೀ ಅಂತರಿಕ್ಷಂ ಚ–ಮತ್ತು ಸ್ವರ್ಗಾದಿ ಊರ್ಧ್ವಲೋಕಗಳನ್ನೂ ಪೃಥಿವೀ ಭೂಮಿಯನ್ನೂ, ಅಂತರಿಕ್ಷಂ–ಅಂತರಿಕ್ಷಲೋಕವನ್ನೂ "ಲೋಕಸ್ತು ಭುವನೇ ಜನೇ" ಎಂಬ ಕೋಶಾನುಸಾರ ಆಯಾ ಲೋಕಸ್ಥರಾದ ಸಜ್ಜನರುಗಳನ್ನು, ಆಪ್ರಾಃ–ಸ್ವಕೀಯವಾದ ಜ್ಞಾನದಿಂದ, ಆಸಮಂತಾತ್ ಪೂರಯ–

ತುಂಬತಕ್ಕದ್ದಾಗಿ, ಉದಗಾತ್-ಆವಿರ್ಭೂತವಾಯಿತು. ಸೂರ್ಯಃ-ಜ್ಞಾನಿ-ಗಮ್ಯನಾದ ಸೂರ್ಯಾಂತರ್ಗತನಾದ ಶ್ರೀಹರಿಯು, ಜಗತಃ-ಚೇತನಾತ್ಮಕವಾದ ಚ-ಮತ್ತು, ತಸ್ಥುಷಶ್ಚ-ಸ್ಥಾವರಾತ್ಮಕವಾದ ಪ್ರಪಂಚಕ್ಕೆ, ಆತ್ಮಾ-ಅಂತರ್ಯಾಮಿಯು ಮತ್ತು ಸ್ವಾಮಿಯು. ಈ ಮಂತ್ರದಲ್ಲಿ ಶ್ರೀಹರಿಯು ಸೂರ್ಯನಿಗೆ ಜ್ಞಾನಪ್ರದನು ಎಂತಲೂ, ಜಗದಂತರ್ಯಾಮಿ ಎಂತಲೂ ಹೇಳಲ್-ಪಟ್ಟಿರುವುದರಿಂದ ಸೂರ್ಯನಿಂದಲೂ ಉಪಲಕ್ಷಣಯಾ ಸಮಸ್ತ ಚೇತನಾ-ಚೇತನರಿಂದ ಭೇದ ಉಳ್ಳವನೆಂದು ಸಿದ್ಧವಾಯಿತು.

ಸೂರ್ಯನ ಪರ: ಮಿತ್ರಸ್ಯ-ಸೂರ್ಯನಿಗೂ, ವರುಣಸ್ಯ-ವರುಣನಿಗೂ, ಅಗ್ನೇಃ-ಅಗ್ನಿಗೂ ಕೂಡ, ಚಕ್ಷುಃ-ನೇತ್ರಸ್ಥಾನೀಯವಾದ, ಚಿತ್ರಂ-ಆಶ್ಚರ್ಯಕರಗಳಾದ, ದೇವಾನಾಂ-ಕಾಂತಿಯುಕ್ತವಾದ ಕಿರಣಗಳ, ಅನೀಕಂ-ಸಮೂಹವು, ಆಪ್ರಾಃ-ಸ್ವಕೀಯ ತೇಜಸ್ಸಿನಿಂದ, ದ್ಯಾವಾ ಪೃಥಿವೀ ಅಂತರಿಕ್ಷಂ ಚ-ಸ್ವರ್ಗ, ಭೂಮಿ, ಅಂತರಿಕ್ಷಲೋಕವನ್ನು, ಆ ಸಮಂತಾತ್ ಪೂರಯನ್-ಪೂರಣ ಮಾಡತಕ್ಕದ್ದಾಗಿ, ಉದಗಾತ್-ವ್ಯಕ್ತವಾಗುತ್ತದೆ. ಸೂರ್ಯಃ-ಸೂರ್ಯನು, ಜಗತಸ್ತಸ್ಥುಷಶ್ಚ-ಚರಾಚರಾತ್ಮಕವಾದ ಜಗತ್ತಿಗೆ, ಆತ್ಮಾ-ಸ್ವಾಮಿಯು ಮತ್ತು ತೇಜಸ್ಸಿನಿಂದ ವ್ಯಾಪಿಸಿರತಕ್ಕವನು ಎಂದು ಅರ್ಥ.

ಸೂರ್ಯೋದೇವೀ ಮುಷಸಂ ರೋಚಮಾನಾಂ
ಮರ್ಯೋನಯೋಷಾಮಭ್ಯೇತಿಪಶ್ಚಾತ್ ।
ಯತ್ರಾನರೋದೇವಯಂತೋ ಯುಗಾನಿ-
ವಿತನ್ವತೇ ಪ್ರತಿಭದ್ರಾಯಭದ್ರಮ್ ॥ ೨ ॥

ಪರಮಾತ್ಮನ ಪರ: ಮರ್ಯಃ-ಮರಣಶೀಲನಾದ್ದರಿಂದ, ಮರ್ಯ-ಶಬ್ದವಾಚ್ಯನಾದ ಮನುಷ್ಯನು, ನ-ಹೇಗೆ, ಯೋಷಾಂ-ಸ್ತ್ರೀಯನ್ನು, ಪಶ್ಚಾತ್-ಹಿಂಭಾಗದಲ್ಲಿ, ಅಭ್ಯೇತಿ-ಅನುಸರಿಸಿ ಹೋಗುತ್ತಾನೋ, ತಥಾ-ಹಾಗೆ, ಸೂರ್ಯಃ-ಜ್ಞಾನಿಗಮ್ಯನಾದ ಪರಮಾತ್ಮನು, ರೋಚಮಾನಾಂ-ಪ್ರಕಾಶಮಾನಳಾದ, ಉಷಸಂ-ಅಜ್ಞಾನಾಖ್ಯ ಕತ್ತಲೆಯನ್ನು ನಿವಾರಣೆ ಮಾಡತಕ್ಕವಳಾದ್ದರಿಂದ ಉಷಶ್ಶಬ್ದವಾಚ್ಯಳಾದ, ದೇವೀಂ-ಕ್ರೀಡಾದಿ

ಗುಣವಿಶಿಷ್ಟಳಾದ, ಭಗವನ್ನಾಮಗಳಿಗೆ ಅಭಿಮಾನಿನಿಯಾದ ಅಶ್ವಿಭಾರ್ಯೆ ಯನ್ನು ಅಂದರೆ ನಾಮಾತ್ಮಿಕಾ ಉಷಾದೇವಿಯನ್ನೂ, ಭಕ್ತಿಯನ್ನೂ, ತದಭಿ-ಮಾನಿನೀ ರಮಾದೇವಿಯನ್ನೂ ಅನುಸರಿಸಿ, ಪಶ್ಚಾತ್ – ಅನಂತರದಲ್ಲಿ, ಅಭ್ಯೇತಿ–ಆವಿರ್ಭವಿಸುತ್ತಾನೆ ಅಂದರೆ ವ್ಯಕ್ತನಾಗುತ್ತಾನೆ ಭಕ್ತವರ್ಗಕ್ಕೆ, ನಾಮರೂಪವಾದ ಮಂತ್ರವನ್ನು ಜಪಿಸಿದನಂತರ, ಮಾಹಾತ್ಮ್ಯಪೂರ್ವಕ ಸುದೃಢವಾದ ಭಕ್ತಿ ಮಾಡಿದ ನಂತರ ಭಕ್ತಿಯಿಂದ ಜಪಿಸಿದ ನಾಮಾನು-ಗುಣವಾಗಿ ಭಕ್ತರಿಗೆ ಶ್ರೀಹರಿಯು ವ್ಯಕ್ತನಾಗುತ್ತಾನೆಂತ ಮುಖ್ಯತಾತ್ಪರ್ಯವು. ಯತ್ರ–ಎಲ್ಲಿ ಭಕ್ತಿಯು ಉದಯಿಸಿರುತ್ತೋ, ತತ್ರ–ಅಲ್ಲಿ, ನರಃ–ಜಗದ್ಗುರು ಗಳಾದ ವಾಯುದೇವರು ಶಿಷ್ಯಸ್ಥಾನಾಪನ್ನರಾದ ಸಜ್ಜನರುಗಳಲ್ಲಿ ಪರಮಾತ್ಮ ತತ್ವವನ್ನು ಉಪದೇಶ ಮಾಡುವುದರಿಂದ ಶ್ರೀಹರಿಯನ್ನು, ದೇವಯಂತಃ–ಹೃದಯದೊಳಗೆ ಪ್ರಕಾಶಗೊಳಿಸತಕ್ಕವರಾಗಿ, ಯುಗಾನಿ–ಚತುರ್ಯುಗಾನು-ಸಾರವಾಗಿ ಆಯಾ ಕಾಲದಲ್ಲಿ ವಿಹಿತವಾದ, ಕರ್ಮಾಣಿ–ಕರ್ಮಗಳನ್ನು ಸಾಧನಮಾರ್ಗವನ್ನು, ವಿತನ್ವತೇ–ವಿಸ್ತಾರ ಮಾಡುತ್ತಾರೆ. ಭದ್ರಂ ಪ್ರತಿ–ಈ ರೀತಿಯಾಗಿರುವ ಮಂಗಳಸ್ವರೂಪನಾದ, ಸೂರ್ಯಂ–ಭಾರತೀರಮಣ ಮುಖ್ಯಪ್ರಾಣಾಂತರ್ಗತನಾದ ಶ್ರೀ ನಾರಾಯಣನನ್ನು, ಭದ್ರಾಯ–ಮೋಕ್ಷ ರೂಪವಾದ ಮಂಗಳವನ್ನು ಹೊಂದಲಿಕ್ಕಾಗಿ, ಸ್ತುಮಃ–ಸ್ತೋತ್ರವನ್ನು ಮಾಡುತ್ತೇವೆ.

**ಸೂರ್ಯನ ಪರ:** ಪ್ರಸಿದ್ಧನಾದ ಸೂರ್ಯನು, ಮನುಷ್ಯನು ಸ್ತ್ರೀಯನ್ನು ಹೇಗೆ ಅನುಸರಿಸಿ ಹಿಂಭಾಗದಲ್ಲಿ ನಡೆಯುತ್ತಾನೆಯೋ, ತಥಾ–ಹಾಗೆಯೇ, ರೋಚಮಾನಾಂ ಉಷಸಂ ದೇವೀಂ–ಪ್ರಕಾಶಮಾನವಾದ, ಉಷಃ ಕಾಲಾಭಿಮಾನಿ ದೇವಿಯನ್ನು, ಪಶ್ಚಾತ್–ಹಿಂಬಾಲಿಸಿ, ಅಭ್ಯೇತಿ–ಉದಯ ವನ್ನು ಹೊಂದುತ್ತಾನೆ. ಅಂದರೆ ಉಷಃಕಾಲಾನಂತರ, ಅರುಣೋದಯಾ, ನಂತರ ಸೂರ್ಯೋದಯವಾಗುತ್ತೆಂದು ಅಭಿಪ್ರಾಯ. ಎಂಥಾ ಉಷಃಕಾಲ ವೆಂದರೆ, ಯತ್ರ–ಯಾವ ಕಾಲದಲ್ಲಿ, ನರಃ–ಮನುಷ್ಯರು, (ನೃಶಬ್ದ ಬಹು-ವಚನ) ಭದ್ರಂ ಪ್ರತಿ–ಮಂಗಳಕರನಾದ ಸೂರ್ಯನನ್ನು ಕುರಿತು, ಭದ್ರಾಯ–ಕ್ಷೇಮವನ್ನು ಹೊಂದುವ ಸಲುವಾಗಿ, ದೇವಯಂತಃ–ಕ್ರೀಡಾದಿ ಗುಣವಿಶಿಷ್ಟ

ನಾದ ಶ್ರೀಹರಿಯನ್ನು ಪೂಜಾ ಮಾಡಲು ಇಚ್ಛಿಸುವರಾಗಿ, ಯುಗಾನಿ-ಚತುರ್ಯುಗಾನುಸಾರವಾದ ಸಾಧನ ಕರ್ಮಗಳನ್ನು, ವಿತನ್ವತೇ-ಮಾಡುತ್ತಾರೋ ಅಂಥಾ ಉಷಃಕಾಲಾನಂತರ ಉದಯಿಸುತ್ತಾನೆ. ಇದರಿಂದ ಉಷಃ ಕಾಲದಲ್ಲಿದ್ದು ಜೀವರು ಸಾಧನ ಮಾಡುವುದು ಕರ್ತವ್ಯವೆಂದು ಸ್ಪಷ್ಟ-ಪಡುತ್ತದೆ.

**ಭದ್ರಾ ಅಶ್ವಾಹರಿತಃ ಸೂರ್ಯಸ್ಯ ಚಿತ್ರಾ ವಿತಗ್ವಾ ಅನುಮಾದ್ಯಾಸಃ ।**
**ನಮಸ್ಯಂತೋ ದಿವ ಆಪೃಷ್ಠಮಸ್ಥುಃ ಪರಿದ್ಯಾವಾಪೃಥಿವೀಯಂತಿಸದ್ಯಃ॥**

**ಪರಮಾತ್ಮನ ಪರ:** ಸೂರ್ಯಸ್ಯ-ಸೂರಿಗಮ್ಯನಾದ ಶ್ರೀಹರಿಯು, ಭದ್ರಾಃ-ಮಂಗಳಕರರಾದ, ಹರಿತಃ-ಶ್ರಮಾದಿಗಳನ್ನು ಪರಿಹರಿಸತಕ್ಕ, ವಿತಗ್ವಾ-ಏತಚ್ಛಬ್ಧವಾಚ್ಯನಾದ ಶ್ರೀಹರಿಯನ್ನು ಸದಾಕಾಲದಲ್ಲಿ ಹೃದಯದಲ್ಲಿ ಧರಿಸಿರತಕ್ಕ, ಚಿತ್ರಾ-ಆಶ್ಚರ್ಯಕರವಾದ ಮಹಿಮೋಪೇತರಾದ, ಅನುಮಾ-ದ್ಯಾಸಃ-ತಾರತಮ್ಯಾನುಗುಣವಾಗಿ ಸ್ತುತ್ಯರಾದ (ಅಂದರೆ ಸ್ತುತಿಸಲು ಅರ್ಹರಾದ) ಅಶ್ವಾ-ಲೋಕೋದ್ಧಾರಕ್ಕಾಗಿ ಶೀಘ್ರಗಾಮಿಗಳಾದ ಅಥವಾ ಅಕಾರ-ವಾಚ್ಯನಾದ ಪರಬ್ರಹ್ಮನನ್ನು ಹೃದಯದಲ್ಲಿ ಧರಿಸಿ ಸಂಚರಿಸತಕ್ಕ ಭಗವತ್-ಭಕ್ತರುಗಳು, ನಮಸ್ಯಂತಃ-ಭಗವದ್ಭಕ್ತರುಗಳನ್ನು ವಂದಿಸತಕ್ಕವರಾಗಿ, ಆ ದಿವಃ ಪೃಷ್ಠಂ-ಅಸಮಾನವಾದ ಅಂತರಿಕ್ಷದ ಮೇಲುಭಾಗದ ಪ್ರದೇಶದಲ್ಲಿ ಅಂದರೆ ವೈಕುಂಠಾದಿ ಲೋಕಗಳಲ್ಲಿ, ಅಸ್ಥುಃ-ವಾಸಮಾಡಿಕೊಂಡಿರುತ್ತಾರೆ. ಮತ್ತು ದ್ಯಾವಾಪೃಥಿವೀ-ಊರ್ಧ್ವಾಧೋ ಲೋಕಗಳಲ್ಲಿ ಇದ್ದು, ಸದ್ಯಃ-ತಕ್ಷಣ, ಪರಿಯಂತಿ-ಜ್ಞಾನೋಪದೇಶಕ್ಕಾಗಿ ಸಂಚರಿಸುತ್ತಾರೆ. ಅಂದರೆ ಜ್ಞಾನಿಗಳು ತಾವು ಸಾಧನ ಮಾಡಿಕೊಂಡು ಉತ್ತಮ ಲೋಕವನ್ನು ಹೊಂದುವವರ ಜೊತೆಗೆ ಲೋಕದಲ್ಲಿ ತತ್ತ್ವೋಪದೇಶ ಮಾಡಿ ಜಗತ್ತನ್ನು ಉದ್ಧರಿಸತಕ್ಕವರಾಗುತ್ತಾರೆಂತ, ಆಶಯಃ-ಭಗವದ್ಭಕ್ತರೇ ದೇವರಿಗೆ ಕುದುರೆಯಂತೆ ವಾಹಕರೆಂದು ಮುಖ್ಯ ತಾತ್ಪರ್ಯವು.

**ಸೂರ್ಯಪರ:** ಸೂರ್ಯನ, ಭದ್ರಾಃ-ಮಂಗಳಕರವಾದ, ಹರಿತಃ-ಹರಿದ್ವರ್ಣದ್ದಾದ ಅಂದರೆ ಹಚ್ಚಗಿನ ಬಣ್ಣದಿಂದ ಕೂಡಿರುವ, ಚಿತ್ರಾಃ-ನಾನಾ ವಿಧಗಳಿಂದ, ವಿತಗ್ವಾಃ-ಈ ಸೂರ್ಯನನ್ನು ಹೊತ್ತು ತಿರುಗುತ್ತಿರುವ

ಅನುಮಾದ್ಯಾಸಃ–ಅನುಕ್ರಮವಾಗಿ ಸ್ತೋತ್ರಮಾಡಿಸಿಕೊಳ್ಳಲು ಅರ್ಹವಾದ, ಅಶ್ವಾಃ–ಕುದುರೆಗಳು, ನಮಸ್ಯಂತಃ–ರಥಸ್ಥನಾದ ದೇವನನ್ನು ನಮಸ್ಕರಿಸತಕ್ಕದ್ದಾಗಿ, ಆ ದಿವಃ ಪೃಷ್ಠಂ – ಸುತ್ತಲೂ ಅಂತರಿಕ್ಷದ ಮೇಲುಭಾಗ ಪ್ರದೇಶವನ್ನು, ಅಸ್ಥುಃ–ಹೊಂದುತ್ತವೆ. ಆಗ, ಸದ್ಯಃ ತಕ್ಷಣದಲ್ಲಿ, ದ್ಯಾವಾ-ಪೃಥಿವೀ–ಅಂತರಿಕ್ಷ ಮತ್ತು ಭೂಲೋಕಗಳನ್ನು, ಪರಿಯಂತಿ–ಸುತ್ತಲೂ ಸಂಚರಿಸುತ್ತವೆ. ಅಂದರೆ ಎಲ್ಲಾ ಲೋಕಗಳನ್ನೂ ಪ್ರಕಾಶದಿಂದ ವ್ಯಾಪಿಸುತ್ತವೆಂತ ಅರ್ಥ.

ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾಕರ್ತೋಃ ವಿತತಂ ಸಂಜಭಾರ।
ಯದೇದಯುಕ್ತ ಹರಿತಸ್ಸಧಸ್ಥಾದಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ॥

ಪರಮಾತ್ಮಪರ: ಹೇ ಕರ್ತಃ – ಎಲೈ ಜಗತ್ಕರ್ತನಾದ, ದೇವ–ಕ್ರೀಡಾದಿ ಗುಣವಿಶಿಷ್ಟನಾದ ಪರಮಾತ್ಮನೇ, ತ್ವಂ–ನೀನು, ಸೂರ್ಯಸ್ಯ–ಸರ್ವ ಪ್ರಾಣಿಗಳನ್ನು ತಮ್ಮತಮ್ಮ ಕರ್ಮಗಳಲ್ಲಿ ಪ್ರೇರಣಾ ಮಾಡತಕ್ಕ ಈ ಎದುರಿನಲ್ಲಿ ಕಾಣುತ್ತಿರುವ ಸೂರ್ಯಮಂಡಲದ, ಮಧ್ಯಾ–ಮಧ್ಯದಲ್ಲಿ (ಸ್ಥಿತ್ವಾ ಎಂದು ಅಧ್ಯಾಹಾರ ಮಾಡಬೇಕು) ಸ್ಥಿತ್ವಾ–ಇದ್ದು, ವಿತತಂ–ಸೂರ್ಯನಲ್ಲಿಯೂ, ಉಪಲಕ್ಷಣಯಾ ಸರ್ವತ್ರದಲ್ಲಿಯೂ ವ್ಯಾಪಿಸಿರತಕ್ಕ, ಯತ್–ಯಾವ, ಜ್ಯೋತಿಃ–ಪ್ರಕಾಶಮಯವಾದ ನಿನ್ನ ಸ್ವರೂಪವನ್ನು, ಸ್ವಾತ್ಮನಿ (ಅಧ್ಯಾಹಾರ)–ನಿನ್ನಲ್ಲಿ, ಸಂಜಭಾರ–ಪ್ರಲಯದಲ್ಲಿ ಉಪಸಂಹಾರ ಮಾಡುತ್ತೀಯೋ, ತತ್–ಅದು, ಮಹಿತ್ವಂ–ನಿನ್ನ ಸರ್ವೋತ್ತಮವಾದ ಮಹಿಮೆಯು, ಅಥವಾ ಅಂಥಾ ಕ್ರೀಡಾದಿ ಗುಣವಿಶಿಷ್ಟವಾದ, ಸರ್ವತ್ರ ವ್ಯಾಪ್ತವಾದ, ಸರ್ವಪ್ರೇರಕವಾದ, ಸರ್ವೋತ್ತಮವಾದ ನಿನ್ನ ರೂಪವನ್ನು, ಸ್ವಾತ್ಮನಿ–ಸ್ವತಂತ್ರನಾದ ನಿನ್ನನ್ನೇ ಸ್ವಾಮೀ ಎಂದು ಉಪಾಸನಾ ಮಾಡತಕ್ಕ ಭಕ್ತರ ಹೃದಯದಲ್ಲಿ, ಸಂಜಭಾರ–ಪ್ರಕಾಶಗೊಳಿಸುವನು ಆಗಿರುತ್ತಿ. ನಿನ್ನ ಅನುಗ್ರಹದಿಂದಲೇ ಭಕ್ತರಿಗೆ ಅಪರೋಕ್ಷಜ್ಞಾನವಾಗುತ್ತದೆ, ಇಲ್ಲವಾದರೆ ಇಲ್ಲವೆಂದು ಮುಖ್ಯತಾತ್ಪರ್ಯವು. ಎಲೈ ಪರಮಾತ್ಮನೇ ಕೃಪಾಳುವಾದ ನೀನು, ಹರಿತಃ–ನಿನ್ನ ಅನುಗ್ರಹದಿಂದ ಕಾಮಾದಿಗಳನ್ನು ಹರಣ ಮಾಡತಕ್ಕಂತಹ

ಸಾಮರ್ಥ್ಯವುಳ್ಳ ಭಕ್ತರುಗಳನ್ನು, ಯದೇತ್-ಯಾವ ಕಾಲದಲ್ಲಿ ನಿನ್ನ ವಿಷಯಕವಾದ ಜ್ಞಾನವನ್ನು ಕೊಟ್ಟು, ಸಧಸ್ಥಾತ್-ಈ ಭೂಲೋಕದ ದೆಸೆಯಿಂದ, ಅಯುಕ್ತ-ಅನ್ಯತ್ರದಲ್ಲಿ ಅಂದರೆ ಮಹರಾದಿ ಲೋಕದಲ್ಲಿ ಸೇರಿ-ಸುತ್ತೀಯೋ, ಆತ್-ಆಗ, ಸಿಮಸ್ಮೈ-ಸರ್ವಲೋಕಕ್ಕೆ ಅಂದರೆ ಎಲ್ಲಾ ಮುಕ್ತ್ಯಯೋಗ್ಯ ಜನಕ್ಕೆ, ರಾತ್ರೀ-ಅಜ್ಞಾನವೆಂಬ ಕತ್ತಲೆಯನ್ನು, ವಾಸಃ-ಆಚ್ಛಾದನೆಯನ್ನಾಗಿ, ತನುತೇ-ವಿಸ್ತಾರ ಮಾಡುತ್ತೀಯೆ. ಅಂದರೆ ಸಜ್ಜೀವರಿಗೆ ಮುಕ್ತಿ ಕೊಟ್ಟಾಗ ತಮೋಯೋಗ್ಯರಿಗೆ ಅಂಧಂತಮಸ್ಸನ್ನು ಕೊಡುತ್ತಾನೆಂತ ತಾತ್ಪರ್ಯವು

ಸೂರ್ಯಪರ: ಎಲೈ ಸೂರ್ಯದೇವನೇ, ಕರ್ತಃ-ಕರ್ತನೇ, ತ್ವಂ-ನೀನು, ಮಧ್ಯಾ-ಕರ್ಮದಮಧ್ಯದಲ್ಲಿ ಅಂದರೆ ಜನಗಳು ಕೆಲಸಗಳನ್ನು ಮತ್ತು ಆಶ್ರಮೋಚಿತವಾದ ಕರ್ಮಗಳನ್ನು ಮಾಡುವ ಕಾಲದಲ್ಲಿ ಅಂದರೆ ಹಗಲಿನಲ್ಲಿ, ವಿತತಂ-ವ್ಯಾಪ್ತವಾದ, ಯತ್-ಯಾವ, ಸೂರ್ಯಸ್ಯ-ಸೂರ್ಯ-ಮಂಡಲದ, ಜ್ಯೋತಿಃ-ಕಿರಣಗಳ ಸಮೂಹವನ್ನು ತನ್ನಲ್ಲಿಯೇ, ಸಂಜಭಾರ-ಉಪಸಂಹಾರ ಮಾಡುತ್ತೀಯೋ, ತತ್ - ಅದು, ನಿನ್ನ ಮಹಿತ್ವಂ-ಮಹಿಮೆಯು. ಯದೇತ್-ಯಾವ ಕಾಲದಲ್ಲಿ, ಹರಿತಃ-ತನ್ನ ರಥವನ್ನು ಹೊತ್ತಿರುವ ಕುದುರೆಗಳನ್ನು, ಸಧಸ್ಥಾತ್-ಭೂಲೋಕದಿಂದ, ಅನ್ಯತ್ರ-ಬೇರೆ ಸ್ಥಳಕ್ಕೆ, ಅಯುಕ್ತ-ಸೇರಿಸತಕ್ಕವನು ಆಗುತ್ತೀಯೋ, ಆತ್-ಆಗ ಅಂದರೆ ಸೂರ್ಯಾಸ್ತಮಯಾನಂತರ, ಸಿಮಸ್ಮೈ-ಸರ್ವತ್ರ ಪ್ರಪಂಚಕ್ಕೆ, ರಾತ್ರೀ-ಕತ್ತಲೆಯನ್ನು, ವಾಸಃ-ಆಚ್ಛಾದನೆಯನ್ನಾಗಿ, ತನುತೇ ಮಾಡುತ್ತೀಯೆ. ಅಂದರೆ ಸೂರ್ಯಾಸ್ತನಾದಮೇಲೆ ರಾತ್ರಿಕಾಲದಲ್ಲಿ ಅಂಧಕಾರವು ವ್ಯಾಪಿಸುತ್ತದೆಂತ ಅರ್ಥ.

ತನ್ಮಿತ್ರಸ್ಯವರುಣಸ್ಯಾಭಿಚಕ್ಷೇ ಸೂರ್ಯೋರೂಪಂ ಕೃಣುತೇದ್ಯೋರುಪಸ್ಥೇ।
ಅನಂತಮನ್ಯದ್ರುಶದಸ್ಯಪಾಜಃ ಕೃಷ್ಣಮನ್ಯದ್ಧರಿತಃಸಂಭರಂತಿ ॥ ೫ ॥
ಅದ್ಯಾದೇವಾಉದಿತಾಸೂರ್ಯಸ್ಯನಿರಂಹಸಃ ಪಿಪೃತಾನಿರವದ್ಯಾತ್ ।
ತನ್ನೋಮಿತ್ರೋವರುಣೋ ಮಾಮಹಂತಾ ಮದಿತಿಃ ಸಿಂಧುಃ
ಪೃಥಿವೀ ಉತದ್ಯೌಃ ॥ ೬ ॥

ಈ ಋಕ್ಕುಗಳಿಗೆ ಅರ್ಥ ಮಾಡುವಾಗ ಆರನೇ ಮಂತ್ರದ ಪೂರ್ವಾರ್ಧ ವನ್ನು ಹಿಂದಿನ ಋಕ್ಕಿಗೆ ಸೇರಿಸಿ ಅನ್ವಯ ಮಾಡಿ ಅರ್ಥ ಮಾಡಬೇಕು. ನಂತರ ಉತ್ತರಾರ್ಧವನ್ನು ಅರ್ಥ ಮಾಡಬೇಕು.

ಅರ್ಥ ಪರಮಾತ್ಮನ ಪರ: ಸೂರ್ಯ-ಪರಮಾತ್ಮನು, ಮಿತ್ರಸ್ಯ-ತಿಳಿಯತಕ್ಕವನೂ ಮತ್ತು ಜಗದ್ರಕ್ಷಕನೂ ಆದ್ದರಿಂದಲೂ, ತನ್ನಿಂದ ತಿಳಿಯಲ್ಪಟ್ಟ ಪರಿಮಿತವಾದ ಈ ಜಗತ್ತನ್ನು ಬ್ರಹ್ಮಾದಿಗಳಿಗೆ ಕೊಡುವವನಾದ್ದರಿಂದಲೂ, ತನ್ನನ್ನು ತಿಳಿದ ಜ್ಞಾನಿಯನ್ನು ಮುಕ್ತಿಯಲ್ಲಿ ಸುಖಪಡಿಸುವನಾದ್ದರಿಂದಲೂ ಮಿತ್ರಶಬ್ದವಾಚ್ಯನಾದ, ವರುಣಸ್ಯ-ಉತ್ಕೃಷ್ಟವಾದ ಜ್ಞಾನ-ಬಲರೂಪನಾದ್ದರಿಂದ ವರುಣಶಬ್ದವಾಚ್ಯನಾದ, ಅಸ್ಯ-ಈ ಪೂರ್ವೋಕ್ತ-ಮಹಿಮೆಯಿಂದ ಕೂಡಿರುವ, ಸ್ವಸ್ಯ-ತನ್ನ, ರೂಪಂ-ರೂಪವು, ಯಾವುದುಂಟೋ, ತತ್ ಅಂಥಾ ರೂಪವನ್ನು, ದ್ಯೌರುಪಸ್ಥೇ-ಸ್ವರ್ಗಕ್ಕೆ ಸಮೀಪದಲ್ಲಿರುವ ಮಹರಾದಿ ಸರ್ವ ಊರ್ಧ್ವಲೋಕದಲ್ಲಿ ಉಪಲಕ್ಷಣಯಾ ಸರ್ವ-ಲೋಕದಲ್ಲಿ ಅಥವಾ ಅತಿ ಸಮೀಪದಲ್ಲಿರುವ ಮನಸ್ಸಿನಲ್ಲಿ, ಕೃಣುತೇ-ಪ್ರಕಟನೆಯನ್ನು ಮಾಡುತ್ತಾನೆ ತನ್ನ ಭಕ್ತರಿಗೋಸ್ಕರವಾಗಿ, ಇತಿ-ಹೀಗೆ, ಮಂತ್ರದ್ರಷ್ಟಗಳಾದ ಋಷಿಗಳು, ಅಭಿಚಕ್ಷೇ-ಹೇಳುತ್ತಾರೆ. ಆ ಶ್ರೀಹರಿಯ ರೂಪ ಎಂಥಾ ಲಕ್ಷಣವುಳ್ಳದ್ದು ಅಂದರೆ, ಅನಂತಂ-ದೇಶತಃ, ಕಾಲತಃ, ಗುಣತಃ, ಅಪರಿಚ್ಛಿನ್ನವಾದದ್ದು, ಅಥವಾ ಚತುರ್ವಿಧನಾಶರಹಿತವಾದದ್ದು, ಅನ್ಯತ್-ರಮಾಬ್ರಹ್ಮಾದಿಗಳಿಗಿಂತಲೂ ವಿಲಕ್ಷಣವಾದದ್ದು, ರುಶತ್-ಸರ್ವದಾ ವೇದೋಚ್ಚಾರಣಾದಿ ಶಬ್ದವನ್ನು ಮಾಡುತ್ತಿರುವುದು, ಪಾಜಃ-ಜಗತ್ತನ್ನು ಕಾಪಾಡುವುದು ಮತ್ತು ಉತ್ಪತ್ತಿರಹಿತವಾದದ್ದು, ಕೃಷ್ಣಂ-ಕೃಷ್ಣವರ್ಣೋಪೇತವಾದದ್ದು ಅಥವಾ ಜ್ಞಾನಾನಂದಾತ್ಮಕವಾದ ಘನ-ಸ್ವರೂಪವಾದದ್ದು, ಮೇಲ್ಕಂಡ ಮಂತ್ರದಲ್ಲಿ ಮಿತ್ರಸ್ಯ, ವರುಣಸ್ಯ, ಸೂರ್ಯಸ್ಯ ಎಂದು ಸಾಮಾನಾಧಿಕರಣ್ಯವಿರುವುದರಿಂದ ಪ್ರಸಿದ್ಧ ಸೂರ್ಯಾತ್ಮಕವಾದದ್ದಾಗಿ ಪ್ರತೀತಿಯು ಬರುತ್ತದೆ ಎಂದು ಶಂಕಾ ಬಂದರೆ ಅದಕ್ಕೆ ಉತ್ತರ ಕೊಡಲು ಮತ್ತೊಂದು ಅನ್ಯತ್ ಎಂಬ ಶಬ್ದವಿರುತ್ತದೆ. ಅನ್ಯತ್ ಎಂದರೆ ಬ್ರಹ್ಮಮೀಮಾಂಸಾದಿಶಾಸ್ತ್ರದಲ್ಲಿ ಸ್ಪಷ್ಟವಾಗಿ ಪ್ರತಿಪಾದಿತವಾದಂತೆ ಸರ್ವ-ರಿಂದಲೂ ಭಿನ್ನನಾಗಿರುವವನು ಎಂದರ್ಥ.

ನಿರಂಹಸಃ–ದೋಷದ ಗಂಧದಿಂದ ರಹಿತನಾದ, ಸೂರ್ಯಸ್ಯ–ಜ್ಞಾನಿ-ಗಮ್ಯನಾದ ಪರಮಾತ್ಮನ ಲೋಕವಿಲಕ್ಷಣವಾದ ರೂಪವನ್ನು, ಹರಿತಃ–ಭಕ್ತರಾದ, ದೇವಾಃ–ಬ್ರಹ್ಮಾದಿ ದೇವತೆಗಳು, ಅದ್ಯಾ ಈಗಲೂ ಕೂಡ, ತಮ್ಮ ಮನಸ್ಸಿನಲ್ಲಿ, ಸಂಭರಂತಿ–ಧ್ಯಾನ ಮಾಡುತ್ತಾ, ಧರಿಸಿರುತ್ತಾರೆಂದು ಅಭಿ-ಪ್ರಾಯ. ಇದರಿಂದ ಬ್ರಹ್ಮಾದಿ ದೇವತೆಗಳಿಗಿಂತ ಉತ್ತಮನೂ ಮತ್ತು ಭಿನ್ನನು ಎಂದು ಸಿದ್ಧವಾಯಿತು. ಮತ್ತು ಯತಃ–ಯಾವ ಕಾರಣದಿಂದ ಬ್ರಹ್ಮಾದಿ ದೇವತೆಗಳು, ಹರೇಃ–ಪೂರ್ವೋಕ್ತವಾದ ಪರಮಾತ್ಮನ ದೆಶೆಯಿಂದ, ಉದಿತಾಃ–ಹುಟ್ಟಿದವರಾಗಿದ್ದಾರೆಯೋ, ತಸ್ಮಾತ್–ಆದ್ದರಿಂದ, ನಿರ-ವದ್ಯಾತ್–ನಿರ್ದೋಷನಾದ ಶ್ರೀಹರಿಯು ದೆಸೆಯಿಂದ ಬ್ರಹ್ಮಾದಿಗಳು, ಪಿಪೃತಾ–ಸಂರಕ್ಷಿಸಲ್ಪಡುತ್ತಾ ಇರುತ್ತಾರೆ. ಏಕೆಂದರೆ ತಂದೆಯಾದವನಿಗೆ ಮಕ್ಕಳನ್ನು ಕಾಪಾಡುವುದು ಕರ್ತವ್ಯವಾದ್ದರಿಂದ ಎಂದು ತಾತ್ಪರ್ಯವು.

**ಸೂರ್ಯನ ಪರ:** ಸೂರ್ಯಃ–ಸೂರ್ಯನು, ಮಿತ್ರಸ್ಯ, ವರುಣಸ್ಯ–ಮಳೆಗರೆಯುವ ಪರ್ಜನ್ಯನಾಮಕನಾದ ಸೂರ್ಯನಿಗೆ ಅಂದರೆ ಮೇಘ ಮತ್ತು ಮೇಘಾಭಿಮಾನಿಯಾದ ದೇವತೆಗೆ, ಅಭಿ–ಅಭಿಮುಖವಾಗಿ, ಯತ್ ಅಸ್ಯ ರೂಪಂ ತನ್ನ ಯಾವ ರೂಪವುಂಟೋ, ತತ್ ಅದನ್ನು, ದ್ಯೋರುಪಸ್ಥೇ–ಅಂತರಿಕ್ಷಕ್ಕೆ ಸಮೀಪ ಸ್ಥಳದಲ್ಲಿ ಅಂದರೆ ಅಂತರಿಕ್ಷಮಧ್ಯದಲ್ಲಿ, ಕೃಣುತೇ–ಮಾಡುತ್ತಾನೆ. ಅನ್ಯತ್–ಮತ್ತೊಂದು ವಿಧವಾದ, ರುಶತ್–ಪ್ರಕಾಶವಾದ, ಪಾಜಃ–ರಕ್ಷಣೆ ಮಾಡುವ, ಅನ್ಯತ್–ಗ್ರಹಗಳಲ್ಲಿ ಉತ್ತಮನಾದ ಭಿನ್ನನಾದ, ಕೃಷ್ಣಂ–ಭೂಮಿಗೆ ಸುಖವನ್ನು ಉಂಟುಮಾಡುವ, ಅನಂ–ಸಂಚಾರರೂಪ ವಾದ, ಚೇಷ್ಟಾತ್ಮಕನಾದ, ತಂ–ಅಂತರಿಕ್ಷದಲ್ಲಿ ವ್ಯಾಪ್ತನಾದ ಸೂರ್ಯನನ್ನು, ಅದ್ಯಾ–ಈಗ, ಸೂರ್ಯಸ್ಯ ಉದಿತಾ–ಸೂರ್ಯೋದಯವಾದಾಗ, ನಿರಂಹಸಃ–ನಿರ್ದೋಷವಾದ, ಹರಿತಃ–ಕುದುರೆಗಳು, ಮತ್ತು ದೇವಾಃ–ದೇವತೆಗಳು, ಗಂಧರ್ವರು ಇತ್ಯಾದಿಗಳು, ರಥೇ–ರಥದಲ್ಲಿ, ಸಂಭರಂತಿ–ಧಾರಣ ಮಾಡಿರು-ತ್ತಾರೆ, ಅಂದರೆ, ಕೆಲವು ದೇವತೆಗಳೂ ರಾಕ್ಷಸರೂ ಕುದುರೆಗಳೂ ರಥವನ್ನು ಎಳೆಯುತ್ತಾರೆಂದು ತಾತ್ಪರ್ಯವು. ನಿರವದ್ಯಾತ್–ದೋಷವಿಲ್ಲದವನಾದ್ದರಿಂದ ಸೂರ್ಯನು, ಪಿಪೃತಾ–ಈ ದೃಶ್ಯಮಾನವಾದ ಪ್ರಪಂಚವನ್ನು ಕಾಪಾಡುತ್ತಾನೆ ಕಿರಣಗಳಿಂದ ಎಂದು ಅರ್ಥ. ॥ ೫ ॥ ಸೂಕ್ತ ಆಯಿತು.

ಈಗ ಸಾಮಾನಾಧಿಕರಣ್ಯ ಪ್ರಯುಕ್ತ ಉಂಟಾಗುವ ಸರ್ವಾತ್ಮಕತ್ವ-ಶಂಕಾವನ್ನು ಅಭೇದಶಂಕಾವನ್ನು ನಿರಾಸ ಮಾಡಲು ಪರಮಾತ್ಮನು ಸರ್ವ-ಶಬ್ದವಾಚ್ಯನೇ ಹೊರತು ಸರ್ವಾತ್ಮಕನಲ್ಲವೆಂದು ಹೇಳುವವನಾಗಿ ಉಪಾಸಕನು ತನಗೆ ಬಹುಮಾನವನ್ನು ಪ್ರಾರ್ಥಿಸುತ್ತಾನೆ ಶ್ರೀಹರಿಯನ್ನು ಕುರಿತು.

ಮಿತ್ರಃ-ರಕ್ಷಕನಾದವನೂ, ವರುಣಃ-ವರಜ್ಞಾನಾನಂದಾತ್ಮಕನಾದವನು ಅಥವಾ ದೈತ್ಯರ ಸುಖವನ್ನು ನಿರೋಧಿಸುವವನೂ ಆದ್ದರಿಂದ ಮಿತ್ರ ಮತ್ತು ವರುಣಶಬ್ದವಾಚ್ಯನಾದವನೂ, ಮಿತ್ರ ಮತ್ತು ವರುಣಾಂತರ್ಯಾಮಿಯಾದವನೂ, ಉತ-ಮತ್ತು, ಅದಿತಿಃ-ಚರಾಚರಾತ್ಮಕವಾದ ಜಗತ್ತನ್ನು ಪ್ರಳಯದಲ್ಲಿ ಭಕ್ಷಿಸುವವನೂ, ಸಿಂಧುಃ-ಸಮುದ್ರದೊಳಗೆ ಬಡವಾರೂಪದಿಂದ ಇರುವವನೂ, ಪೃಥಿವೀ-ಭುವಿಯೊಳಗೆ ಮಹತ್ತರವಾದ ರೂಪದಿಂದ ಅಂತರ್‌ನಿಯಾಮಕನೂ, ದ್ಯೌಃ-ಊರ್ಧ್ವಲೋಕಾಂತರ್ಯಾಮಿಯೂ ಆದ್ದರಿಂದ ಕ್ರಮವಾಗಿ ಅದಿತಿ, ಸಿಂಧು, ಪೃಥಿವೀ, ದ್ಯೌಃ ಎಂಬ ಶಬ್ದವಾಚ್ಯನಾದವನು ಉಪಲಕ್ಷಣಯಾ ಸರ್ವಶಬ್ದವಾಚ್ಯನಾದ ಮೇಲ್ಕಂಡ ದೇವತೆಗಳ ಒಳಗೆ ಇರುವ ತದೇತತ್-ಈ ಭಗವಂತನ ರೂಪವು, ನಃ-ನಮ್ಮಗಳನ್ನು, ಮಾ-ನನ್ನ ಸಂಬಂಧಿಯಾದ ಪೂಜಾವನ್ನು ಸ್ವೀಕರಿಸಿ, ಜ್ಞಾನವನ್ನು ಕೊಟ್ಟು, ಮಹಂತಾಂ-ಪೂಜಾ ಮಾಡಲಿ, ಅಂದರೆ ಇವರು ನನ್ನ ಭಕ್ತರು, ನನ್ನ ಉಪಾಸಕರು ಎಂದು ನಮ್ಮನ್ನು ಸನ್ಮಾನ ಮಾಡಲಿ, ಭಕ್ತತ್ವೇನ ಸ್ವೀಕಾರ ಮಾಡಲಿ ಎಂತ ಮುಖ್ಯ ತಾತ್ಪರ್ಯವು.

ಮೇಲ್ಕಂಡ ದೇವತೆಗಳು ನಮ್ಮನ್ನು ಭಗವದ್ಭಕ್ತರೆಂದು ಗೌರವವನ್ನು ಮಾಡಲಿ ಎಂತ ಅನ್ಯದೇವತಾಪರವಾದ ಅಮುಖ್ಯಾರ್ಥವು.

## ಓಂ ನಾಸತ್ಯಾಭ್ಯಾಂ ಬರ್ಹಿರಿವ ಪ್ರವೃಂಜೇ ಓಂ

**ಅರ್ಥ :** ನಾ-ಪುರುಷನಾದ ಶ್ರೀಹರಿಯು, ಸತ್ಯಾಭ್ಯಾಂ-ಈ ಸಂಧ್ಯಾ-ಕಾಲದಲ್ಲಿ ಮಾಡುವ ಗಾಯತ್ರೀ ಜಪ ಮತ್ತು ಉಪಸ್ಥಾನರೂಪವಾದ ಉಪಾಸನಾಗಳಿಂದ ನಮ್ಮ ಪಾಪಗಳನ್ನು, ಬರ್ಹಿರಿವ-ದರ್ಭೆ ಅಥವಾ ಅಗ್ನಿಯೋಪಾದಿಯಲ್ಲಿ, ಪ್ರವೃಂಜೇ-ಕತ್ತರಿಸಲಿ ಅಂದರೆ ಪರಿಹಾರ ಮಾಡಲಿ.

ಓಂ ಸವಿತಾ ಪಶ್ಚಾತಾತ್, ಸವಿತಾ ಪುರಸ್ತಾತ್, ಸವಿತೋ-
ತ್ತರಾತ್ತಾತ್, ಸವಿತಾ ಧರಾತ್ತಾತ್, ಸವಿತಾನಸ್ಸುವತು ಸರ್ವ-
ತಾತಿಂ ಸವಿತಾನೋ ರಾಸತಾಂ ದೀರ್ಘಮಾಯುಃ । ಓಂ ಶಾಂತಿಃ
ಶಾಂತಿಃ ಶಾಂತಿಃ ॥ ಚತುಸ್ಸಾಗರಪರ್ಯಂತಂ....ಅಭಿವಾದಯಾಮಿ ॥
ಎಂದು ಸೂರ್ಯೋಪಸ್ಥಾನವನ್ನು ಮಾಡಬೇಕು.

**ಪರಮಾತ್ಮನ ಪರ:** ನಃ–ನಮ್ಮಗಳಿಗೆ, ಸವಿತಾ—ಜಗತ್ಪ್ರಸವನಾದ ಶ್ರೀಹರಿಯು, ಪಶ್ಚಾತಾತ್-ಹಿಂದಿನ ಜನ್ಮಗಳಲ್ಲಿ ಇದ್ದಂತೆಯೇ, ಸವಿತಾ ಪುರಸ್ತಾತ್–ಸವಿತೃಶಬ್ದನಾದ ಶ್ರೀಹರಿಯು ಈ ಜನ್ಮದಲ್ಲಿಯೂ, ಉತ್ತರಾ-ತ್ತಾತ್-ಮುಂದೆ ಬರುವ ಜನ್ಮಗಳಲ್ಲಿಯೂ ಅಥವಾ ಮೇಲಿನ ಲೋಕಗಳಲ್ಲಿರುವಾಗಲೂ, ಅಧರಾತ್ತಾತ್-ಕೆಳಗಿನ ಲೋಕ ಅಥವಾ ಭೂಮಿಯ ಮೇಲಿರುವಾಗಲೂ, ಸರ್ವತಾ–ಯಾವಾಗಲೂ ಎಲ್ಲಾ ಜನ್ಮ ಮತ್ತು ಅವಸ್ಥೆಗಳಲ್ಲೂ, ತಿಂ-ಸ್ವರೂಪಸುಖವನ್ನು, ಸುವತು–ಉಂಟುಮಾಡಲಿ. ನಃ–ನಮ್ಮಗಳಿಗೆ, ಸವಿತಾ–ಪರಮಾತ್ಮನು, ದೀರ್ಘಮಾಯುಃ-ಶಾಶ್ವತವಾದ ಆಯುಸ್ಸನ್ನು, ಅಂದರೆ ಮೋಕ್ಷವನ್ನು, ರಾಸತಾಂ–ಕೊಡಲಿ ಎಂದು ಅರ್ಥ.

**ಸೂರ್ಯನ ಪರ:** ಸೂರ್ಯನು ಹಿಂದೆ, ಮುಂಭಾಗದಲ್ಲಿ, ಮೇಲುಭಾಗದಲ್ಲಿ, ಕೆಳಭಾಗದಲ್ಲಿ, ಸರ್ವತಾ–ಸರ್ವತ್ರದಲ್ಲಿ ರಕ್ಷಕನಾಗಿದ್ದು, ತಿಂ–ಸುಖವನ್ನು ದೀರ್ಘಾಯುರಾರೋಗ್ಯವನ್ನು ಕೊಡಲಿ ಎಂತ ಅರ್ಥ.

ನಂತರ ಕುಳಿತು ಪ್ರಾತಃಸಂಧ್ಯಾದಲ್ಲಿ ಹೇಳಿರುವಂತೆ ಆಸನ ಪ್ರಾಣಾಯಾಮ ಪುರಸ್ಸರ ಗಾಯತ್ರೀ ಜಪ ಮಾಡಬೇಕು. ರಕ್ತವರ್ಣಾ ಎಂಬುದಕ್ಕೆ ಬದಲಾಗಿ ಶ್ವೇತವರ್ಣಾ ಎಂತ ಹೇಳಬೇಕು. ಜಪ ಮುಗಿಸಿ ಶ್ರೀಹರಿಗೆ ಅರ್ಪಿಸಿ ನಂತರ ಯಸ್ಯ ಸ್ಮೃತ್ಯಾ ಚ .... ಭವತು ॥ ಶ್ರೀಕೃಷ್ಣಾರ್ಪಣಮಸ್ತು ಎಂತ ನೀರನ್ನು ಬಿಟ್ಟು ಆಚಮನವನ್ನು ಮಾಡಿ ನಾಮತ್ರಯ ಜಪಿಸಿ ಕಾಯೇನ ವಾಚಾ ... .. ........ಸಮರ್ಪಯಾಮಿ ಎಂತ ಅರ್ಪಣ ಮಾಡಬೇಕು

ಇಲ್ಲಿಗೆ ಋಗ್ವೇದೀ ಮಾಧ್ಯಾಹ್ನಿಕ ಸಂಧ್ಯಾವಂದನಾರ್ಥ ಸಮಾಪ್ತಿಯಾಯಿತು.

ಶ್ರೀ ಭಾರತೀರಮಣಮುಖ್ಯಪ್ರಾಣಾಂತರ್ಗತ
ಶ್ರೀಲಕ್ಷ್ಮೀನೃಸಿಂಹಾರ್ಪಣಮಸ್ತು

## ಅಥ ಯಜುರ್ವೇದ ಮಾಧ್ಯಾಹ್ನಿಕಸಂಧ್ಯಾ ಪ್ರಾರಂಭಃ

ಆಚಮ್ಯ, ಪ್ರಾಣಾನಾಯಮ್ಯ, ಸಂಕಲ್ಪ್ಯ, ಶುಭತಿಥೌ ಭಾರತೀ.... ಪ್ರೀತ್ಯರ್ಥಂ ಮಾಧ್ಯಾಹ್ನಿಕಸಂಧ್ಯಾಮುಪಾಸಿಷ್ಯೇ ॥ ಇತಿ ಸಂಕಲ್ಪಂ ಕೃತ್ವಾ॥

೧) **ಆಪೋ ಹಿ ಷ್ಠಾ........ಚ ನಃ** ॥ (ಇತಿ ಮಂತ್ರೇಣ ಮಾರ್ಜನಂ ಕುರ್ಯಾತ್) (ನಂತರ ಹಸ್ತದಲ್ಲಿ ನೀರನ್ನು ಹಾಕಿಕೊಂಡು) **ಓಂ ಆಪಃ ಪುನಂತು ಪೃಥಿವೀಂ**...........ಪ್ರತಿಗ್ರಹಗ್ಂ ಸ್ವಾಹಾ ॥ ಎಂದು ಅಭಿಮಂತ್ರಿಸಿ ನೀರನ್ನು ಪಾನ ಮಾಡಬೇಕು. (ಈ ಮಂತ್ರದ ಅರ್ಥವನ್ನು ಪುಟ ೧೩೧ರಲ್ಲಿ ಕೊಡಲಾಗಿದೆ.) ನಂತರ ಆಚಮನವನ್ನು ಮಾಡತಕ್ಕದ್ದು.

## ಪುನರ್ಮಾರ್ಜನ ಮಂತ್ರಃ

೨) **ದಧಿಕ್ರಾವ್ಣೋ........ತಾರಿಷತ್, ಆಪೋ ಹಿ ಷ್ಠಾ............ ಚ ನಃ ॥ ಹಿರಣ್ಯವರ್ಣಾ ಶುಚಯಃ ಪಾವಕಾಃ........ಆಪಶ್ಶುಂಧಂತು ಮೈನಸಃ** ॥ (ಆಚಮ್ಯ, ಪ್ರಾಣಾಯಾಮಂ ಕೃತ್ವಾ) **ಪೂರ್ವೋಕ್ತ........ ಕರಿಷ್ಯೇ** ॥

## ಅಥ ಅರ್ಘ್ಯಪ್ರದಾನಮಂತ್ರಃ

"**ಹಗ್ಂಸಃ ಶುಚಿಷತ್**.......... ಬೃಹತ್" ಎಂಬ ಮಂತ್ರದಿಂದ ಒಂದು ಅರ್ಘ್ಯವನ್ನೂ, ಗಾಯತ್ರಿಯಿಂದ ಎರಡು ಅರ್ಘ್ಯಗಳನ್ನೂ ಕೊಡತಕ್ಕದ್ದು.

**ಏಹಿ ತ್ವಂ ದೇವಿ ಶೀಘ್ರಂ ವೈ ಗಾಯತ್ರೀ ಬ್ರಹ್ಮರೂಪಿಣೀ ।**
**ಜಪಾನುಷ್ಠಾನಸಿದ್ಧ್ಯರ್ಥಂ ವಿಶಸ್ವ ಹೃದಯಂ ಮಮ ॥**

ಎಂದು ಹೇಳಿ ಪ್ರದಕ್ಷಿಣಾಕಾರ ತಿರುಗಿ ಓಂ ಅಸಾವಾದಿತ್ಯೋ ಬ್ರಹ್ಮ ಎಂಬ ಮಂತ್ರದಿಂದ ನೀರಿನಿಂದ ಸುತ್ತುಗಟ್ಟಬೇಕು. ಆಚಮ್ಯ, ಪ್ರಾತಃಸಂಧ್ಯಾವತ್ ತರ್ಪಣಾನಿ ಕುರ್ಯಾತ್ ॥

## ಅಥ ಸೂರ್ಯೋಪಸ್ಥಾನಮಂತ್ರಃ

**ಹರಿಃ ಓಂ** ॥

೧) **ಆಸತ್ಯೇನ ರಜಸಾ ವರ್ತಮಾನೋ**
**ನಿವೇಶಯನ್ನಮೃತಂ ಮರ್ತ್ಯಂ ಚ ।**

ಹಿರಣ್ಯಯೇನ ಸವಿತಾರಥೇನಾ-
ದೇವೋ ಯಾತಿ ಭುವನಾನಿ ಪಶ್ಯನ್ ॥
(ನಿಂತು ಕೈಜೋಡಿಸಿಕ್ಕೊಂಡು ಹೇಳಬೇಕು.)

೨) ಓಂ ಉದ್ವಯಂತಮಸಸ್ಪರಿ ಪಶ್ಯಂತೋ ಜ್ಯೋತಿರುತ್ತಮವ್ । ದೇವಂ ದೇವತ್ರಾಸೂರ್ಯಮ—ಗನ್ಮಜ್ಯೋತಿರುತ್ತಮಮ್ ॥

೩) ಓಂ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಮ್ ॥ (ಬಲ ಮತ್ತು ಎಡದ ಹಸ್ತಗಳಿಂದ ಕ್ರಮವಾಗಿ ಬಲದ ಮತ್ತು ಎಡದ ಭುಜಗಳನ್ನು ಸ್ಪರ್ಶ ಮಾಡಿಕ್ಕೊಂಡು ಹೇಳಬೇಕು.)

೪) ಓಂ ಚಿತ್ರಂ ದೇವಾನಾಂ ಉದಗಾದನೀಕಂ । ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಪ್ರಾದ್ಯಾನಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥ (ಇತಿ ಹೃದಯಂ ಸ್ಪಷ್ಟ್ವಾ ಜಪೇತ್).

ಅರ್ಥ : ೧) ದೇವಃ–ಕ್ರೀಡಾ, ಕಾಂತ್ಯಾದಿ ಗುಣಗಳಿಂದ ಯುಕ್ತನಾದ, ಸವಿತಾ–ಸೂರ್ಯಾಂತರ್ಗತನಾದ, ಜಗತ್ಪ್ರಸವಕರ್ತನಾದ ಶ್ರೀಹರಿಯು, ರಜಸಾ–(ಸಪ್ತಮ್ಯರ್ಥೇ ತೃತೀಯಾ) ರಂಜನಾತ್ಮಕವಾದ, ರಜೋಮಂಡಲೇ– ಅಂದರೆ ಅಂತರಿಕ್ಷದಲ್ಲಿ, ಸತ್ಯೇನ–"ಸರ್ವದೇವೋತ್ತಮತ್ವೇನ ಸತ್ಯೋ ವಾಯುರುದೀರಿತಃ" ಇತಿ ಪ್ರಮಾಣಾನುಸಾರ ಸರ್ವದೇವತಾವರ್ಗದಲ್ಲಿ ಉತ್ತಮನಾದ ವಾಯುದೇವರಿಂದ, ವರ್ತಮಾನಃ–ಕೂಡಿದವನಾಗಿ ಅಂದರೆ ಸಹಿತನಾಗಿ, ಅಮೃತಂ–ಮರಣರಹಿತರಾದ ದೇವತೆಗಳನ್ನೂ, ಮರ್ತ್ಯಂ– ಮರಣಶೀಲರಾದ ಮನುಷ್ಯ ಮುಂತಾದ ಪ್ರಾಣಿವರ್ಗವನ್ನೂ, ನಿವೇಶಯನ್– ಅವರವರ ಸ್ಥಾನಗಳಲ್ಲಿ ನಿಲ್ಲಿಸತಕ್ಕವನಾಗಿ ಅಥವಾ ಒಳಗೆ ಪ್ರವೇಶಿಸಿ ಜೀವ- ಪ್ರದನಾಗಿ, ಭುವನಾನಿ–ಲೋಕ ಮತ್ತು ಜನಗಳನ್ನು, ಪಶ್ಯನ್–ಕೃಪಾದೃಷ್ಟಿಯಿಂದ ನೋಡತಕ್ಕವನಾಗಿ, ಹಿರಣ್ಯಯೇನ, ಭಂಗಾರಮಯವಾದ, ರಥೇನ- ರಥದಲ್ಲಿ ಅಥವಾ ಸುಖಮಯವಾದ ಜೀವರ ದೇಹಾಖ್ಯರಥದಲ್ಲಿ ಕೂತು, ಆಯಾತಿ–ಬರುತ್ತಾನೆ ವ್ಯಕ್ತನಾಗುತ್ತಾನೆ.

೨) ವಯಂ–ನಾವು, ತಮಸಃ-ಕತ್ತಲೆ ಅಥವಾ ರಾಹುಮಂಡಲದ, ಉತ್–ಮೇಲುಭಾಗದಲ್ಲಿ, ವರ್ತಮಾನಂ–ಇರತಕ್ಕ, ಉತ್ತರಮ್–ಉತ್ತಮವಾದ, ಜ್ಯೋತಿಃ–ತೇಜಃಪುಂಜವಾದ ಸೂರ್ಯಮಂಡಲವನ್ನೂ ತದಂತರ್ಗತ ಪ್ರಕಾಶಸ್ವರೂಪನಾದ ನಾರಾಯಣನನ್ನು ಕ್ರಮವಾಗಿ, ಪರಿಪಶ್ಯಂತಃ–ನೋಡತಕ್ಕವರಾಗಿ ಶಾಸ್ತ್ರಗಳಿಂದ ತಿಳಿಯತಕ್ಕವರಾಗಿ, ದೇವತ್ರಾ–ಸಮಸ್ತ ದೇವತೆಗಳ ಮಧ್ಯದಲ್ಲಿ, ಉತ್ತಮಂ–ಉತ್ಕೃಷ್ಟನಾದ, ಜ್ಯೋತಿಃ–ಜ್ಯೋತಿಸ್ವರೂಪನಾದ, ಸೂರ್ಯಂ–ಜ್ಞಾನಿಗಮ್ಯನಾದ, ದೇವಂ–ದೇವರನ್ನು ಅಂದರೆ ಗುಣಪೂರ್ಣನಾದ ಪರಬ್ರಹ್ಮನನ್ನು, ಅಗನ್ಮ–ಹೊಂದುತ್ತೇವೆ "ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ" ಎಂಬ ಗೀತೋಕ್ತಿಯಿಂದ ಸೂರ್ಯ, ಚಂದ್ರ, ಅಗ್ನಿಗಳಲ್ಲಿ ತೇಜಃಪ್ರದನಾಗಿ ಇರುವವನು ನಾನು ಎಂತ ಕೃಷ್ಣ ಹೇಳಿದ್ದರಿಂದ ಸೂರ್ಯಾಂತರ್ಗತ ಶ್ರೀಹರಿಯನ್ನು ಉಪಾಸನಾ ಮಾಡಿ ಆತನನ್ನೇ ಹೊಂದುತ್ತೇವೆಂಬ ಅಂಶದಲ್ಲಿ ಸಂಶಯವಿಲ್ಲ.

೩) ಕೇತವಃ–ಪ್ರಜ್ಞಾಪಕರಾದ ಅಂದರೆ ಭಗವತ್ತತ್ತ್ವ ಉಪದೇಷ್ಟಕರಾದ ಭಗವದ್ಭಕ್ತರುಗಳು, ಜಾತವೇದಸಂ–ವ್ಯಕ್ತವಾದ ವೇದಾದಿ ಸಮೂಹವನ್ನೂ, ಹುಟ್ಟಿದ ಸಕಲ ಜಗತ್ತನ್ನೂ ತಿಳಿದಿರತಕ್ಕವನಾದ್ದರಿಂದ, ಸರ್ವಜ್ಞನೆಂದು, ತಂ–ಪ್ರಸಿದ್ಧನಾದ, ಸೂರ್ಯಂ–ಜ್ಞಾನಿಗಮ್ಯನಾದ ಸೂರ್ಯನನ್ನು ಅಂದರೆ ಶ್ರೀಹರಿಯನ್ನು, ವಿಶ್ವಾಯ–ಸರ್ವ ಜನಗಳಿಗೆ, ದೃಶೇ–ಮೋಕ್ಷಸಾಧನೀಭೂತವಾದ ಜ್ಞಾನವನ್ನು ಹುಟ್ಟಿಸುವುದಕ್ಕಾಗಿ, ಉದ್ವಹಂತ–ಉತ್ಕೃಷ್ಟತ್ವೇನ ಉಪದೇಶ ಮಾಡುತ್ತಾರೆ, ಎಂದು ಮುಖ್ಯಾರ್ಥವು. ಕೇತವಃ–ಸೂರ್ಯರಶ್ಮಿಗಳು ಪ್ರಸಿದ್ಧನಾದ, ಯಥಾಯೋಗ್ಯವಾಗಿ, ಸರ್ವಜ್ಞನಾದ ಕಣ್ಣಿಗೆ ಕಾಣುವ ಸೂರ್ಯನನ್ನು ಜಗತ್ತಿನ ಜ್ಞಾನಕ್ಕೋಸ್ಕರವಾಗಿ, ಉದ್ವಹಂತಿ ಉ–ಮೇಲಕ್ಕೆ ಒಯ್ಯುತ್ತವೆ, ಅಂದರೆ ಸೂರ್ಯನನ್ನು ಜಗತ್ತಿಗೆ ವ್ಯಕ್ತಗೊಳಿಸುತ್ತವೆ, ಉ–ನಿಶ್ಚಯವು.

೪) ಆದೌ–ಮೊದಲು, ಚಿತ್ರಂ–ವಿವಿಧವರ್ಣೋಪೇತವಾದ, ದೇವಾನಾಂ–ದೇವತೆಗಳ ಅಥವಾ ರಶ್ಮಿಗಳ, ಅನೀಕಂ–ಸಮೂಹವು, ಉದಗಾತ್–ಉದಯವಾಗುತ್ತದೆ. ಅನಂತರ ಸೂರ್ಯನು ಅಥವಾ ಪರಮಾತ್ಮನು ಕಾಣಲ್ಪಡು

ತ್ತಾನೆ. ಅಂದರೆ ರಶ್ಮಿದರ್ಶನಾನಂತರ ಸೂರ್ಯನೂ ಭಗವದ್ವ್ಯಕ್ತರಾದ ದೇವತೆಗಳ ದರ್ಶನಾನಂತರ ಶ್ರೀಹರಿಯೂ ವ್ಯಕ್ತನಾಗುತ್ತಾನೆಂದು ತಾತ್ಪರ್ಯ. ಮಿತ್ರಸ್ಯ-ಋಷಿತ್ವೇನ ಸರ್ವಮಿತ್ರರಾದ ನಾರದರಿಗೂ, ಅಥವಾ ಸೂರ್ಯನಿಗೂ, ವರುಣಸ್ಯ-ವರುಣದೇವರಿಗೂ, ಅಗ್ನೇಃ-ಅಗ್ನಿದೇವರಿಗೂ, ಚಕ್ಷುಃ-ಜ್ಞಾನಪ್ರದನಾದ ಉಕ್ತಲಕ್ಷಣಯುತ ಸರ್ವರಿಗೂ ಜ್ಞಾನಪ್ರದನಾದ, ಸೂರ್ಯಃ-ಸವಿತೃಮಂಡಲಮಧ್ಯವರ್ತೀ ನಾರಾಯಣನು, ಜಗತಃ-ಚರವಾದ, ತಸ್ಥುಷಶ್ಚ-ಅಚರವಾದ ಪ್ರಪಂಚಕ್ಕೆ, ಆತ್ಮಾ-ಸ್ವಾಮಿಯಾಗಿರುವವನು, ದ್ಯಾವಾಪೃಥಿವೀ ಅಂತರಿಕ್ಷಂ-ಸ್ವರ್ಗ, ಭೂಮಿ, ಅಂತರಿಕ್ಷವನ್ನು ತನ್ನ ತೇಜಸ್ಸಿನಿಂದ, ಆಪ್ರಾಃ-ವ್ಯಾಪಿಸಿರತಕ್ಕವನು ಎಂದು ಅಭಿಪ್ರಾಯವು. (ನಂತರ ಸೂರ್ಯನನ್ನು ನೋಡಬೇಕು.)

-

### ಅಥ ಸೂರ್ಯದರ್ಶನಮಂತ್ರಃ

ಓಂ ತಚ್ಚಕ್ಷುರ್ದೇವಹಿತಂ ಪುರಸ್ತಾತ್ । ಶುಕ್ರಮುಚ್ಚರತ್ । ಪಶ್ಯೇಮ ಶರದಃಶತಂ । ಜೀವೇಮ ಶರದಃಶತಂ । ನಂದಾಮ ಶರದಃಶತಂ । ಮೋದಾಮ ಶರದಃಶತಂ । ಭವಾಮ ಶರದಃಶತಂ । ಶೃಣುವಾಮ ಶರದಃಶತಂ । ಪ್ರಬ್ರವಾಮ ಶರದಃಶತಂ । ಅಜಿತಾಃಸ್ಯಾಮ ಶರದಃಶತಂ । ಜ್ಯೋಕ್ಚ ಸೂರ್ಯಂ ದೃಶೇ ॥

ಯ ಉದಗಾನ್ಮಹತೋಽರ್ಣವಾದ್ವಿಭ್ರಾಜಮಾನಃ ಸಲಿಲಸ್ಯ ಮಧ್ಯಾತ್। ಸಮಾಮೃಷಭೋ ಲೋಹಿತಾಕ್ಷಃ ಸೂರ್ಯೋವಿಪಶ್ಚಿನ್ಮನಸಾ ಪುನಾತು ॥

ಯಸ್ಮಿನ್ ಭೂತಂಚ ಭವ್ಯಂಚ ಸರ್ವೇಲೋಕಾಸ್ಸಮಾಹಿತಾಃ । ತೇನ ಗೃಹ್ಣಾಮಿ ತ್ವಾಮಹಂ । ಮಯ್ಯಂ ಗೃಹ್ಣಾಮಿ ತ್ವಾಮಹಂ । ಪ್ರಜಾಪತಿ ನಾ ತ್ವಾಮಹ್ಯಂ ಗೃಹ್ಣಾಮ್ಯಸೌ ॥

ಸಂಧ್ಯಾಯೈ ನಮಃ........ನಮೋ ಬ್ರಹ್ಮಣ್ಯ ದೇವಾಯ............ ಅಭಿವಾದಯೇ, ಅಭಿವಾದಯಾಮಿ ॥ (ಇತ್ಯಂತಂ ಪಠಿತ್ವಾ)

**ಅಪಸರ್ಪಂತ್ವಿತ್ಯಸ್ಯ ........ಗಾಯತ್ರೀಮಂತ್ರಜಪಸ್ಸಂಪೂರ್ಣಃ ॥**

**ಯಸ್ಯ ಸ್ಮೃತ್ಯಾಚ.................... ಪರಿಪೂರ್ಣಂ ತದಸ್ತು ನೇ ॥**

**ಅನೇನ ಮಾಧ್ಯಾಹ್ನಿಕ ಸಂಧ್ಯಾವಂದನೇನ .... ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋ ಭವತುಃ ॥ ಶ್ರೀಕೃಷ್ಣಾರ್ಪಣಮಸ್ತು ॥**

ಆಚಮ್ಯ, ನಾಮತ್ರಯ ಮಂತ್ರಂ ಪಠಿತ್ವಾ—

**ಕಾಯೇನ ವಾಚಾ .... ನಾರಾಯಣಾಯೇತಿ ಸಮರ್ಪಯಾಮಿ ॥**

ಇತಿ ಮಾಧ್ಯಾಹ್ನಿಕ ಯಜುರ್ವೇದೀಯ ಸಂಧ್ಯಾವಂದನಮಂತ್ರ: ಸಂಪೂರ್ಣಃ

**ಅರ್ಥ :** ಯತ್–ಯಾವುದು, ದೇವಹಿತಂ–ದೇವತೆಗಳಿಗೂ ಮತ್ತು ಸಾತ್ವಿಕ ಸ್ವಭಾವದ ಜೀವರಿಗೂ ಸುಖಸಾಧನವಾದದ್ದೋ, ಶುಕ್ರಂ–ನಿರ್ಮಲ ವಾದದ್ದೋ, ತತ್–ಅಂಥಾ, ಚಕ್ಷುः–ಚಕ್ಷುರಭಿಮಾನಿ ಸೂರ್ಯಾಂತ-ರ್ಯಾಮಿಯಾದ ಪರಮಾತ್ಮನ ಸ್ವರೂಪವು, ಪುರಸ್ತಾತ್–ಉಷಃಕಾಲದಲ್ಲಿ, ಉಚ್ಚರತ್–ಸೂರ್ಯನಿಂದ ಸಹಿತವಾಗಿ ಮೇಲಕ್ಕೆ ಬರುತ್ತದೆ ಅಥವಾ ಪುರಸ್ತಾತ್–ಅನಾದಿಕಾಲದಿಂದಲೂ, ಉಚ್ಚರತ್–ಉತ್ತಮವಾಗಿಯೇ ಇರುತ್ತದೆ. ಅಂಥಾ ಸೂರ್ಯಮಂಡಲವನ್ನೂ ತದಂತರ್ಗತ ಶ್ರೀಹರಿಯನ್ನು, ಶರದಃ ಶತಂ–ನೂರು ವರ್ಷಗಳು, ಪಶ್ಯೇಮ–ನೋಡೋಣ. ದೇವನ್ನು ನೋಡುವ ಸಲುವಾಗಿಯೇ, ಶರದಃ ಶತಂ ಜೀವೇಮ–ನೂರು ವರ್ಷಗಳು ಬದುಕೋಣ, ಬದುಕಿರುವವರೆಗೂ, ಶರದಃ ಶತಂ–ನೂರು ವರ್ಷಗಳು, ನಂದಾಮ–ಜ್ಞಾನ ಮತ್ತು ಆನಂದವೃದ್ಧಿಯನ್ನು ಹೊಂದೋಣ. ಶರದಃ ಶತಂ ಮೋದಾಮ–ದೇಹತ್ಯಾಗಾನಂತರ ಬಹುಕಾಲ ಶಾಶ್ವತವಾಗಿ ಸಂತೋಷ ಪಡೋಣ, ಭವಾಮ ಶರದಃ ಶತಂ–ಶಾಶ್ವತವಾಗಿ ನಮ್ಮ ಸ್ಥಳವನ್ನು ಹೊಂದೋಣ, ವೈಕುಂಠಾದಿ ನಮ್ಮ ಸ್ಥಳವನ್ನು ಪಡೆಯಲು ನೂರು ವರ್ಷ ಅಥವಾ ಬದುಕಿರುವವರೆಗೂ ಗುರುಕುಲದಲ್ಲಿ ಭವಾಮ–ವಾಸಮಾಡೋಣ, ಗುರುಗಳಲ್ಲಿ ವಾಸಮಾಡುವಾಗ, ಶರದಃ ಶತಂ–ನೂರು ವರ್ಷವೂ, ಶೃಣವಾಮ–ಸಚ್ಛಾಸ್ತ್ರವನ್ನು ಕೇಳೋಣ. ಪ್ರಬ್ರವಾಮ ಶರದಃ ಶತಂ–ಗುರುಗಳ ಅನುಗ್ರಹದಿಂದ ಬಹುಕಾಲ ಶಿಷ್ಯರಿಗೆ ಶಾಸ್ತ್ರಾಧ್ಯಯನವನ್ನು ಹೇಳೋಣ.

ಶರದಃ ಶತಂ ಅಜಿತಾಶ್ಯಾಮ—ನೂರು ವರ್ಷವೂ ಪಾಪಗಳಿಂದ, ಅಜಿತಾ-ಅಜೇಯರು, ಸ್ಯಾಮ—ಆಗೋಣ, ಅಂದರೆ ಭಗವದನುಗ್ರಹದಿಂದ ಪಾಪಲೇಪ ವಿಲ್ಲದವರಾಗುತ್ತೇವೆ. ಅಥ ಚ-ಅನಂತರದಲ್ಲಿ, ಜೋಕ್-ಸರ್ವದಾ, ಸೂರ್ಯಂ-ಬ್ರಹ್ಮಾದಿಗಳಿಂದ ಗಮ್ಯನಾದ ಶ್ರೀಹರಿಯನ್ನು, ದೃಶೇ-ಅಪರೋಕ್ಷತಯಾ ನೋಡೋಣ. ಭಗವಂತನು ಎಲ್ಲಿ ಇರುತ್ತಾನೆ, ಎಲ್ಲಿ ಅವನನ್ನು ನೋಡ ಬೇಕು ಎಂದರೆ ಅವನು ಇರುವ ಸ್ಥಳವನ್ನು ಹೇಳುತ್ತಾರೆ—

ಯಃ-ಯಾವ ಪರಮಾತ್ಮನು, ಸಲಿಲಸ್ಯ ಮಧ್ಯಾತ್-ಕ್ಷೀರಸಮುದ್ರ ಮಧ್ಯದಲ್ಲಿ ಶ್ವೇತದ್ವೀಪದಲ್ಲಿ, ವಿಭ್ರಾಜಮಾನಃ-ಪ್ರಕಾಶಮಾನವಾಗಿರು ತ್ತಾನೆಯೋ, ಸಃ-ಅವನೇ, ಮಹತಃ ಅರ್ಣವಾತ್-ಮಹಾ ಸಮುದ್ರದ ದೆಸೆಯಿಂದ ಭಕ್ತರುಗಳಿಗೆ ಅಪರೋಕ್ಷವನ್ನುಂಟುಮಾಡಲು ಭರತಖಂಡವನ್ನು ಕುರಿತು, ಉದಗಾತ್-ಉದಯಿಸತಕ್ಕವನೂ ಆಗಿರುತ್ತಾನೆ. ಅಂದರೆ ಭರತ-ಖಂಡದಲ್ಲಿ ಹುಟ್ಟಿ ಸಾಧನ ಮಾಡುವವರಿಗೇನೇ ಅಪರೋಕ್ಷವಾಗುತ್ತದೆ, ಇಲ್ಲ ವಾದರೆ ಇಲ್ಲವೆಂದು ಮುಖ್ಯತಾತ್ಪರ್ಯ. ಯೋ ಭಗವಾನ್-ಯಾವ ಪರ-ಮಾತ್ಮನು, ರೋಹಿತಾಕ್ಷಃ-ಕೆಂಪಾದ ಪಾಣ್ಯಾದಿ ಇಂದ್ರಿಯಗಳುಳ್ಳವನೋ, ಉಪಲಕ್ಷಣಯಾ ಅನಂತಲಕ್ಷಣೋಪೇತನೋ, ಸಃ-ಅಂಥಾ, ವೃಷಭಃ-ಭಕ್ತರಭೀಷ್ಟದಾತನಾದ, ವಿಪಶ್ಚಿತ್-ಜ್ಞಾನಿಯಾದ, ಸೂರ್ಯಃ-ಪರ-ಮಾತ್ಮನು, ಮಾ-ನನ್ನನ್ನು, ಮನಸಾ-ಮನಸ್ಸಿನಿಂದ ಅಥವಾ ಇಚ್ಛೆ ಯಿಂದ, ಪುನಾತು-ಪವಿತ್ರನನ್ನಾಗಿ ಮಾಡಲಿ, ಅಂದರೆ ತನ್ನ ಅಪರೋಕ್ಷ ಜ್ಞಾನವನ್ನು ಕೊಟ್ಟು ಬಂಧನದಿಂದ ಮುಕ್ತನಾಗುವಂತೆ ಅನುಗ್ರಹಿಸಲಿ.

ಯಸ್ಮಿನ್-ಯಾವನಲ್ಲಿ, ಭೂತಂ ಚ ಭವ್ಯಂ ಚ-ಹಿಂದೆ ಇದ್ದ, ಮುಂದೆ ಆಗುವ, ಈಗ ಇರುವ, ಸರ್ವೇ ಲೋಕಾಃ-ಸಮಸ್ತ ಪ್ರಪಂಚವೂ, ಸಮಾ-ಹಿತಾಃ-ಆಶ್ರಯಿಸಿಕೊಂಡಿರುತ್ತವೆಯೋ, ಅಥವಾ ಲೋಕಾಃ-ಜ್ಞಾನಿಗಳು ವಾಸ ಮಾಡಿಕೊಂಡು ಇರುತ್ತಾರೆಯೋ, ತತ್ರ-ಅಲ್ಲಿಗೆ, ಮಾಂ ನಯ ಇತಿ ಶೇಷಃ-ನನ್ನನ್ನು ಹೊಂದಿಸು ಎಂದು ಅರ್ಥ. ಅಥವಾ ತೇನ ಪ್ರಜಾಪತಿನಾ-ಅಂಥಾ ಸರ್ವೋತ್ತಮನಾದ ಶ್ರೀಹರಿಯ ಅನುಗ್ರಹದಿಂದ, ಅಹಂ-ನಾನು, ತ್ವಾಂ-ನಿನ್ನನ್ನು, ಗೃಹ್ಣಾಮಿ-ಸ್ತೋತ್ರ ಮಾಡಲು ಸ್ವೀಕರಿಸುತ್ತೇನೆ.

ನಿನ್ನನ್ನು ನಾನು ಸ್ತೋತ್ರ ಮಾಡುವುದು ನಿನಗೆ ಪ್ರಯೋಜನವಾಗಲಿ ಎಂತ ಅಲ್ಲ, ಮಹ್ಯಂ-ನನ್ನ ಪ್ರಯೋಜನಕ್ಕಾಗಿಯೇ, ತ್ವಾಂ-ನಿನ್ನನ್ನು, ಅಹಂ ಗೃಹ್ಣಾಮಿ-ನಾನು ಸ್ವೀಕರಿಸುತ್ತೇನೆ. ಅಸೌ-ನಿನ್ನಿಂದ ಗೃಹೀತನಾದ, ಅಹಂ-ನಾನು, ಮಹ್ಯಂ-ನನ್ನ ಪ್ರಯೋಜನಕ್ಕಾಗಿಯೇ, ತ್ವಾಂ-ನಿನ್ನನ್ನು, ಗೃಹ್ಣಾಮಿ-ಸ್ವೀಕರಿಸುತ್ತೇನೆ. ಪೂರ್ವೋಕ್ತವಾದ ಅರ್ಥ ದೃಢೀಕರಣಕ್ಕಾಗಿ ದ್ವಿರುಕ್ತಿಯು ಹೇಳಲ್ಪಟ್ಟಿರುತ್ತೆ.

ಉಳಿದ ಮಂತ್ರದ ಅರ್ಥಭಾಗವನ್ನು ಋಗ್ವೇದದ ಸಂಧ್ಯಾವಂದನದ ಪ್ರಾತಃಸಂಧ್ಯಾ ಗಾಯತ್ರೀಮಂತ್ರಜಪಾವಸರದಲ್ಲಿ ಬರೆಯಲ್ಪಟ್ಟಿರುತ್ತೆ. ದಯವಿಟ್ಟು ಅಲ್ಲಿ ನೋಡಬೇಕು. ಇಲ್ಲಿಗೆ ಯಜುರ್ವೇದ ಮಾಧ್ಯಾಹ್ನಿಕ ಮಾಧ್ಯಾಹ್ನಿಕ ಸಂಧ್ಯಾವಂದನದ ಅರ್ಥವು ಸಮಾಪ್ತಿಯಾಗಿರುತ್ತೆ.

ಹರಯೇ ನಮಃ

ಶ್ರೀಕೃಷ್ಣಾರ್ಪಣಮಸ್ತು